ಪ್ರಥಮ ವಿಶ್ವ ಕನ್ನಡ ಸಮ್ಮೇಳನ ಸಾಹಿತ್ಯ ಮಾಲೆ 68

ವಿಚಾರ ಸಾಹಿತ್ಯ

# ಬೇಟೆಯ ನೆನಪುಗಳು

ಕೆದಂಬಾಡಿ ಜತ್ತಪ್ಪ ರೈ





ಕರ್ನಾಟಕ ಸರ್ಕಾರ 1983

ಶ್ರೀ ಕಾಶೀ ಜಗದ್ಗುರು ವಿಶ್ವಾರಾಧ್ಯ ಜ್ಞಾನಸಿಂಹಾಸನದ
ಜ್ಞಾನ ಮಂದಿರಕ್ಕೆ ದಾವಣಗೆರೆ ಶ್ರೀ|| ಬಿ. ಎಂ. ಚನ್ನಬಸಯ್ಯನವರು
ಸಮರ್ಪಿಸಿದ್ದು.
ತಾ. 20-1-1988 ನೇ ಬುಧವಾರ

# ಬೇಟೆಯ ನೆನಪುಗಳು

ಕೆದಂಬಾಡಿ ಜತ್ತಪ್ಪ ರೈ



ವಿಶ್ವ ಕನ್ನಡ ಸಮ್ಮೇಳನ
14-3 ಎ, ನೃಪತುಂಗ ರಸ್ತೆ
ಬೆಂಗಳೂರು - 560 002

BETEYA NENAPUGALU a Memories of Hunting-
in Kannada by Kedambady Jathappa Rai
published by K. Jayacharya, K.A.S.,
Additional Director, Directorate of Kannada
and Culture (Viswa Kannada Sammelana)
14/3 A, Nrupathunga Road, Bangalore – 560 002

Pages 152 + iv 1983 – 5000 Copies





THIRD Edition

ಬೆಲೆ: ರೂ. 1-50



ಮುದ್ರಕರು:
ರಾಜೇಶ್ ಪವರ್ ಪ್ರೆಸ್
ದರ್ಬೆ, ಪುತ್ತೂರು, ದಕ್ಷಿಣ ಕನ್ನಡ
ಕರ್ನಾಟಕ.

ಆರ್. ಗುಂಡೂರಾವ್
ಮುಖ್ಯ ಮಂತ್ರಿ




ವಿಧಾನ ಸೌಧ
ಬೆಂಗಳೂರು

ದಿನಾಂಕ ೧೮–೯–೧೯೮೨

## ಸಂಕಲ್ಪ........ಸಿದ್ಧಿ

ಸುಮಾರು ಎರಡು ಸಾವಿರ ವರ್ಷಗಳಿಗೂ ಹೆಚ್ಚು ದೀರ್ಘವಾದ ಐತಿಹಾಸಿಕ ಪರಂಪರೆ ಕನ್ನಡ ನಾಡಿನದು. ಈ ಅವಧಿಯಲ್ಲಿ ಕನ್ನಡ ಭಾಷೆ, ಸಾಹಿತ್ಯ, ಕಲೆ, ಸಂಸ್ಕೃತಿಗಳು ಸಮೃದ್ಧವಾಗಿ, ಶ್ರೀಮಂತ ವಾಗಿ ಬೆಳೆದು, ಈ ನಾಡಿನ ಇತಿಹಾಸವನ್ನು ಭವ್ಯವಾಗಿಸಿವೆ.

ಒಂದು ನಾಡಿನ ಅಂತಃಸತ್ವ ಅಡಕವಾಗಿರುವುದೇ ಅದರ ಸಾಂಸ್ಕೃತಿಕ ನೆಲೆಗಟ್ಟಿನಲ್ಲಿ. ಈ ನೆಲೆಗಟ್ಟು ಭದ್ರವಾಗಿರಬೇಕಾದರೆ ಸಾಂಸ್ಕೃತಿಕ ಪರಂಪರೆ ಉತ್ಕರ್ಷಕ್ಕೆ ಏರಲು, ಔನ್ನತ್ಯ ಸಾಧಿಸಲು ನಿರಂತರವಾಗಿ ಪ್ರಯತ್ನಗಳು ನಡೆಯಬೇಕು.

ಭಾರತೀಯ ಸಂಸ್ಕೃತಿಯಲ್ಲಿ ಹಾಸುಹೊಕ್ಕಾಗಿ ಬೆಸೆದುಕೊಂಡಿದ್ದರೂ ಕನ್ನಡ ತನ್ನದೇ ಆದ ವಿಶಿಷ್ಟ ಸಂಸ್ಕಾರಗಳನ್ನು, ಸಂಸ್ಕೃತಿಯನ್ನು ಹೊಂದಿದೆ.

ಕನ್ನಡ ನಾಡಿನ ಭವ್ಯ ಪರಂಪರೆಯನ್ನು ಜಾಗತಿಕ ಹಿನ್ನೆಲೆಯಲ್ಲಿ ಚಿತ್ರಿಸಿ, ವಿಶ್ವಕ್ಕೆ ಕನ್ನಡ ಸಂಸ್ಕೃತಿಯ ಹಿರಿಮೆಯನ್ನು ಸಾರುವ ಸದುದ್ದೇಶದಿಂದ ಪ್ರಥಮ ವಿಶ್ವ ಕನ್ನಡ ಸಮ್ಮೇಳನವನ್ನು ಕರ್ನಾಟಕದ ಪ್ರಮುಖ ಸಾಂಸ್ಕೃತಿಕ ಕೇಂದ್ರವಾದ ಮೈಸೂರಿನಲ್ಲಿ ಏರ್ಪಡಿಸಿದ್ದೇವೆ. ಇದೊಂದು ಚರಿತ್ರಾರ್ಹವಾದ ಸಂದರ್ಭವೆಂದು ನನ್ನ ನಂಬಿಕೆ. ಈ ಚರಿತ್ರಾರ್ಹ ಸಮ್ಮೇಳನ ಸಾರ್ಥಕವಾಗಲು ಮತ್ತು ಬಹುಕಾಲ ಇದರ ಸವಿನೆನಪು ಉಳಿಯಲು ಹಲವು ಯೋಜನೆಗಳನ್ನು ರೂಪಿಸಿದ್ದೇವೆ. ಕನ್ನಡದ ಖ್ಯಾತ ಲೇಖಕರ ಮಹತ್ವದ ಕೃತಿಗಳನ್ನು ಪ್ರಕಟಿಸಿ ಸುಲಭ

ಬೆಳೆಗೆ ಒದಗಿಸುವುದು ಈ ಯೋಜನೆಗಳಲ್ಲಿ ಒಂದು. ಇದರಂತೆ ಒಂದು ನೂರಾಎರಡು ಕೃತಿಗಳನ್ನು, ಹದಿನೇಳು ಸಂಕಲನಗಳನ್ನು ಆಯ್ಕೆ ಮಾಡಿ ಪ್ರಕಟಿಸುತ್ತಿದ್ದೇವೆ. ಈ ಸಾಹಿತ್ಯ ಮಾಲಿಕೆಯಲ್ಲಿ ಕವನ, ಕಾದಂಬರಿ, ನಾಟಕ, ವಿಚಾರ ಸಾಹಿತ್ಯದ ಕೃತಿಗಳಲ್ಲದೆ ಕನ್ನಡ ಸಾಹಿತ್ಯದ ಸತ್ವವನ್ನು, ವೈವಿಧ್ಯವನ್ನು ಪ್ರತಿಫಲಿಸುವ ವಿವಿಧ ಬಗೆಯ ಸಂಕಲನಗಳು ಇವೆ. ಅನ್ಯ ಭಾಷಿಕರಿಗೆ ಕನ್ನಡ ಸಾಹಿತ್ಯದ ಕಂಪು ಬೀರುವಂತೆ ಕೆಲವು ಆಯ್ದ ಕೃತಿಗಳ ಇಂಗ್ಲಿಷ್ ಭಾಷಾಂತರವನ್ನು ಕೂಡ ಪ್ರಕಟಿಸುತ್ತಿದ್ದೇವೆ. ಸಾಹಿತ್ಯಮಾಲೆಯ ಈ ಕೃತಿರತ್ನಗಳನ್ನು ಸಹೃದಯವಾಚಕರು ಓದಿ ಆಸ್ವಾದಿಸಿದರೆ ನಮ್ಮ ಶ್ರಮ ಸಾರ್ಥಕ ; ಸಮ್ಮೇಳನ ಅರ್ಥಪೂರ್ಣವಾಗುವುದೆಂದು ನನ್ನ ಅಭಿಲಾಷೆ.

ಈ ಕೃತಿಗಳನ್ನು ಆಯ್ಕೆಮಾಡುವಲ್ಲಿ ಸಾಹಿತ್ಯ ಸಮಿತಿಯ ಪರಿಣತ ಸದಸ್ಯರು ಸಾಕಷ್ಟು ಶ್ರಮಿಸಿದ್ದಾರೆ. ಸುದೈವದಿಂದ ಕನ್ನಡದಲ್ಲಿ ಪ್ರತಿಭಾವಂತ ಲೇಖಕರ ಅಮೂಲ್ಯ ಕೃತಿಗಳಿಗೆ ಕೊರತೆ ಇಲ್ಲ. ಈ ಹಿನ್ನೆಲೆಯಲ್ಲಿ ನಿಶ್ಚಿತ ಸಂಖ್ಯೆಯಲ್ಲಿ ಸಾಹಿತ್ಯ ಕೃತಿಗಳನ್ನು ಆಯ್ಕೆ ಮಾಡುವುದು ಸುಲಭದ ಕೆಲಸವಲ್ಲ. ಆದರೂ ಬಹುಜನರಿಗೆ ಒಪ್ಪಿಗೆಯಾಗುವಂತೆ ಸಾಹಿತ್ಯ ಸಮಿತಿ ತನ್ನ ಕರ್ತವ್ಯ ನಿರ್ವಹಿಸಿದೆಯೆಂದು ಭಾವಿಸುತ್ತೇನೆ. ಈ ಸಮಿತಿಗೆ ಕೃತಜ್ಞತೆಗಳನ್ನು ಅರ್ಪಿಸುವುದು ನನ್ನ ಕರ್ತವ್ಯ. ಈ ಕೃತಿಗಳನ್ನು ಪ್ರಕಟಿಸಲು ಅನುಮತಿ ನೀಡಿ, ಲೇಖಕರು ಉಪಕರಿಸಿದ್ದಾರೆ. ಅವರ ಉದಾರ ಉಪಕಾರವನ್ನು ಈ ಸಂದರ್ಭದಲ್ಲಿ ಕೃತಜ್ಞತಾಪೂರ್ವಕವಾಗಿ ನೆನೆಯುತ್ತೇನೆ.

ಈ ಗ್ರಂಥಮಾಲೆ ಕನ್ನಡಿಗರ ಮನಸ್ಸನ್ನು ತಟ್ಟಿ, ಹೃದಯಸ್ಪಂದನ ಮಾಡಿದರೆ ನಮ್ಮ ಸಂಕಲ್ಪಕ್ಕೆ ಸಿದ್ಧಿ ದೊರಕಿದಂತೆ. ಈ ಪ್ರಯತ್ನ 'ನಭೂತೋ' ಎಂದು ಹೆಮ್ಮೆಯಿಂದ ಹೇಳಬಲ್ಲೆ. ತಾಯಿ ಭುವನೇಶ್ವರಿ ಈ ಪ್ರಯತ್ನವನ್ನು ಹರಸಿ, ಮಂಗಳವುಂಟುಮಾಡಲೆಂದು ವಿನೀತ ಪ್ರಾರ್ಥನೆ ಸಲ್ಲಿಸುತ್ತೇನೆ.

ರಾ. ಗುಂ. ಹೆಗಡೆ

ಮುಖ್ಯ ಮಂತ್ರಿಗಳು

# ಪ್ರವೇಶ

ಸಾಹಸ ಪ್ರದರ್ಶನದ ಸನ್ನಿವೇಶಗಳೆಡೆಯಲ್ಲಿ ರಸನಿಮಿಷಗಳು ಅಡಕವಾಗಿರುವ ಮಾಧ್ಯಮವು ಕಾಡಬೇಟೆಯಾಗಿದೆ. ಇದು ವೀರ, ಭಯಾನಕ, ರೌದ್ರ, ಬೀಭತ್ಸ, ಹಾಸ್ಯವೇ ಮೊದಲಾದ ನವರಸಗಳಿಗೆ ವಿಪುಲ ಅವಕಾಶ ವೀಯುವ ರೋಚಕ ಪ್ರಸಂಗ. ಮಾತ್ರವಲ್ಲದೆ, ಮಾಂಸದೌತಣದ ವೀರೋಚಿತ ಭೋಜನದೊಂದಿಗೆ ಮೆಲುಕಿಗೆ ದೊರೆಯುವ ಬುದ್ಧಿಯ ಗ್ರಾಸವೂ ಆಗಿದೆ.

ಬೇಟೆಯು ಹಳ್ಳಿಗರ ಹವ್ಯಾಸವಾದುದರಿಂದ ಸಾಹಿತ್ಯದ ಚಿಕಿತ್ಸಕ ದೃಷ್ಟಿಯಿಂದ ಇದನ್ನು ನೋಡಿದವರು ವಿರಳ. ಅಲ್ಲದೆ ಮೃಗಯಾವಿಹಾರವು ಮುಗಿದನಂತರ ಮುಂದಿನ ಮಾಂಸದೌತಣಕ್ಕೆ ಆತುರ ಪಡುವವರೇ ವಿನಾ ಹೃದಯಸ್ಪರ್ಶಿ ಸನ್ನಿವೇಶಗಳನ್ನು ವಿಶದೀಕರಿಸುವುದಕ್ಕೆ ಸಮಯವಾದರೂ ಎಲ್ಲಿ? ಅಂದಿನ ದಿನಗಳಲ್ಲಿ ಇದು ಮಲೆನಾಡ ಅಕ್ಷರಹೀನರ ಹವ್ಯಾಸವಾದುದರಿಂದ ಗತಿಸಿದ ಸಾಹಸಮಯ ಸನ್ನಿವೇಶಗಳನ್ನು ಸ್ಮರಿಸಿ ಸಂಗ್ರಹಿಸಲು ಅವಕಾಶವಿರಲಿಲ್ಲವೆನ್ನಬಹುದು.

ನನ್ನ ಜೀವನದಲ್ಲಿ ಘಟಿಸಿದ ಇಂಥ ಹಲವಾರು ರಸಮಯ ಪ್ರಸಂಗಗಳನ್ನು ನೆನೆದುಕೊಂಡರೆ ಇಂದೂ ಮೈನವಿರೇಳುತ್ತಿದೆ. ಏರು ಜವ್ವನದ ಕಾಲದಲ್ಲಿ ಅನುಭವಿಸಿದ ಆ ಪ್ರಸಂಗಗಳು ಇನ್ನು ಮುಂದಿನ ಜೀವನದಲ್ಲಿ ಮತ್ತೆ ದೊರೆಯದಲ್ಲಾ ಎಂದು ಪರಿತಪಿಸಬೇಕಾಗಿದೆ. ಘರವೆಯ ಕಾಲ, ನರೆತ ತಲೆ, ಗುಳಿಬಿದ್ದ ಕಣ್ಣು, ಬೊಚ್ಚುಬಾಯಿ; ಅದೆಷ್ಟೋ ರಸಕವಳಗಳು ಜಗುಳಿ ಹೋಗಿವೆ.

ಈಗ ನಾನು ಬರೆಯುತ್ತಿರುವ ವಿಷಯಗಳು ಈ ಶತಮಾನದ ಆದಿಯಲ್ಲಿ ನಡೆದುದು. ಇಂದು ವನ್ಯಮೃಗ ರಕ್ಷಣೆಯು ನಾಡವರ ಕರ್ತವ್ಯವಾದರೆ, ಅಂದು ಮಲೆನಾಡವರ ಬೆಳೆಗೆ, ಜೀವಕ್ಕೆ, ಜೀವನಕ್ಕೆ ಆತಂಕಕಾರಿಗಳಾದ ಅವನ್ನು ಕಂಡಲ್ಲಿ ಬೇಟೆಯಾಡಿ, ಗುಂಡಿಕ್ಕಿ ಕೊಲ್ಲಿರೆಂಬ ಕಾಲ. ಆದುದರಿಂದ

ನಿಮ್ಮನ್ನು ಕೃತಕ ನಾಗರಿಕತೆಯ ವಾತಾವರಣದಿಂದ ಸೃಷ್ಟಿಯ ಸುಂದರ, ಮುಗ್ಧ, ನೈಜ ತಾಣಕ್ಕೆ ಕರೆದೊಯ್ಯುತ್ತೇನೆ. ನಮ್ಮ ಮನೆ 'ಪಿಲಿ ಮಜಲು'. ಅಲ್ಲಿಂದ ಶ್ರೀಕ್ಷೇತ್ರ ಸುಬ್ರಹ್ಮಣ್ಯವು ಹನ್ನೊಂದು ಮೈಲು ಮೂಡುಗಡೆ. ಉಪ್ಪಿನಂಗಡಿಗೆ ಇಪ್ಪತ್ತಒಂದು ಮೈಲು. ಆ ಕಾಲದ ಮದರಾಸು ಸಂಸ್ಥಾನಕ್ಕೆ ಸೇರಿದ ದಕ್ಷಿಣ ಕನ್ನಡ ಜಿಲ್ಲೆಯ ಬಂಟ್ರ ಗ್ರಾಮವು ಪುತ್ತೂರು ತಾಲೂಕಿಗೆ ಸೇರಿತ್ತು. ಅಂದು ಸುಬ್ರಹ್ಮಣ್ಯಕ್ಕೆ ಹೋಗಲು ಇಂದಿನಂತೆ ಕಾರು, ಬಸ್ಸು ಉಗಿಬಂಡಿಯ ಸೌಕರ್ಯದ ಮಾತು ಒತ್ತಟ್ಟಗಿರಲಿ, ಎತ್ತಿನ ಬಂಡಿಗೂ ಅಭಾವ. ಗಾಡಿ ಸಿಕ್ಕಿದರೂ ಹೋಗಬೇಕಿದ್ದರೆ, ಎರಡು ಮೂರು ಗಾಡಿ ಯಾವದರೂ ಒಟ್ಟಾಗಿ ಹೊರಡಬೇಕು. ದಾರಿಯಲ್ಲಿ ಕಾಡು ಮೃಗಗಳ ಬಾಧೆಯ ಅಪಾಯವು ಕಾದಿಟ್ಟುದು. ಮಾತ್ರವಲ್ಲ, ಮಾರ್ಗಕ್ಕೆ ಅಡ್ಡಲಾಗಿ ಹರಿಯುವ ಬಜಕ್ಕರೆ ಸಾರು, ನೆಟ್ಟಣ, ಬೊಳ್ಳಾಯಿಲ, ಬೋರಿ ಪೋಪಿ ಸಾರು, ಕುಮಾರಧಾರಾ ನದಿಗಳನ್ನು ದಾಟಬೇಕಿದ್ದರೆ ಮುಂದುಗಡೆಯಿಂದ ಕೈಯಲ್ಲಿ ಲಾಟಾನು ಹಿಡಿದು ಗಾಡಿಗೆ ದಾರಿತೋರಿಸಲು ಮುನ್ನಡೆಯುವವರ ಅಗತ್ಯವಿತ್ತು. ಹಸಿದು ಹೊಳೆಯಲ್ಲಿ ಕಾದಿದ್ದ ಮೊಸಳೆಗಳು ಅಂಥವರನ್ನು ಕೆಚ್ಚಿಕೊಂಡು ಹೋದರೂ ಹೋದುವೆ! ಮಾರ್ಗ ಕೊರಕಲು; ಮಣ್ಣು ಜೌಗು. ಮಳೆಗಾಲದ ನೀರು ಮಾರ್ಗದಿಂದಲೇ ಹರಿದು ಮಾರ್ಗ ಮಧ್ಯ ದಲ್ಲಿ ಮುಂಡುದ್ದ ಗುಂಡಿಗಳು. ಇದರಲ್ಲಿ ಗಾಡಿಯ ಚಕ್ರವು ಬಿದ್ದೆದ್ದು ಆಗುವ ಶಬ್ದಕ್ಕೆ, ಬಾನೆತ್ತರಕ್ಕೆ ಚಾಚಿ ನಿಂತಿರುವ ತೇಗ, ಬೇಂಗ, ಬೀಟೆ, ಚಿರ್ವೆ, ಮರುವ ಮೊದಲಾದ ರಾಕ್ಷಸಾಕೃತಿಯ ಮರಗಳ ಕತ್ತಲೆಯಲ್ಲಿ, ಅಲ್ಲಲ್ಲಿ ದೆವ್ವ ಗಳಂತೆ ಎದ್ದು ತೋರುವ ಬಂಡೆಗಳ ಎಡೆಯಿಂದ, ಕಲ್ಲಿಂದ ಕಲ್ಲಿಗೆ ಹಾರಿಬಿದ್ದು ಆಗುವ ಶಬ್ದವನ್ನು ಕೇಳಿ ಗಾಡಿ ಬಂತೆಂದು ತಿಳಿದು ಮಾರ್ಗಮಧ್ಯಕ್ಕೆ ಹಾರುವ ಪಟ್ಟೆಹುಲಿ, ಕಿರುಬ, ಚಿರತೆ, ಕಾಡುನಾಯಿಗಳನ್ನು ಕಂಡು ಗಾಡಿಯೆತ್ತುಗಳು ಮಾರ್ಗಬಿಟ್ಟು ಓಡುವ ರಭಸಕ್ಕೆ ಗಾಡಿಯಲ್ಲಿದ್ದ ಸವಾರರೂ,ಗಾಡಿ ಹೊಡೆಯು ವವನೂ, ಎತ್ತುಗಳೂ ಉರುಳಿಬಿದ್ದು ಕೈಕಾಲು ಕಳಕೊಂಡ ಪ್ರಸಂಗಗಳು ಹಲವಾರಿದ್ದವು. ಹುಲಿ, ಕಾಡುಕೋಣಗಳ ಹಿಂಡು ದಾರಿಯಲ್ಲಿ ಸಿಕ್ಕಿಲ್ಲ ವೆಂದಾದರೆ, ಆನೆಗಳು ಎಲ್ಲಿವೆ ಎಂದು ಎವೆ ಮುಚ್ಚದೆ ನಿರುಕಿಸುತ್ತ ಜಾಗರೂ ಕತೆಯಿಂದ ಗಾಡಿ ಹೊಡೆಯಬೇಕೆಂದು ಅರ್ಥ. ಅದಕ್ಕಾಗಿ ಜಾತ್ರೆಯ

ಕಾಲದಲ್ಲಿ ಗಾಡಿಗಳ ಸಾಲುಸಾಲೇ ಹೋಗುವುದನ್ನು ಎಲ್ಲರೂ ಕಾಯುತ್ತಿದ್ದರು. ಆ ಸಮಯದಲ್ಲೂ ಹೋಗುವ ಗಾಡಿಗಳ ಹಿಂದುಮುಂದಿನಿಂದ ಆಯುಧಪಾಣಿಗಳಾದ ಗುತ್ತಿನ ಕಾಲಾಳುಗಳು ಬೊಂಬಡಿ ಬಾರಿಸುತ್ತಾ ಹೋಗುವುದು ಅನಿವಾರ್ಯ. ಕೊರಕಲು ದಾರಿಯ ಜೌಗು ಪ್ರದೇಶದಲ್ಲಿ ನಡೆಯುವವನ ಕಾಲಿಗೆ ಇಬ್ಬಾಯಿಯ ಇಂಬಳಗಳು ಕಚ್ಚಿ ಸೋರುವ ರಕ್ತದಿಂದ ಅರ್ಧದಾರಿ ಮುಟ್ಟಬೇಕಿದ್ದರೆ ಆಳಿಗೆ ರಕ್ತಸ್ನಾನ! ನಂಜೇರಿ ತಡೆಯಲು ಸಾಧ್ಯವಾದ ತುರಿಕೆ. ಕಚ್ಚಿದ ಇಂಬಳಗಳು ರಕ್ತ ಹೀರಿ, ಕರಿದ ಕೋಡುಬಳೆಯಂತಾಗಿ, ಕಚ್ಚಿ ಹಿಡಿದವುಗಳನ್ನು ಬಿಡಿಸಬೇಕಿದ್ದರೆ ಪಯಣಿಗನಲ್ಲಿ ಸುಣ್ಣಮಿಶ್ರಿತ ತಂಬಾಕಿನುಂಡೆಯು ಇಲ್ಲವಾದಲ್ಲಿ ಕ್ಷೇತ್ರ ತಲುಪುವಾಗ, ಅವನ ದೇಹದ ಒಂದಂಶ ರಕ್ತವು ಈ ರಕ್ತಬೀಜಾಸುರನ ಸಂತತಿಗೆ ಅರ್ಪಿತವಾದಂತೆಯೆ. ಇದನ್ನು ತೆಗೆಯಲು ಮಾರ್ಗದ ಬದಿಯಲ್ಲಿ ಒಂದರೆಗಳಿಗೆ ನಿಂತನೆಂದಾದರೆ ಅವನ ಮೈಯ ವಾಸನೆಗೆ ಮುಕುರಿ ಬೀಳುವ ಅಂಗುಲಗಾತ್ರದ ನುಸಿ ಸೊಣಗಳ ಕಾಟ. ಇದರೆಡೆಯಲ್ಲಿ ಒಮ್ಮೊಮ್ಮೆ ಹಿಂಡು ಹಿಂಡು ಕಾಡುಕೋಣ, ಕಡವೆ, ಜಿಂಕೆಗಳು ಮಾರ್ಗಮಧ್ಯೆ ಹಾದು ಓಡುವ ರಭಸಕ್ಕೆ ಅಂಜಿದ ಆಳುಗಳು ಹೊಡೆಯುವ ಬೊಬ್ಬೆಗೆ ಹೆದರಿ ಗಡಬಡಿಸಿದ ಸವಾರರು ಗಾಡಿಯ ಮಾಡಿಗೆ ತಲೆ ತಾಗಿಸಿ ನೆರಪ್ಪಿಗೆ ಮುಖ ಬಡಿದು ಹಲ್ಲುದುರಿಸಿಕೊಂಡ ಪ್ರಸಂಗಗಳು ಲೆಕ್ಕವಿಲ್ಲದಷ್ಟು! ಹಲವಾರು ಗಾಡಿಗಳೂ, ಮುನ್ನಡೆವವರೂ ಸದ್ದು ಮಾಡಿ ಸಂಧಿ, ಪಾಡ್ದನಗಳನ್ನು ಹೆದರಿಕೆಯನ್ನು ಹೋಗಲಾಡಿಸಲೆಂದು ಹಾಡುತ್ತಾ ಪಯಣಿಸುತ್ತಿದ್ದರೂ, ಇದಾವುದಕ್ಕೂ ಹೆದರದ ಮೃಗಗಳೇ ಹೆಚ್ಚಾಗಿ ಮನುಷ್ಯರು ವಿರಳವಾಗಿದ್ದ ಮಲೆನಾಡ ಪ್ರದೇಶ; ಅದು ಪಶ್ಚಿಮ ಘಟ್ಟದ ತಪ್ಪಲು.

ಮಲೆನಾಡು ಬತ್ತದ ಕೃಷಿಗೆ ಪ್ರಧಾನವಾದುದು. ಆ ಕಾಲದಲ್ಲಿ ತೆಂಗಿನ ಮರಗಳು ಗದ್ದೆಯ ಬದುವಿನಲ್ಲಿ ಮಾತ್ರ ಕಾಣಸಿಗುತ್ತಿದ್ದುವು. ಅಡಿಕೆ ತೋಟಗಳು ಅತಿ ವಿರಳ; ಇದ್ದರೂ ಕಾಡಿನ ಮಧ್ಯೆ ನೂರು, ನೂರೈವತ್ತು ಮರಗಳಿಂದ ದೊಡ್ಡ ತೋಟಗಳೇ ಇರಲಿಲ್ಲ. ಭತ್ತದ ಕೃಷಿ ಮಾಡುವವನು ಹತ್ತು ಮುಡಿ ಗದ್ದೆ ಸಾಗುವಳಿ ಮಾಡುವುದಿದ್ದರೆ ಇಪ್ಪತ್ತು ಮುಡಿ ಬೀಜದ [illegible] ಸಿಗುತ್ತಿರಲಿಲ್ಲ. ಬಿತ್ತಿದ

ಬೀಜವು ಮೊಳಕೆ ಬರುವ ತನಕ ಹಿಂಡುಹಿಂಡು ಪಾರಿವಾಳ, ಗುಬ್ಬಚ್ಚಿ, ಕಾಡುಕೋಳಿ, ಕೇಂಕಣ, ಮುಳ್ಳುಹಂದಿಗಳು ಹೆಕ್ಕಿ ತಿಂದರೆ, ಮೊಳಕೆ ಮೇಲೆದ್ದೊಡನೆ ಮೊಲ, ಅಳಿಲು ತಿಂದುಳಿದ - ಹುಳಮೇದವನ ತಲೆಯಂತೆ ಅಲ್ಲಲ್ಲಿ ತೋರುವ - ಎಳೆ ಸಸಿಗಳನ್ನು ಕಾಡುಮೇಕೆ, ಜಿಂಕೆ, ಕಡವೆಗಳು ತಿಂದ ಬಳಿಕ, ಉಳಿದುದನ್ನು ಕಿತ್ತು ನಟ್ಟು ತೆಂಡೆ ಹೊಡೆಯುವಾಗ ಕಾಡುಕೋಣ ಗಳ ಹಿಂಡು, ಕಡವೆ ಜಿಂಕೆ ಹಂದಿಗಳ ದಂಡು ತಮಗೆ ಬೇಕಾದಷ್ಟು ತಿಂದು ನಾಶಗೊಳಿಸಿ ಮಿಕ್ಕಿದ್ದನ್ನು ಆನೆಗಳ ಹಿಂಡು ಬಂದು ಮೆಟ್ಟಿ ಧ್ವಂಸ ಪಡಿಸಿದ ಮೇಲೆ ಬೇಸಾಯಗಾರರಿಗೆ ಉಳಿಯುವುದು ಕಾಡಿನ ನಾರುಗೆಣಸು, ಇಯೆರು, ಪುಂಡಿಕೇನೆ, ಬೊಳ್ಗಂಡೆ, ಸೋಣೆಸೊಪ್ಪುಗಳಲ್ಲದೆ ಬೇರೇನು? ಈ ಮಲೆನಾಡವರು ತಮ್ಮ ಗದ್ದೆಯ ಬದುವಿನಲ್ಲಿ ಕಟ್ಟಿದ್ದ ಜೋಪಡಿಯಲ್ಲಿ ಅಗ್ಗಿಷ್ಟಿಕೆ ಬೆಂಕಿಯನ್ನು ರಾತ್ರಿಯೆಲ್ಲ ಉರಿಸಿ, ಬೊಬ್ಬೆ ಹೊಡೆದು, ಸೈರಿಸಲು ಸಾಧ್ಯವಾಗದ ನುಸಿ ನೊಣಗಳಿಂದ ಕಡಿಸಿಕೊಂಡು, ಮಳೆ ಮಂಜಿನ ಪೆಟ್ಟನ್ನು ಸಹಿಸಿಕೊಂಡು ಪಡೆಯುವ ಪ್ರತಿಫಲವು ವರ್ಷಾಂತ್ಯಕ್ಕೆ ಮಲೇರಿಯಾ ಜ್ವರಗಡ್ಡೆಯ ಪ್ರಸಾದ! ಅಂಥವರನ್ನು ಕಂಡ ಗುತ್ತು ಬೀಡಿನವರು, ಪೇಟೆಯವರು "ಗಂಡಸು ಹೆರಲು ಇನ್ನು ಒಂದೆರಡೇ ತಿಂಗಳು" ಎನ್ನುವ ಗೇಲಿ !

ಮನೆಗಳಲ್ಲಿದ್ದ ನಾಯಿಗಳು ತೆಪ್ಪಗೆ ಬಿದ್ದಿರಬೇಕಲ್ಲದೆ, ಮೃಗದ ಇರ ವನ್ನು ಅರಿತು ಬೊಗಳಿದವೆಂದರೆ ರಾತ್ರಿ ಅವು ನಾಯಿಹುಲಿಯ ಪಾಲೇ. ನಾಯಿಗಳಲ್ಲಿ ಪ್ರೀತಿಯಿದ್ದ ಗೌಡ, ಮಲೆಕುಡಿಯರು ತಮ್ಮ ಗುಡಿಸಲಲ್ಲಿ ನಾಯಿ ಸಾಕಲು ಹೆದರುತ್ತಿದ್ದರು. ತಡಿಕೆಯೆಡೆಯಿಂದ ನಾಯಿಹುಲಿ ಒಳ ನುಗ್ಗಿ ಅದನ್ನು ಕತ್ತುಹಿಡಿದು ಹೊರಗೆಳೆಯುವ ರಭಸಕ್ಕೆ ಹೆದರಿದ ನಾಯಿಯ ಮಲಮೂತ್ರದಿಂದ ನೆನೆದವರು ಎಷ್ಟೋ ಮಂದಿ! ಹೀಗೆ ಅದು ಮೃಗ ಬಾಧೆ ಯಿಂದ ಜೀವನವನ್ನು ಸಾಗಿಸುವುದೇ ದುಸ್ತರವಾಗಿದ್ದ ಕಾಲ. ವೈವಿಧ್ಯಮಯ ತುಳು ಅಂದಿನ ಆ ನಾಡ ಬಂಟ, ಜೈನ, ಗೌಡ, ಬ್ರಾಹ್ಮಣ, ಮಲೆಕುಡಿಯರ ಹಲವಾರು ಪಂಗಡಗಳ ಹೊಲೆಯರೆಂಬವರ ಆಡುಭಾಷೆ. ಕನ್ನಡವು ಕಸ್ತೂರಿಯಷ್ಟು ಅಪೂರ್ವ.

ನಮ್ಮ ಮನೆಯ ಪೂರ್ತಿ ಹೆಸರು - ಬಂಟರ ಗ್ರಾಮದ ಮುಂಡ್ರಾಡಿ ಪಿಲಿಮಜಲು. ಇದು ಅಳಿಯಕಟ್ಟಿನ ಅವಿಭಕ್ತ ಬಂಟ ಮನೆತನ. ಮುಂಡ್ರಾಡಿ ಪಿಲಿಮಜಲಿಗೆ ನಮ್ಮಜ್ಜ ಕೊರಗಪ್ಪ ರೈಗಳು ಯಜಮಾನರಾಗಿ, ಪಿಲಿಮಜಲು ಮತ್ತಿತರ ಆಸ್ತಿಗಳ ಉಸ್ತುವಾರಿಯನ್ನು ನನ್ನ ತೀರ್ಥರೂಪ ವಾಸ ರೈಗಳೂ, ತರವಾಡಿನಲ್ಲಿ ಚಿಕ್ಕತಂದೆ, ಕಿರಿಯಜ್ಜನವರೂ ಮೇಲ್ತನಿಖೆ ನಡೆಸಿಕೊಂಡಿದ್ದರು. ಇವುಗಳ ಮಧ್ಯೆಯಿರುವ ಅಳೇರಿ ಆಸ್ತಿಯು ನಮ್ಮಜ್ಜಿ ಲಕ್ಷ್ಮಮ್ಮನವರ ಯಜಮಾನ್ತಿಕೆಯಲ್ಲಿದ್ದು, ಇವರ ಮಗ ಗುಡ್ಡಪ್ಪ ರೈಗಳು ಪ್ರಾಯ ಪ್ರಬುದ್ಧರಾಗಿ ಬರುತ್ತಿರುವುದರಿಂದ, ಹೆಂಡತಿಯ ಮನೆಯ ಮೇಲ್ವಿಚಾರವನ್ನೂ ಅಜ್ಜಯ್ಯನವರೇ ನೋಡಿಕೊಂಡು ಬರಬೇಕಿದ್ದುದರಿಂದ ಮರ್ದಾಳ ಬೀಡಿನ ದೊಡ್ಡದೊಂದು ಆಸ್ತಿಯನ್ನು ಬಿಟ್ಟರೆ ಉಳಿದೆಲ್ಲ ಆಸ್ತಿಯೂ ಬಂಟರದ್ದೇ ಆಗಿ ಬಂಟರ ಗ್ರಾಮವೆಂಬುದು ಅನ್ವರ್ಥನಾಮವಾಗಿ ಇತ್ತು. ಪಿಲಿಮಜಲು ಎಂಬುದೂ ಹೆಸರಿಗೆ ತಕ್ಕಂತೆ - ರಾತ್ರಿ ಮಜಲಿನಲ್ಲಿ ಕಾದಿದ್ದ ಹುಲಿ ಅಂಗಳದಿಂದ ನಾಯಿಗಳನ್ನಲ್ಲದೆ ಕಟ್ಟಿ ಹಾಕಿದ ಕರುಗಳನ್ನೂ ಹೊತ್ತುಕೊಂಡು ಹೋಗಿ ಪಿಲಿಮಜಲಿನ ಬದಿಯ ಸೀಗೆ ಬಲ್ಲೆಯಲ್ಲಿ ತಿಂದು ಮಲಗಿದ್ದುದನ್ನು ಕಂಡವರೆಷ್ಟೋ ಮಂದಿ ಇದ್ದರು. ನಮ್ಮ ಅಜ್ಜ ಕೊರಗಪ್ಪ ರೈಗಳು ಬಂಟ್ರ, ನೆಕ್ಕಿಲಾಡಿ ಗ್ರಾಮಗಳ ಜನಪ್ರೀತ ಪಟೇಲರು. ಇವರು ಆ ದಿನ ಹೆಚ್ಚಾಗಿ ಗೋಚರಿಸುತ್ತಿದ್ದ 'ರುಜು ಪಟೇಲ'ರಾಗಿರದೆ, ಪಟೇಲ್ ಕೊರಗಪ್ಪ ರೈ ಎಂದು ಸ್ವತಃ, ರಿಕಾರ್ಡ್ ಬರೆದಾದ ನಂತರವೇ, ರುಜು ಹಾಕಿ ಅಂದಿನ ಬಿಳಿ ಮುಖದ ಕಲೆಕ್ಟರರಿಂದ ಶಿಫಾರಸು ಪಡೆದವರು. ಹೊಯಿಗೆ ಬರಹವನ್ನು ಕಲಿತು ಪಟೇಲರ ಸಾಲಿನಲ್ಲಿ ವಿದ್ಯಾವಂತರೆನಿಸಿಕೊಂಡವರು. ಇವರು ಅಂದಿನ ನುರಿತ ಬೇಟೆಗಾರ. 'ಜಾಮುಂಗೆ ಕೋವಿ'ಯಲ್ಲಿ ಪರಿಣತರಾಗಿ, 'ಕೇಪಿನ ಕೋವಿಗೆ' ಬಡ್ತಿಹೊಂದಿ ಊರವರಿಗೆ ರಾತ್ರಿ ಹಗಲು ಉಪದ್ರವವೀಯುವ ಹುಲಿ ಹಂದಿಗಳನ್ನು ಹೊಡೆದುರುಳಿಸಿದವರು. ಆಗಾಗ್ಗೆ ಧಾಳಿಯಿಡುವ ಕಾಡಾನೆ, ಕಾಟಿಗಳ ಹಿಂಡನ್ನು ಗುಂಡಿಕ್ಕಿ ಹೆದರಿಸಿ ಗಡಿ ದಾಟಿಸಿಯೇ ಬರುವವರಾದುದರಿಂದ ಊರವರೆಲ್ಲರಿಗೂ ಇವರ ಮೇಲೆ ಆದರಾಭಿಮಾನ.

ಜಾಮುಂಗೆ ಹಾಗೂ ಕೇಪಿನ ಕೋವಿಗಳಿಂದ ಹೊಡೆದು ಕೊಂದು, ಓಡಿಸಿದರೂ ಬೆಳೆಗೆ ಹಾನಿಕಾರಕವಾದ ಮೃಗಸಂತತಿ ವೃದ್ಧಿಸುತ್ತಲೇ ಇತ್ತು. ಹೀಗೆ ಕೊಲ್ಲುವುದಲ್ಲದೆ 'ಕರ್ಪು' ತೋಡಿ ಮೃಗಗಳನ್ನು ಕೊಂದರೂ ಬೆಳೆಯು ಮತ್ತೂ ಮೃಗಗಳ ಪಾಲೆ! ಕರ್ಪು ಎಂದರೆ ಗದ್ದೆಗೆ ಕಾಡಿನಿಂದ ಸದಾ ಮೃಗಗಳು ಇಳಿಯುವ ದಾರಿಯನ್ನು ಕಂಡುಹಿಡಿದು, ಅಲ್ಲಿ ದೊಡ್ಡ ಗುಳಿತೋಡಿ ಗುಳಿಯ ತಳದಲ್ಲಿ ಬರ್ಚಿ, ಚೂಪು ಸಲಾಕೆಗಳನ್ನು ಹೂತಿಟ್ಟು ಅದನ್ನು ತೆಳುವಾದ ಬಿದಿರ ಸಲಿಕೆಗಳಿಂದ ಮುಚ್ಚಿ, ಮೇಲೆ ತೆಳುಮಣ್ಣು, ಹಸಿಹುಲ್ಲು ಹರಡಿ ಇಡುವುದು. ಸದಾ ಗದ್ದೆಗೆ ಆ ದಾರಿಯಿಂದಲೇ ಬರುವ ಮೃಗವು ಎಂದಿನಂತೆಯೇ ಬಂದು, ದಾರಿಯಲ್ಲಿರುವ ಈ ಕೃತ್ರಿಮವನ್ನರಿಯದೆ, ಬಿದಿರ ಬಾಸಿ ಹಾಸಿದ ಜಾಗಕ್ಕೆ ಕಾಲಿಡುತ್ತದೆ. ಆಗ ಅದು ಮೃಗದ ಭಾರಕ್ಕೆ ಕುಸಿದು ಬಿದ್ದು, ಅದರೊಂದಿಗೆ ಆ ಮೃಗವೂ ಬಿದ್ದು, ಅಡಿಯಲ್ಲಿ ಹೂತಿಟ್ಟ ಬರ್ಚಿ, ಸಲಾಕೆಗಳ ಇರಿತದಿಂದ ಸಾಯುವುದು. ಇದಲ್ಲದೆ, ಮಲೆಕುಡಿಯರು ಒಡ್ಡುವ ಉರುಳಿಗೂ ಜಗ್ಗದೆ, ಕೋವಿ ಎತ್ತಿ ಕಟ್ಟುವುದಕ್ಕೂ ಬಗ್ಗದೆ ದಿನೇ ದಿನೇ ಕಾಡು ಪ್ರಾಣಿಗಳ ಉಪದ್ರವವು ಏರುತ್ತಿತ್ತಲ್ಲದೆ ಕಡಮೆಯಾಗುತ್ತಿರಲಿಲ್ಲ.

ಕೋವಿ ಎತ್ತಿ ಕಟ್ಟುವ ಕ್ರಮವು ಬಹಳ ಅಪಾಯಕಾರಿ. ಮೃಗಗಳ ಬಾಧೆಯನ್ನು ತಡೆಯಲಾರದೆ ಅದಕ್ಕೂ ಜನರು ಹಿಂದೆಗೆಯುತ್ತಿರಲಿಲ್ಲ. ಈ ವಿಧಾನವನ್ನು ಅನುಸರಿಸುವುದು ಪ್ರಾಣಾಪಾಯವನ್ನು ಉಂಟುಮಾಡು ವಂಥದಾದ್ದರಿಂದ ಸರಕಾರವು ಇದನ್ನು ನಿಷೇಧಿಸಿತ್ತು. ಇದು ಪತ್ತೆಯಾದರೆ ಕಠಿಣ ಶಿಕ್ಷೆಯೆಂದೂ ಸಾರಿತ್ತು. ಆದುದರಿಂದ, ಮೃಗಗಳ ಹಾವಳಿಯಿಂದ ನೊಂದ ಬೇಸಾಯಗಾರರು ಇದಕ್ಕಾಗಿ ಪರವಾನಿಗೆ ಇಲ್ಲದ ಕೋವಿಗಳನ್ನು ಉಪಯೋಗಿಸಿ, ಯಾರಾದರೂ ತನಿಖಾಧಿಕಾರಿಗಳ ಕೈಯಲ್ಲಿ ಸಿಕ್ಕಿಬಿದ್ದಾಗ ಕೋವಿಯು ತನ್ನದಲ್ಲವೆಂದು ಸಾಧಿಸುತ್ತಿದ್ದರು. ಇದೊಂದು ತುಂಬಿಸುವ ಕೋವಿಯಿಂದ ಸ್ವಯಂಚಾಲಿತವಾಗಿ ಮೃಗವನ್ನು ಕೊಲ್ಲುವ ವಿಧಾನ. ಅದಕ್ಕಾಗಿ ಒಳ್ಳೆಯ ಕೋವಿಗಳನ್ನು ತಯಾರಿಸಿ ಈ ಕಸಬುದಾರರು ಇದಕ್ಕೆ ಉಪಯೋಗಿಸುತ್ತಿದ್ದರು. ಈ ಕೋವಿಗೆ ಬೇಕಾದ ಮದ್ದುಗುಂಡನ್ನು ತುಂಬಿಸಿ, ಒಳ್ಳೆಯ ಕೇಪನ್ನು ನಿಪ್ಪಲಿಗೆ ಇಟ್ಟು, ಕೋವಿಯ ಕುದುರೆಯನ್ನು

ಎತ್ತಿ ನಿಲ್ಲಿಸಿ 'ಕುತ್ತು' (ಟ್ರಿಗರ್)ಗೆ ಉದ್ದವಾದ ಹುರಿನೂಲನ್ನು ಕಟ್ಟಿ ಮೃಗವು ಬರುವ ಉದ್ದಗಲವನ್ನು ಕಂಡು ನಿರ್ಧರಿಸಿ, ಆ ಅಳತೆಯಂತೆ ಹಿಂದಿನ ದಿನ ಬಂದ ಮೃಗದ ಹೆಜ್ಜೆಯಿಂದ ಅದು ಯಾವ ಜಾತಿಯ ಮೃಗ, ಅದರ ಎತ್ತರ ಎಷ್ಟಿರಬಹುದೆಂದು ಅರಿತುಕೊಂಡು, ಅಡಿಗೆ ಅಂಗುಲವೆಂಬ ನಿಯಮದಂತೆ, ತುಂಬಿಸಿದ ಕೋವಿಯನ್ನು ಸಜ್ಜುಗೊಳಿಸಿ ಅದನ್ನು ನೀಳವಾಗಿ ಎರಡು ಕಂಬಗಳಿಗೆ ಬಿಗಿದು ಸಿದ್ಧಗೊಳಿಸಿಟ್ಟು, ಬೇರೆ ಸ್ಥಳದಿಂದ ಇಳಿಯುವ ಮೃಗಗಳನ್ನು ಹೆದರಿಸಲು ಹೋಗುವುದು ರೂಢಿ. ಬೇಸಾಯಗಾರನು ಕೋವಿಯ ಬಳಿಯಲ್ಲೆ ಕುಳಿತರೆ ಉಳಿದ ಕಡೆಗಳಿಂದ ಇಳಿದು ಪೈರನ್ನು ನಾಶಪಡಿಸುವ ಮೃಗಗಳನ್ನು ಓಡಿಸುವವರಾರು? ಗದ್ದೆಗೆ ಇಳಿಯುವ ಆತುರದಲ್ಲಿರುವ ಮೃಗಗಳು, ಎತ್ತಿಕಟ್ಟಿದ ಹಗ್ಗವು ಕಾಲಿಗೆ ತೊಡಕಿದಾಗ, ಬೀಳೆಂದು ಭ್ರಮಿಸಿ ನೂಕಿಕೊಂಡು ಬರುವಾಗ ಕುತ್ತು ಎಳೆಯಲ್ಪಟ್ಟು, ಎತ್ತಿಟ್ಟ ಕುದುರೆಯು ಬಿದ್ದು, ಕೋವಿ ಈಡಾಗುವುದು. ತೂಕವಾಗಿ ಕಟ್ಟಿದ ಕೋವಿಯ ಗುರಿಯು ಹೆಚ್ಚಾಗಿ ಸರಿಯಾಗಿಯೇ ಇರುವುದು. ಬಂದಮೃಗವು ಹಂದಿಯ ಬದಲು ಕಡವೆಯಾಗಿದ್ದರೆ ಕಾಲಿಗಾದರೂ ಪೆಟ್ಟಾಗದಿರದು. ಒಮ್ಮೊಮ್ಮೆ ಗೋಂಕುರು ಕಪ್ಪೆಯು ಹಗ್ಗದತ್ತ ಹಾರಿದರೂ ಈಡಾಗಿಯೇ ಆಗುವುದು. ಹೀಗೆ ಕಟ್ಟಿದ್ದನ್ನರಿಯದೆ ಬೇರೆ ಬೇಟೆಗಾರರಾರಾದರೂ ಸಾರ್ತೆ ಬೇಟೆಗೆ ಬಂದು ಈ ಹಗ್ಗಕ್ಕೆ ಕಾಲಿಟ್ಟರೆ ಅವರ ಗತಿಯೂ ಮೃಗದ ಗತಿಯೆ! ಆದುದರಿಂದ ಇದು ಸಾಮಾಜಿಕವಾಗಿಯೂ, ಕಾನೂನಿನ ದೃಷ್ಟಿಯಲ್ಲಿಯೂ ನ್ಯಾಯಬಾಹಿರವಾದುದು. ಕೆಲವೊಮ್ಮೆ ಜನರು ಕೈಬಾಂಬಿನಂಥ ಸ್ಫೋಟಕವನ್ನು ನಾರುವ ಮಾಂಸದ ಒಳಗೆ ಇಟ್ಟು ಹಂದಿ ಹುಲಿಗಳು ಬರುವ ಗಂಡಿಯಲ್ಲಿಟ್ಟು ಎಷ್ಟೋ ಮೃಗಗಳನ್ನು ಕೊಲ್ಲುತ್ತಿದ್ದರು. ಹೀಗಿದ್ದರೂ ದಿನದಿಂದ ದಿನಕ್ಕೆ ಕಾಡುಪ್ರಾಣಿಗಳ ಉಪಟಳ ಮಿತಿ ಮೀರುತ್ತಿತ್ತು. ಇದರಿಂದ ನೊಂದು ಕಂಗಾಲಾದ ನಮ್ಮ ಊರವರು ದಾರಿಕಾಣದೆ ನಿವಾರಣೋಪಾಯವನ್ನು ಸೂಚಿಸಬೇಕೆಂದು ಊರ ಪಟೇಲರಾದ ನಮ್ಮಜ್ಜನವರನ್ನು ಕಾಣಲು ಬಂದರು. ಇವರಾದರೆ ಏನು ತಾನೇ ಮಾಡುವುದು? ತಮ್ಮಿಂದ ಸಾಧ್ಯವಾದಷ್ಟು ಹುಲಿ, ಹಂದಿಗಳನ್ನು ಕೊಂದು, ಆನೆ, ಕಾಡುಕೋಣಗಳನ್ನು ಗಡಿ ದಾಟಿಸಿದ್ದಾರೆ. ಇವರ ಕೇಪಿನ ಕೋವಿಗೆ ಆನೆ ಕಾಡುಕೋಣಗಳು

ಮಣಿಯುವುದಿಲ್ಲ. ಅದಲ್ಲದೆ ದೊಡ್ಡ ಬೇಟೆಯನ್ನಾದರೂ ಮಾಡೋಣ ವೆಂದರೆ ಊರಲ್ಲಿರುವುದು ಆರೇಳು ತುಂಬಿಸುವ ಕೋವಿಗಳು. ಮೂರು ನಾಲ್ಕು ಗ್ರಾಮಗಳವರು ಒಗ್ಗೂಡದೆ ಕಾಡು ನಾಡನ್ನು ತುಂಬಿ ಕೀಟಲೆ ಕೊಡುವ ಮೃಗಗಳನ್ನು ಕುಮಾರ ಪರ್ವತದ ಗಡಿ ದಾಟಿಸುವ ಬಗೆ ಹೇಗೆ? ಇವರು ಹೇಳಿದಾಗ ಉಳಿದ ಗ್ರಾಮಗಳ ಪಟೇಲ, ಗುರಿಕಾರರು ನೆಪವೊಡ್ಡು ತ್ತಿದ್ದರಲ್ಲದೆ ಬೇಟೆಗೆ ಬರುತ್ತಿರಲಿಲ್ಲ. ಈ ತುಂಬಿಸುವ ಕೋವಿಗಳನ್ನೇ ನಂಬಿ ಬೇಟೆಗೆ ಹೋಗಿ ಕಾಡೆಬ್ಬುವಾಗ ಹೊರಬಿದ್ದ ಮೃಗಕ್ಕೆ ಒಂದು ಈಡು ಹೊಡೆದು ಮತ್ತೊಂದು ಈಡು ತುಂಬಿಸಬೇಕಾದರೆ ಕಾಲು ಗಂಟೆ ಬೇಕು. ಶಕ್ತಿಹೀನ ಗುಂಡಿನ ಏಟಿನಿಂದ ಚೇತರಿಸಿ ಓಡಿದ ಮೃಗವು ಪುನಃ ಇತ್ತ ಬರುವಾಗ ತನ್ನ ಬಳಗವನ್ನೇ ಕೂಡಿಸಿಕೊಂಡು ಬರುವುದು ರೂಢಿ. ಹೀಗಿ ರಲು ಪರಿಹಾರೋಪಾಯವೇನು? ಕಲೆಕ್ಟರರಿಗೇ ಅರ್ಜಿ ಬರಕೊಳ್ಳುವುದು. ಅವರೇ ಸ್ವತಃ ತಮ್ಮ ಮಿತ್ರರೊಂದಿಗೆ ಬಂದು ನಾಲ್ಕಾರು ದಿನ ಬೇಟೆಯಾಡಿ ಬಂಟ್ರನೆಕ್ಕಿಲಾಡಿ, ಸುಂಕದಕಟ್ಟೆ ಗ್ರಾಮಸ್ಥರ ಸಂಕಟವನ್ನು ಪರಿಹಾರ ಮಾಡಬೇಕೆಂದು ನಮೂದಿಸಿ ಅಜ್ಜಯ್ಯನವರೇ ಅರ್ಜಿಯೊಂದನ್ನು ಬರೆದು ಅಂಚೆ ಮುಖಾಂತರ ಜಿಲ್ಲಾ ಕಲೆಕ್ಟರ್ ದೊರೆಗಳಿಗೆ ಕಳುಹಿಸಿ, ಬಂದ ಊರವರನ್ನು ಸಮಾಧಾನಪಡಿಸಿದರು. ಆ ಸಮಯ ಕಾಲ್ನಡಿಗೆಯಿಂದ ಮೂಡು ಪ್ರಾಂತ್ಯದ ಅಂಚೆಯು ಪುತ್ತೂರು ತನಕ ಹೋಗಿ ಅಲ್ಲಿಂದ ಜಟಕಾ ಬಂಡಿಯಿಂದ ಮಂಗಳೂರನ್ನು ತಲುಪಬೇಕಾದರೆ ನಾಲ್ಕೈದು ದಿನಗಳೇ ಹಿಡಿಯುತ್ತಿದ್ದುವು. ಆಗ ತಾನೇ ಬಂದಿದ್ದ ಜಿಲ್ಲಾಧಿಕಾರಿ ಇಂಗ್ಲಿಷ್ ಸದ್ಗೃಹಸ್ಥ ಇ. ಗೋನ್ (E. Gown) ಎಂಬವರು ತುಂಬ ಕಟ್ಟುನಿಟ್ಟಿನವರೆಂದೂ, ಬಡಜನರ ಮೇಲೆ ಪ್ರೀತಿಯುಳ್ಳವರೆಂದೂ ಬಂದ ಕೆಲವು ದಿನಗಳಲ್ಲೇ ಪ್ರಸಿದ್ಧರಾಗಿದ್ದರು. ಮಲೆನಾಡವರ ಈ ಗೋಳಿನ ಪತ್ರವು ಅಲ್ಲಿಗೆ ಮುಟ್ಟಿದೊಡನೆಯೇ, ಅಲ್ಲಿಯ ತನಕ ಮಲೆನಾಡಿಗೆ ಬಾರದಿದ್ದ ಕಲೆಕ್ಟರರು ತಾವು ಮುಂದಿನ ವಾರ ಇಂತಿಷ್ಟನೇ ತೇದಿಗೆ ಬರುವುದಾಗಿಯೂ, ಸುಂಕದಕಟ್ಟೆಯ ಬಂಗ್ಲೆಯನ್ನು ಸ್ವಚ್ಛಗೊಳಿಸಿ ತಮಗೂ ತಮ್ಮ ಮಿತ್ರ ವೃಂದಕ್ಕೂ ಅನುಕೂಲವಾಗುವಂತೆ ಬೇಕಾದ ಪರಿಕರಗಳನ್ನು ಅಣಿಗೊಳಿಸ ಬೇಕೆಂದೂ ತಿಳಿಸಿದ್ದರು. ಆ ಬಗ್ಗೆ ಕಡಬ, ನೂಜಿಬಾಳ್ತಿಲ, ಸುಂಕದಕಟ್ಟೆ

ಗ್ರಾಮ ಪಟೇಲರಿಗೆ ತಿಳಿಸುವುದಲ್ಲದೆ ಊರವರೆಲ್ಲ ಬೇಟೆಗೆ ಬರುವಂತೆ ಪ್ರತಿ ಮನೆಗೂ ತಳೆಯಾರಿಗಳು ಹೋಗಿ ತಿಳಿಸಬೇಕೆಂದೂ ನಮ್ಮಜ್ಜ ಪಟೇಲ್ ಕೊರಗಪ್ಪ ರೈಗಳಿಗೆ ತಾಕೀತು ಮಾಡಿದ್ದರು. ಹೊಸಮಠ ಕಡವಿನಲ್ಲಿ ಉಪ್ಪಿನಂಗಡಿಯಿಂದ ಬಂದ ಗಾಡಿಗಳನ್ನು ಬಿಡಬೇಕಾಗಿರುವುದರಿಂದ ಬಂಟ್ರ ನೆಕ್ಕಿಲಾಡಿಯಿಂದ ಮೂರು ನಾಲ್ಕು ಸವಾರಿ ಗಾಡಿಗಳನ್ನು ಕಳುಹಿಸ ಬೇಕೆಂದೂ, ಉಪ್ಪಿನಂಗಡಿಯಿಂದ ಬರುವ ಗಾಡಿಗಳನ್ನು ಹೊಸಮಠ ಕಡವಿ ನಲ್ಲಿ ಜಂಗಲ್ ಹತ್ತಿಸಿ ಕಡಬ ಮುಟ್ಟಬೇಕಾದರೆ ಹೊತ್ತು ಇಳಿಯಬಹು ದೆಂದೂ ಮಂಗಳೂರಿನಿಂದ ಬರುವ ಶಿಕಾರಿ ಗೆಳೆಯರಿಗೆ ಇದರಿಂದ ಅಸಮಾ ಧಾನ, ಅನಾನುಕೂಲವಾಗಬಹುದೆಂದೂ ಕಲೆಕ್ಟರರು ತಮ್ಮ ಪತ್ರದಲ್ಲಿ ನಮೂದಿಸಿದ್ದರು. ನಮ್ಮ ಮನೆಯ ಸವಾರಿ ಗಾಡಿಯನ್ನೂ, ಮರ್ದಾಳ ಬೀಡು ತಿಮ್ಮಯ ಕೊಂಡೆಯವರ ಚಿತ್ರಕಲೆಯಿಂದ ಸಿಂಗರಿಸಿದ ಸಾರೋ ಟನ್ನೂ, ಅಳೇರಿಯ ಮತ್ತು ಅತ್ಲಾಜೆ ಅಣ್ಣುಶೆಟ್ಟರ ಬೆಟ್ಟದಪುರದ ಗಾಡಿ ಹೋರಿಗಳನ್ನೂ ಕಳುಹಿಸುವುದಾಗಿ ಕಲೆಕ್ಟರರಿಗೆ ಮರು ಓಲೆ ಬರೆದು ದೊರೆಗಳ ಬರವನ್ನು ಗಾಡಿ ಸಾರೋಟನೊಂದಿಗೆ ಹೊಸಮಠದ ಈಚೆಯ ದಡದಲ್ಲಿ ಕಾದು ನಿಲ್ಲುವುದಾಗಿ ನಮ್ಮ ಉತ್ತರದಲ್ಲಿ ತಿಳಿಸಿದ್ದಾಯಿತು.

ಆ ಕಾಲದಲ್ಲಿ ಉಪ್ಪಿನಂಗಡಿಯಿಂದ ಮಂಗಳೂರು ತನಕ ಹೋಗಿ ಬರಲು ಎತ್ತಿನ ಗಾಡಿ, ಕುದುರೆಗಾಡಿ, ಮೋಟಾರು ಬಂಡಿಯಲ್ಲದೆ ಎಡೆ ಎಡೆಯಲ್ಲಿ ಮೋಟಾರು ಕಾರಿನ ಸೌಕರ್ಯವೂ ಇತ್ತು. ಮೂಡು ಪ್ರಾಂತ್ಯ ಸುಬ್ರಹ್ಮಣ್ಯದಿಂದ ಉಪ್ಪಿನಂಗಡಿಗಾಗಿ ಪಾಣೆಮಂಗಳೂರು ಮೂಲಕ ಮಂಗಳೂರಿಗೆ ಹೋಗುವ ಅಕ್ಕಿ, ಭತ್ತ, ರಾಮಪತ್ರೆ, ಸೀಗೆ, ಉಂಡೆಹುಳಿ ಇತ್ಯಾದಿಗಳು ಎತ್ತಿನ ಬಂಡಿಯಲ್ಲಿಯೇ ರವಾನೆಯಾಗಬೇಕಿತ್ತು. ಮಂಗಳೂರಿನಿಂದ ಇತ್ತ ಬರುವ ಉಪ್ಪು, ಬೆಲ್ಲ, ಸಕ್ಕರೆ, ಸಂಬಾರಜೀನಸು ಗಳು ಗಾಡಿಗಳ ಮುಖಾಂತರವೇ ಉಪ್ಪಿನಂಗಡಿ ತನಕ ಸರಾಗವಾಗಿ ಬಂದು ಹೋಗುತ್ತಿದ್ದರೂ, ಉಪ್ಪಿನಂಗಡಿ ಕಡವಿನಲ್ಲಿ ಜಂಗಲ್ ಏರಿ ಬರಬೇಕಾದರೆ ಭರ್ತಿ ಗಾಡಿಗಳಿಗೆ ತುಂಬಾ ಪ್ರಯಾಸ. ಜಂಗಲ್ ಎಂದರೆ ಎರಡು ಭಾರೀ ದೋಣಿಗಳನ್ನು ಎದುರು ಬದುರಾಗಿ ಮರದ ದಿಮ್ಮಿಗಳಿಂದ ಜೋಡಿಸಿ ಅದರಲ್ಲಿ ಮೂರು ನಾಲ್ಕು ಗಾಡಿಗಳು ನಿಲ್ಲುವಷ್ಟು ವಿಶಾಲ ತಳದಲ್ಲಿ ಉತ್ತಮ

ಜಾತಿಯ ಮರದ ಹಲಗೆಗಳನ್ನು ಹಾಸಿ ಗಾಡಿಯು ಅದರ ಮೇಲೆ ಏರುವಂತೆ ಅನುವು ಮಾಡಿಕೊಟ್ಟು, ಉಳಿದ ನಾಲ್ಕು ಸುತ್ತಿಗೂ ಬೇಲಿಯಂತೆ ಮರದ ರೀಪನ್ನು ಅಲ್ಲಲ್ಲಿ ಅದಕ್ಕೆ ಜಡಿದ ಗೂಟಗಳಿಗೆ ಬಡಿದು ಮಾಡಿದ ಚಿಕ್ಕ ತೆರನ ಹಡಗಿನ ಆಕೃತಿಯದು. ನಾಲ್ಕು ಜನ ನುರಿತ ಅಂಬಿಗರು ದೋಣಿಯ ನಾಲ್ಕು ಮೂಲೆಗಳಲ್ಲಿ ನಿಂತು ಹುಟ್ಟುಹಾಕಿ, ಜಳ್ಳ ಒತ್ತಿ ದೋಣಿಯನ್ನು ಮುನ್ನೂಕಿ ಈಚೆ ದಡವನ್ನು ಮುಟ್ಟಿಸುವುದು ಸಾಹಸದ ಕೆಲಸ. ಉಪ್ಪಿನಂಗಡಿ ಕಡವನ್ನು ದಾಟಿ ಬಂದ ಗಾಡಿಗಳು ಕಡಬ, ಮರ್ದಾಳ, ಸುಬ್ರಹ್ಮಣ್ಯವನ್ನು ಸೇರಬೇಕಾದರೆ ಹೊಸಮಠ ಕಡವಿನಲ್ಲಿಯೂ ಇದೇ ಸುಖೋಪಚಾರವನ್ನು ಅನುಭವಿಸಿಯೇ ತೀರವನ್ನು ಸೇರಬೇಕು. ಆ ಕಾಲದಲ್ಲಿ ಪಾಣೆಮಂಗಳೂರಲ್ಲಿ ಅಲ್ಲದೆ ಬೇರಾವ ಕಡವಿಗೂ ಅಷ್ಟು ಸಂಕವಿರಲಿಲ್ಲ.

ಉಪ್ಪಿನಂಗಡಿ ಕಡವು ವಿಶಾಲವಲ್ಲದೆ ಪಶ್ಚಿಮ ಘಟ್ಟದಿಂದ ಹರಿದು ಬರುವ ನೇತ್ರಾವತಿ, ಕುಮಾರಧಾರಾ ನದಿಗಳ ಸಂಗಮ. ಅಲ್ಲಿ ಎರಡು ಹೊಳೆಗಳೂ ನಿಂತು ಮುಂದುವರಿಯಬೇಕಾದುದರಿಂದ ಒಯ್ಲು ಕಡಮೆ. ಆದರೆ ಹೊಸಮಠದಲ್ಲಿ ಕುಮಾರಧಾರೆಯು ನೇತ್ರಾವತಿಯನ್ನು ಉಪ್ಪಿನಂಗಡಿಯಲ್ಲಿ ಕೂಡುವ ತವಕದಿಂದ ಎಂಬಂತೆ ಒಬ್ಬಂಟಿಯಾಗಿ ಹರಿಯುವುದರಿಂದ ಸೆಳೆತ ವಿಪರೀತ. ಈ ಸೆಳೆತದ ರಭಸಕ್ಕೆ ಪಳಗಿದ ನಾವಿಕರೂ ಎಷ್ಟೋ ಸಲ ತಮ್ಮ ಜಂಗಲ್ ದೋಣಿಯಲ್ಲಿ ಹತ್ತಿರದ ರಾಮಕಯದ ಸುಳಿಗೆ ಸಿಕ್ಕಿ ತಿರ್ರನೆ ತಿರುಗಿ ದೋಣಿಯೊಂದಿಗೆ ಮುಳುಗಿ ಆಸುತೊರೆದ ಸಂದರ್ಭಗಳು ಹಲವಾರು. ಇದನ್ನೆಲ್ಲಾ ಜಿಲ್ಲಾಧಿಕಾರಿಗಳು ಅರಿತವರು. ಊರವರು ಮಾನ್ಯ ಅತಿಥಿಗಳನ್ನು ಈ ಪರಿಸ್ಥಿತಿಯಲ್ಲಿ ಸ್ವಾಗತಿಸುವುದು ಸೂಕ್ತವಲ್ಲದುದರಿಂದ ಮರ್ದಾಳ ಬೀಡಿನ ಸಾರೋಟು ಗಾಡಿ, ಮನೆಯ ಶೃಂಗರಿಸಿದ ಬೆಟ್ಟದಪುರದ ಟಾಕಣ ಕುದುರೆಯಂಥ ಬಿಳಿ ಎತ್ತುಗಳಿರುವ ಗಾಡಿಗಳನ್ನು ಹೊಂದಿಸಿದ್ದರು. ಅಂತಹ ಶೋಭೆಯ ಬಿಳಿ ಎತ್ತುಗಳಿಗೆ ಜೂಲಿ ಹೊದಿಸಿ, ಕೊಂಬುಗಳಿಗೆ ಲಕಲಕಿಸುವ ಹಿತ್ತಾಳೆಯ ಮುಗುಳಿಯ ತೆರೆದ ಗುಬ್ಬಿ ಸಿಕ್ಕಿಸಿ, ಅದಕ್ಕೆ ತೇರಿನಂತೆ ತೋರುವ ವಿವಿಧ ಬಣ್ಣದ ಉಣ್ಣೆಯ ಗೊಂಡೆಯನ್ನು ತೊಡಿಸಿ, ಕತ್ತಿಗೆ ಮೂರು ನಾಲ್ಕು

ಸುತ್ತು ಹುರಿಗೆಜ್ಜೆ, ಕಿರುಗೆಜ್ಜೆಗಳಿಂದ ಮಾಡಿದ ಸರಗಳನ್ನು ಹಾಕಿ ಕೊಂಬುಗಳ ತಳಕ್ಕೆ ತಲೆಗೆ ಎರಕವಾಗುವಂತೆ ಬಿಲ್ಲಿನ ಆಕಾರದ ಕಂಚಿನ ಹೊಳೆಯುವ ಸರಪಳಿಗಳನ್ನು ಇಳಿಯಬಿಟ್ಟಾಗ ಅವುಗಳನ್ನು ನೋಡುವುದೇ ಒಂದು ಸೊಬಗಿನ ಸಿರಿ; ಸಾಕಿದವನಿಗೆ ಹೆಮ್ಮೆಯ ಗರಿ! ಗಾಡಿ ಹೊಡೆಯುವಾತನಿಗೆ ಸಂತಸದ ಸಡಗರ. ಇದೇ ರೀತಿಯಲ್ಲಿ ಸಜ್ಜಾಗಿ ನಿಂತ ಬೀಡಿನ ಸಾರೋಟು, ಅತ್ತಾಜೆ ಅಣ್ಣು ಶೆಟ್ಟರ, ಅಳೇರಿಯ ಗಾಡಿಗಳಿಗೆ ಬೇಕಷ್ಟು ಮೆತ್ತನೆಯ ಬೈಹುಲ್ಲನ್ನು ಹರವಿ ಒಂದೊಂದು ಗಾಡಿಗೆ ಮೂರು ನಾಲ್ಕು ಕಂಬಳಿಗಳನ್ನು ಉದ್ದಕ್ಕೆ ಹಾಸಿ, ಅದರ ಮೇಲೆ ನಯವಾದ ಜಮಖಾನವನ್ನು ಬಿಡಿಸಿ, ಅಲ್ಲಲ್ಲಿ ಹತ್ತಿಯ ಲೋಡು, ತಲೆದಿಂಬುಗಳನ್ನು ಹೊಂದಿಸಿ ಊರ ಹಿರಿಯರು ಸಿದ್ಧರಾದರು. ಅತಿಥಿಗಳು ಹೊಸಮಠಕ್ಕೆ ಇಷ್ಟೇ ಹೊತ್ತಿಗೆ ಮುಟ್ಟುವರೆಂಬುದನ್ನು ತಿಳಿದು, ಆ ಸಮಯ ಅವರನ್ನು ಎದುರುಗೊಳ್ಳಲು ಎಳನೀರ ಗೊನೆಗಳನ್ನು ಗಾಡಿಗೆ ಹೇರಿ ಹೊಸಮಠಕ್ಕೆ ಹೊರಡಲನುವಾದರು. ಪೆಂಡಿಯಿಂದ ತೆಗೆದ ಮುಂಡನ್ನು ಉಟ್ಟು ಕರಿಕೋಟನ್ನು ತೊಟ್ಟು, ಕೋಟಿನ ಒಂಬತ್ತು ಗುಂಡಿಗಳನ್ನೂ ಹಾಕಿ, ಜರಿಯ, ಕೆಂಪು ಪಟ್ಟೆಶಾಲನ್ನು ಮುಂಡಾಸು ಸುತ್ತಿ ಅಂಥದೇ ಜರಿಯ ಶಾಲನ್ನು ಕತ್ತಿಗೆ ಹಾಕಿ, ಕಂಕುಳ ಎಡೆ ಬರುವಂತೆ ಮಾಡಿ ಗಂಟಿಕ್ಕಿ, ಕಲೆಕ್ಟರರನ್ನು ಸ್ವಾಗತಿಸಲು ಸಿದ್ಧರಾದ ಹಿರಿಯರನ್ನು ನೋಡುವಾಗ ಸಮವಸ್ತ್ರದ ದವಾಲಿಯನ್ನು ಹಾಕಿದ ಪೇದೆಗಳಂತೆ ಕಾಣುತ್ತಿದ್ದರು. ನಮಗಿಂತ ಮೊದಲೇ ಹೋಗಿ ಅಲ್ಲಿ ಕೂಡಿದ್ದ ಕಡಬ ಪೇಟೆಯ ಸಾಹುಕಾರ ನಾರಾಯಣ ಪೈ, ವೆಂಕಟೇಶ ಪೈ ಸಹೋದರರೂ, ನೆರೆಕರೆಯ ಹಿರಿಯರೂ- ಅತಿಥಿಗಳೂ ಯಾವುದೇ ಅನಾನುಕೂಲತೆ, ಅಪಾಯಗಳಿಗೀಡಾಗದೆ ಹೊಸಮಠದ ಈಚೆ ದಡವನ್ನು ಮುಟ್ಟುವಂತೆ ಸರ್ವ ಸನ್ನಾಹವನ್ನೂ ಸಮರ್ಪಕವಾಗಿ ಮಾಡಿದ್ದರು.

ನಾವು ಮನೆಯಿಂದ ಹೊರಟವರು ಸಾಧಾರಣ ಒಂಬತ್ತು ಗಂಟೆಗೆ ಹೊಸಮಠ ಕಡವಿನ ಬಳಿಗೆ ಬಂದೆವು. ಕಾಣಿಯೂರು ಪಟೇಲ ಸಂಜೀವ ರೈಗಳ ಸಹಕಾರದಿಂದ ಉಪ್ಪಿನಂಗಡಿಯ ಮೂರು ಎತ್ತಿನ ಗಾಡಿಗಳಲ್ಲಿ ಬಂದ ಕಲೆಕ್ಟರರು ಆಚೆ ದಡದಲ್ಲಿ ಜಂಗಲ್ ಏರಲು ಸಿದ್ಧರಾಗಿ ನಿಂತಿದ್ದರು. ಅವರೊಂದಿಗೆ ಮಂಗಳೂರಿನ ನುರಿತ ಶಿಕಾರಿ-ಅತ್ತಾವರ ಎ.ವಿ. ಪೂಂಜರೂ,

ಆಜಾನುಬಾಹು ನಟ್ಟಜೈಲು ಸಂಜೀವ ರೈಗಳೂ ಇದ್ದುದು ಈಜೆ ದಡಕ್ಕೆ ಕಾಣುತ್ತಿತ್ತು. ನನಗಾಗ ಹದಿನಾಲ್ಕು, ಹದಿನೈದು ವರ್ಷ. ಹೈಸ್ಕೂಲಿಗೆ ರಜಾ ಸಮಯವಾದುದರಿಂದ ನಾನು ಮನೆಗೆ ಬಂದಿದ್ದೆ. ಬೇಟೆಯ ಸಂಭ್ರಮ ದಲ್ಲಿ ಪಾಲ್ಗೊಳ್ಳಲು ಉತ್ಸುಕನಾಗಿ, ಜಿಲ್ಲಾಧಿಕಾರಿಗಳನ್ನು ಕಾಣುವ ತವಕ ದಿಂದ ನನ್ನ ಸ್ಕೌಟ್ ಡ್ರೆಸ್ಸನ್ನು ನೀಟಾಗಿ ಧರಿಸಿ ಅಜ್ಜನೊಡನೆ ನಿಂತಿದ್ದೆ. ಚಿಕ್ಕ ದೋಣಿಯಲ್ಲಿ ಬರುವುದಕ್ಕಿಂತ, ಜಂಗಲಿನಲ್ಲಿಯೇ ಈಜೆಯ ದಡ ಮುಟ್ಟುವುದು ಅನುಕೂಲವೆಂದು ಜಂಗಲ್ ಏರಿ ಅದರ ಗೂಟಗಳನ್ನು ಹಿಡಿದು ಸವಾರಿ ಮಾಡಿದ ಅತಿಥಿಗಳು ಈಜೆ ದಡ ಸೇರಿದಾಗ ನೆರೆದವರೆಲ್ಲ ವಿನೀತರಾಗಿ ನಮಸ್ಕಾರ ಮಾಡಿದುದನ್ನು ಕಂಡ ನಾನೂ ಸೆಟೆದು ನಿಂತು- ಸ್ಕೌಟ್ ಪದ್ಧತಿಯಂತೆ - ಸೆಲ್ಯೂಟ್ ಮಾಡಿದುದನ್ನು ಕಂಡ ದೊರೆಗಳೂ, ಅತಿಥಿಗಳೂ ಸುಪ್ರೀತರಾಗಿ ನನಗೆ ಅದೇ ರೀತಿ ಮರುವಂದನೆ ಸಲ್ಲಿಸಿ ನನ್ನ ಬೆನ್ನು ತಟ್ಟಿದರು. ಬಳಿಕ ಊರ ಹಿರಿಯರಿಗೆ ಪ್ರತಿ ನಮಸ್ಕಾರಗೈದರು; ನನ್ನ ಹೆಮ್ಮೆಗೆ ಪಾರವಿರಲಿಲ್ಲ. ದಡದಲ್ಲಿ ಬಂದು ಕುಳಿತ ಅತಿಥಿಗಳಿಗೆ ಎಳ ನೀರ ಸಮಾರಾಧನೆಯನ್ನು ಮಾಡಿ, ಅವರ ಕ್ಷೇಮ ಸಮಾಚಾರವನ್ನು ವಿಚಾರಿಸಿ ದಾರಿಯಲ್ಲಿ ಅವರಿಗಾದ ಬವಣೆಯನ್ನರಿತೆವು. ಅಲ್ಲಿಂದ ಮರ್ದಾ ಳಕ್ಕೆ ಗಾಡಿಯೇರುವಾಗ ಗಂಟೆ ಹನ್ನೊಂದಾಯಿತು. ನಮ್ಮ ಗಾಡಿಸವಾರಿ ಮರ್ದಾಳಕ್ಕೆ ಬರಬೇಕಾದರೆ ಹೆಚ್ಚೆಂದರೆ ಒಂದೂವರೆ ಗಂಟೆಯ ದಾರಿ. ಆದರೆ ಅಂದಿನ ಪ್ರಯಾಣಿಕರು ದೊರೆಗಳೂ, ಮಂಗಳೂರಿನ ಸುಖಜೀವಿಗಳೂ ಆಗಿದ್ದುದರಿಂದ ಗಾಡಿಯು ಮಂದಗತಿಯಿಂದ ಮುಂದುವರಿದು, ಇವರನ್ನು ಎದುರ್ಗೊಳ್ಳಲೆಂದು ಶೃಂಗರಿಸಿದ್ದ ಮರ್ದಾಳ ಶಾಲಾ ವಠಾರವನ್ನು ಸೇರುವಾಗ ಮಧ್ಯಾಹ್ನ ಒಂದೂಕಾಲು ಗಂಟೆ ಆಗಿತ್ತು.

ಎಲ್ಲರಿಗೂ ಪ್ರಯಾಣದ ದಣಿವಿನಿಂದಲೂ, ಹೊತ್ತು ಮೀರಿದ ದೆಸೆ ಯಿಂದಲೂ ಹೊಟ್ಟೆಯು ಚುರುಗುಟ್ಟುತ್ತಿತ್ತು. ಆದುದರಿಂದ ವಿಚಾರ ವಿನಿಮಯದ ಮುನ್ನ ಊಟವೆಂದು ಅಭಿಪ್ರಾಯಪಟ್ಟರು. ಅಂದಿನ ಊಟವು ಊರಿನ ವಿವಿಧ ಜಾತಿಯವರ ಸಮ್ಮಾನವೆಂದು ಮೊದಲೇ ನಿಶ್ಚಯ ವಾಗಿತ್ತು. ಮಾಂಸಾಹಾರ, ಸಸ್ಯಾಹಾರಗಳ ಭೋಜನ ಕೂಡಿದ್ದುದರಿಂದ ಬರಿಯ ಸಸ್ಯಾಹಾರಿಗಳಾರೂ ಅಲ್ಲಿ ಆಹಾರ ಸ್ವೀಕರಿಸುವಂತಿರಲಿಲ್ಲ.

ಮಾಂಸಾಹಾರಿಗಳಾದ - ಇನ್ನಷ್ಟು ಸ್ಪಷ್ಟಗೊಳಿಸುವುದಾದರೆ ಮಿಶ್ರಾಹಾರಿಗಳಾದ - ಬಂಟರೂ, ಗೌಡರೂ ಮಾತ್ರ ಅಲ್ಲಿ ಊಟ ಮಾಡಲು ತಯಾರಿದ್ದರು. ಉಳಿದ - ಕೊಂಕಣಿ, ಜೈನ - ಬಂಧುಗಳು ತಮ್ಮ ವಿಶೇಷ ಔತಣದ ಅಡುಗೆಯನ್ನು, ಬಡಿಸಲು ಅಡಿಗೆಯಾಳುಗಳನ್ನೂ ಕಳುಹಿಸಿದ್ದರು. ಎದುರು ಬದುರಾಗಿ ಬೆಂಚುಗಳನ್ನು ಜೋಡಿಸಿ - ಎಲೆ ಹಾಸಲೂ, ಕುಳಿತುಕೊಳ್ಳಲೂ ಸಿದ್ಧತೆಯನ್ನು ಮಾಡಿದ್ದರು. ಉಪ್ಪಿನಕಾಯಿ ತಯಾರಿಯಲ್ಲಿ ಪ್ರಸಿದ್ಧರೆಂದಿದ್ದ ಜೈನರ ಮಾವಿನಕಾಯಿಯ ಹುರಿದ ಉಪ್ಪಿನಕಾಯಿಯನ್ನು ಮರ್ದಾಳ ಬೀಡಿನ ತಿಮ್ಮಯ ಕೊಂಡೆಯವರ ಅಡುಗೆಯಾಳು ಅಗ್ರಪಂಙ್ತಿಯಲ್ಲಿ ಕುಳಿತ ಕಲೆಕ್ಟರರ ಎಲೆಯ ತುದಿಗೆ ಬಡಿಸಿದೊಡನೆ ತೋರ್ಬೆರಳಿಂದ ಮುಟ್ಟಿ, ನಾಲಿಗೆಗಿರಿಸಿದ ಅವರು ಅದರ ರುಚಿಗೆ ಬಾಯಿ ಚಪ್ಪರಿಸಿಕೊಂಡರೂ ಖಾರಕ್ಕೆ ಇಳಿಯುವ ಕಣ್ಣೀರನ್ನು ಎಡಗೈಯಲ್ಲಿದ್ದ ಅಂಗವಸ್ತ್ರದಿಂದ ಒರೆಸಿಕೊಳ್ಳಬೇಕಾಯಿತು! ಇದರೊಂದಿಗೆ ಬಡಿಸಿದ ಜೈನರ ಮೂಡೆಯ ತುಂಡುಗಳನ್ನು ಒಗ್ಗರಣೆಯಿಕ್ಕಿದ ಗಟ್ಟಿಮೊಸರಿನೊಂದಿಗೆ ಕಲಸಿ ಆ ಆಂಗ್ಲ ವಿದ್ಯಾಪರಿಣತರು ತಿನ್ನುವ ರೀತಿಯನ್ನು ಕಂಡರೆ ಹಳ್ಳಿಯ ಹೊಟ್ಟೆಬಾಕನೂ ನಾಚಬೇಕು. ಮತ್ತೆ ಬಡಿಸಲಾದ ಕಟ್ಟುಮಂಡಿಗೆ - ಭಕ್ಷ್ಯಗಳ ರಾಜ. ಜೈನರಲ್ಲದೆ ಬೇರಾರಿಗೂ ಇಂದಿನವರೆಗೆ ಆ ಪಾಕವು ಕರಗತವಾಗಿಲ್ಲ! ಅದರ ಉರುಟುರುಟಾದ ತುಂಡುಗಳ ಸೊಬಗನ್ನು ನೋಡುವಾಗಲೇ ಬಾಯಲ್ಲಿ ನೀರೂರುತ್ತಿತ್ತು. ಬಿಡಿಸಿ ನೋಡಿದರೆ ಪದರುಪದರಾಗಿ ಅಕ್ಕಿಯ ಅತಿ ತೆಳು ಜಾಲಂದರದಂತಹ ದೋಸೆಯ ಮೇಲೆ ಕುಂಕುಮ ಕೇಸರಿ, ಬಾದಾಮಿ, ಸಕ್ಕರೆಯ ರವೆಯೊಂದಿಗೆ ಬೆರೆಸಿ ಪನ್ನೀರ ಪರಿಮಳ ಬರುವ ಆ ಸಿಹಿ ಬಾದಾಮಿ ಸಕ್ಕರೆ ಖಾದ್ಯದ ರುಚಿಯನ್ನು ತಿಂದವರೇ ಬಲ್ಲರು! ಬಾಯಿ ಚಪ್ಪರಿಸುತ್ತಿದ್ದ ದೊರೆಗಳು - "ಎಕ್ಸಲೆಂಟ್, ಟೇಸ್ಟೀ" ಎಂದೇನೇನೋ ಉದ್ಗರಿಸುತ್ತ ಮುಂದಿನದೇನೆಂದು ಪ್ರಶ್ನಾರ್ಥಕವಾಗಿ ಬಂಟ್ರ ಪಟೇಲರ ಮುಖವನ್ನು ದಿಟ್ಟಿಸುವಾಗ ಪಟೇಲರು, "ಭಟ್ಟರೇ, ಬಡಿಸಿ" ಎಂದರು. ಬೈಪಾಡಿತ್ತಾಯರ ಕಳಮೆಯ ಅನ್ನದ ಮೇಲೆ ಇಕ್ಕಿದ, ಅಂದೇ ಬೆಣ್ಣೆ ಕಾಯಿಸಿದ ತುಪ್ಪದ ಪರಿಮಳಕ್ಕೆ ಸೋತ ಕಲೆಕ್ಟರರು ಸಾಕೆಂದು ಹೇಳುವುದನ್ನೂ ಮರೆತಂತೆ ಕಾಣುತ್ತಿತ್ತು. ತಿಳಿಸಾರನ್ನು ಬಡಿಸಿದೊಡನೆ

ಪಟೇಲರು ಅನ್ನವನ್ನು ಕಲಸಿ ಊಟ ಮಾಡುವುದನ್ನು ಕಂಡ ಕಲೆಕ್ಟರರು ಬ್ರಾಹ್ಮಣರ ಊಟದ ರೀತಿ ಇದೆಂದು ಊಹಿಸಿ ತಾವೂ ಹಾಗೆಯೇ ತುತ್ತುಗಳನ್ನು ಬಾಯಿಗಿಟ್ಟರು. ಒಂದಾದ ಮೇಲೊಂದರಂತೆ ಕೊದ್ದೆಲು, ಹುಳಿ ಬಡಿಸಿದ ನಂತರ ಉಳಿದ ಅನ್ನಕ್ಕೆ ಕಡಬ ಸಾಹುಕಾರ ನಾರಾಯಣ ಪೈಗಳ ದಾಳಿ ತೋವೆ! ದಾಳಿತೋವೆಯೊಂದಿಗೆ ಪತ್ರೊಡೆಯನ್ನು ಸುರಿಸಿ ತಿನ್ನುವ ವೈಖರಿಯಲ್ಲಿ ಕಲೆಕ್ಟರರು ಕೊಂಕಣಿಗರನ್ನೂ ಮೀರಿಸಿದರೆನ್ನಬೇಕು! ಹೀಗೆ- ಜೈನ, ಬ್ರಾಹ್ಮಣ, ಕೊಂಕಣಿಗರ- ಸಸ್ಯಾಹಾರದ ಸೇವೆಯಾಯಿತು. ಇನ್ನು - ಬಂಟ, ಗೌಡರ - ಮಿಶ್ರಾಹಾರದ ಭೋಜನದ ಸರದಿ ಕಾದಿತ್ತು.

ನಮ್ಮ ಮನೆಯ ಗರಿಮುರಿಯಾದ ಕುರುಕುರು ರೊಟ್ಟಿಯ ಮೇಲೆ ಕೋಳಿಯ ಕೊದ್ದೆಲನ್ನು ಹದವಾದ ತುಂಡುಗಳೊಂದಿಗೆ ಗೋರಿ ಗೋರಿ ಬಡಿಸುವಾಗ ಇಷ್ಟರ ತನಕದ ಊಟವನ್ನೂ ಮರೆತವರಂತೆ ದೊರೆಗಳು ಪರಿಮಳವನ್ನು ಆಘ್ರಾಣಿಸಿ ಆಸ್ವಾದಿಸತೊಡಗಿದರು. ಬಂಟರ ಪ್ರಸಿದ್ಧ ಸಿಹಿ ತಿಂಡಿ ಸುಕ್ಕಿನುಂಡೆಯ ಸರದಿ ಬಂತು. ಅದರ ಅಂದವನ್ನು ತಿರುಗಿಸಿ, ತಿರುಗಿಸಿ ನೋಡಿದ ದೊರೆಗಳು ಕೈಯಲ್ಲಿಯೇ ಹುಡಿಮಾಡಿ ಬಾಯಿಗಿಕ್ಕಿ ನಾಲಗೆ ಚಪ್ಪರಿಸಿ ಆ ರುಚಿಗೆ ಸೋತೆನೆಂಬ ಮುಖಭಾವವನ್ನು ಪ್ರದರ್ಶಿಸಿದರು. ಅಜ್ಜನೆಂದರು - "ಇದು ಸುಕ್ಕಿನುಂಡೆ. ಶುದ್ಧ ಬೆಲ್ಲ, ಅರಳು, ಗೋಡಂಬಿ ಬಾದಾಮಿ, ಏಲಕ್ಕಿ ಮಿಶ್ರಿತ ಉಂಡೆಯನ್ನು ಅಕ್ಕಿಯ ತೆಳು ಹಿಟ್ಟಿನಲ್ಲಿ ಅದ್ದಿ ಗಾಣದ ತೆಂಗಿನೆಣ್ಣೆಯಲ್ಲಿ ಕಾಯಿಸಿದ ಈ ಉಂಡೆಯು ನಮ್ಮ ಸಮಾಜದಲ್ಲಿ ನಡೆಯುವ ಎಲ್ಲಾ ಶುಭಶೋಭನಗಳಲ್ಲೂ ಇರುತ್ತದೆ. "ಓ ಹೀಗೊ?!" ಎಂದು ಕಲೆಕ್ಟರರು ಮೆಚ್ಚುಗೆ ವ್ಯಕ್ತಪಡಿಸಿ, ಭೋಜನವನ್ನು ಮುಂದುವರಿಸಿದರು.

ಕೊಲ್ಯ ಮಾಸ್ತರ ಸುಬ್ರಾಯ ಗೌಡರ ಅದ್ದೂರಿಯ ಔತಣದ ಒಂದು ಭಾಗವು ಮಾತ್ರ ಇನ್ನು ಬಾಕಿ. ಊರ ಹಂದಿಯ ಹುರಿದ ಮಾಂಸ; ಅಂಗುಲ - ಅಡ್ಡಗಲ ಕ್ಯೊದ ಗಟ್ಟಿ ರೊಟ್ಟಿಯನ್ನು ಬಡಿಸುವಾಗ ಬಂದ ಪರಿಮಳಕ್ಕೇ ಸೋತ ಅತಿಥಿಗಳು 'ಅಯ್ಯೋ, ಇದು ಮೊದಲೇ ಬರಬಾರದಾಗಿತ್ತೇ? ಬೇಕಾದಷ್ಟು ತಿನ್ನೋಣವೆಂದರೆ ಹೊಟ್ಟೆ ತುಂಬುತ್ತಾ ಬರುತ್ತಿದೆ.

ಬಿಟ್ಟು ಏಳೋಣವೆಂದರೆ ಬೇಕೆಂಬ ಆಸೆ ಬೆಳೆಯುತ್ತಿದೆ' ಎಂಬಂಥ ಮುಖ ಭಾವವನ್ನು ಪ್ರದರ್ಶಿಸುತ್ತಿದ್ದಾರೆ. ರೊಟ್ಟಿಯ ತುಂಡುಗಳನ್ನು ಕಂಡರೆ ಇದನ್ನು ಜಗಿಯುವ ಹಲ್ಲುಗಳು ಉದುರಿಹೋಗವೆ? ಎಂಬಂತಿದ್ದರೆ ಬಾಯಿಗೆ ಇಕ್ಕಿ ಅತ್ತಿತ್ತ ದವಡೆಯನ್ನು ಆಡಿಸಿದರೆ ಸಾಕು; ಆ ರೀತಿಯ ಪಾಕದಲ್ಲಿ ಬೆಂದ ರೊಟ್ಟಿಯು ರುಚಿಕರವಾಗಿ ಕಡುಬಿನಂತೆ ಕರಗುತ್ತಿತ್ತು. ಇಂದು ಅಂಥ ರೊಟ್ಟಿ, ಪದಾರ್ಥಗಳು ಆ ಸಮಾಜದಲ್ಲಿಯೇ ಅಪೂರ್ವ. ಆ ತೆರನಾದ ಅಡುಗೆಯು ಗೌಡ ಸಮಾಜದ ಮಹಿಳೆಯರಿಗೇ ಮೀಸಲು. ಆದರೆ ನವನಾಗರಿಕತೆಯು ಆ ವೈಶಿಷ್ಟ್ಯಪೂರ್ಣವಾದ ಅಡುಗೆಯನ್ನು ಅಡಗಿಸಿಬಿಟ್ಟಂತೆ ಕಾಣುತ್ತದೆ. ಒಂದು ಸೇರು ಅಕ್ಕಿಗೆ ನಾಲ್ಕು ರೊಟ್ಟಿ. ಗಟ್ಟಿ ಹಿಟ್ಟನ್ನು ಅಂಗೈ ದಪ್ಪದ ಬಳಪದ ಸುಡುವ ಕಾವಲಿಯಲ್ಲಿಟ್ಟು ತಟ್ಟಿ ಮಣ್ಣಿನ ಬಾವಡೆ ಮುಚ್ಚಿ, ಸೊಪ್ಪು ತರಲು ಮನೆಯ ಬದಿಯ ಗುಡ್ಡಕ್ಕೆ ಹೋದ 'ಉಗ್ಗೊದಬ' ಕಟ್ಟಸೊಪ್ಪನ್ನು ತಂದು ಹಟ್ಟಿಯಲ್ಲಿ ಹರಡಿ ಬಂದೇ ಅಡಿ ಭಾಗವು ಬೆಂದ ರೊಟ್ಟಿಯನ್ನು ಮತ್ತೊಂದು ಮಗ್ಗುಲಿಗೆ ಮಗುಚಿಹಾಕಿ ಪುನಃ ಸೊಪ್ಪು ಹೆರೆಯಲು ಹೋದರೆ ಮತ್ತೊಂದು ಹೊರೆ ಸೊಪ್ಪನ್ನು ತಂದೇ ಕಾವಲಿಯಿಂದ ಆ ರೊಟ್ಟಿಯನ್ನು ತೆಗೆಯುವುದೆಂದು ಪ್ರತೀತಿ. ಇಷ್ಟು ಹೊತ್ತಾದರೂ ರೊಟ್ಟಿ ಕರಟದೆ ಬೇಕಷ್ಟೇ ಬೇಯುವುದು. ಹಲ್ಲಿಲ್ಲದವರಾದರೂ, ಸಮತೂಕದಲ್ಲಿ ಬೆಂದು ಕೈಯಿಂದ ಹಾಳೆ ಹಾಳೆಯಾಗಿ ಬಿಡಿಸಿ ಬಾಯಿಗಿಕ್ಕಿ ಸುಲಿದರೆ ನೀರಾಗುವ ಇಂಥ ರೊಟ್ಟಿ ಈ ದಿನಗಳಲ್ಲಿ ಕಾಣಸಿಗದು. ಅದು ಕೇವಲ ಸ್ಮರಣೆಗೆ ಸಂದ ಗತಕಾಲದ ಪಳೆಯುಳಿಕೆಯಾಗಿದೆ, ಇಂದು! ಈ ಸೊಗಸಾದ ಭೋಜನವನ್ನು ಉಂಡ ಅತಿಥಿಗಳು ಲೋಟಕ್ಕೆ ಬಗ್ಗಿಸಿಕೊಟ್ಟ ಎಳನೀರನ್ನು ಕುಡಿದು ತೇಗುತ್ತಾ ಕೈ ತೊಳೆದು ಒಳಗೆ ಬಂದು ಒರಗು ಕುರ್ಚಿಯಲ್ಲಿ ಅರೆಗಣ್ಣು ಮಾಡಿ ವಿಶ್ರಮಿಸಿದರು.

ಮೂರೂವರೆ ಗಂಟೆಯ ಹೊತ್ತಿಗೆ ಎದ್ದ ಗೋನ್ ಸಾಹೇಬರು ಬಂಟ್ರನೆಕ್ಕಿಲಾಡಿ, ನೂಜಿಬಾಳ್ತಿಲ, ಸುಂಕದಕಟ್ಟೆ, ಕೊಂಬಾರು ಗ್ರಾಮಗಳ ಪಟೇಲರನ್ನು ಬಳಿಗೆ ಕರೆದರು; ತಾವು ಸುಂಕದಕಟ್ಟೆ ಬಂಗ್ಲೆಗೆ ಹೋಗುವುದಾಗಿಯೂ ಮರುದಿನ ಬೆಳಗ್ಗೆ ಒಂಬತ್ತೂವರೆ ಗಂಟೆಗೆ ಊರ ಬೇಟೆಗಾರ, ಸೋವತರೊಂದಿಗೆ ಆದಷ್ಟು ಜನರನ್ನು ಕೂಡಿಸಿಕೊಂಡು ಬರುವುದಲ್ಲದೆ,

ಸುಂಕದಕಟ್ಟೆಯ ಆಸುಪಾಸಿನಲ್ಲಿ ಗದ್ದೆಯ ಪೈರನ್ನು ನಾಶಮಾಡಿ, ಯಾವ ಕಾಡಿನಲ್ಲಿ ಮೃಗಗಳು ಅವಿತಿವೆಯೆಂಬುದನ್ನು ಸುರಿತ ಸೋವುಗಾರರ ಅರಸು ವಿಕೆಯಿಂದ ತಿಳಿದು ಗ್ರಾಮ ಪಟೇಲರು ತಿಳಿಸಬೇಕೆಂದೂ ತಾಕೀತು ಮಾಡಿದರು. ಬಿಟ್ಟ ಕಣ್ಣುಗಳನ್ನು ಮುಚ್ಚದೆ ಅವರೆಡೆಗೆ ನೋಡುತ್ತಿದ್ದ ನನ್ನನ್ನು ಕಂಡು - "Boy, we shall meet tomorrow" ಎಂದು ಮತ್ತೊಮ್ಮೆ ನನ್ನ ಬೆನ್ನುತಟ್ಟಿ ಗ್ರಾಮಸ್ಥರ ನಮಸ್ಕಾರಗಳನ್ನು ವಿನಯದಿಂದ ಸ್ವೀಕರಿಸಿದರು. ಬಳಿಕ, ಅದಾಗಲೇ ಸಿದ್ಧವಾಗಿದ್ದ ಸಾರೋಟು ಸವಾರಿ ಬಂಡಿಯನ್ನು ಏರುತ್ತಿದ್ದಂತೆ ಮಧ್ಯಾಹ್ನ ಉಂಡಿದ್ದ ಊಟವನ್ನು ಹೊಗಳಿದರು. ಮುಂದೆ ನೊಗ ಹೇರಿ ಸಿದ್ಧವಾಗಿ ನಿಂತಿದ್ದ ನಮ್ಮ ಸವಾರಿ ಗಾಡಿಯ ಎದುರು ಮೂಕಿಯತ್ತಣಿಂದ ಗಾಡಿಯಾಳು ಅಬ್ಬೋಕರೆಯು ಎತ್ತುಗಳ ಬೆನ್ನಿಗೊಮ್ಮೆ ಬಾರುಕೋಲಿನಿಂದ ಚಟೀಲೆಂದು ಬಾರಿಸಿ ಮುನ್ನುಗ್ಗಿ ಗಾಡಿಯೇರಿದಾಗ ಎತ್ತುಗಳು ಗುತ್ತು ತೆಗೆದು ನಾಗಾಲೋಟದಿಂದ ಓಡಲು ಪ್ರಾರಂಭಿಸಿದವು. ಹಿಂದಿನ ಗಾಡಿಗಳೂ ಅದೇ ರೀತಿಯಿಂದ ಮುಂದೊತ್ತಿ ಮರ್ದಾಳ ಜೈನ ಬಸದಿಯ ತಿರುವಿನಲ್ಲಿ ಮರೆಯಾದವು. ನಾನು ಹಿರಿಯರೊಂದಿಗೆ ಮನೆ ಮುಟ್ಟುವಾಗ ಗಂಟೆ ಎಂಟು. ವಿವಿಧ ಪಕ್ವಾನ್ನಗಳನ್ನು ಹೊಟ್ಟೆತುಂಬ ಉಂಡು, ತಾಯಿ ಕೊಟ್ಟ ಹಾಲನ್ನು ಕುಡಿದು, ಹೊಟ್ಟೆಯ ಭಾರವನ್ನು ತಾಳಲಾರದೆ ಕೂರುವ ಕಣ್ಣನ್ನು ಪ್ರಯಾಸದಿಂದ ಒತ್ತಿ, ಹಾಕಿದ್ದ ಸ್ಪೌಟ್ ಡ್ರೆಸ್ಸನ್ನು ಕಳಚಿ ಚಾಪೆಗೆ ಮೈ ಕೊಟ್ಟುದು ಮಾತ್ರ ನೆನಪು. ಮರುದಿನ ಮುಂಜಾನೆ ನಮ್ಮ ಮನೆಯ ಅಂಗಳ, ಕೊಟ್ಟಗೆಯಲ್ಲಿ - ಬೇಟೆಗಾಗಿ ಬಂದು ಸೇರಿದ - ಜನರ ಬೊಬ್ಬಾಟವನ್ನು ಕೇಳಿಯೇ ಎಚ್ಚರಗೊಂಡೆ.

ಲಗುಬಗೆಯಿಂದ ಎದ್ದು ಮುಖಕ್ಕೆ ನೀರು ಕಾಣಿಸಿ, ತಾಯಿಯವರು ಬಡಿಸಿದ ತಂಗಳನ್ನವನ್ನು ಮೊಸರಿನೊಂದಿಗೇ ಕಲಸಿ, ಉಪ್ಪಿನಕಾಯಿ, ಒಲೆಯಲ್ಲಿ ಸುಟ್ಟ ಒಣಕಲು ಮೀನಿನೊಂದಿಗೆ ಗಬಗಬನೆ ತಿಂದೆ. ಬೇಟೆಗೆ ನನ್ನನ್ನು ಕರೆಯುವರೋ ಇಲ್ಲವೋ ಎಂಬ ಶಂಕೆಯಿಂದ ನನ್ನ ದಿರಸಿಗೆ ಕೈ ಹಾಕಲು ಹವಣಿಸುತ್ತಿದ್ದೆ. ಆಗ ತಂದೆಯವರು ಗರ್ಜಿಸಿದರು - "ಎಲ್ಲಿಗೆ? ಆ ಗಲಾಟೆಯಲ್ಲಿ ನಿನಗೇನು ಕೆಲಸ?" ಈ ನುಡಿಯನ್ನು ಕೇಳಿದ್ದೇ ನನ್ನ ಉಲ್ಲಾಸಕ್ಕೆ ತಣ್ಣೀರೆರಚಿದಂತಾಯಿತು. ಹತ್ತಿರವಿದ್ದ ಅಜ್ಜಯ್ಯನವರನ್ನು

ಕಂಡು ಗೊಣಗಿದೆ - 'ನಿನ್ನೆ ಕಲೆಕ್ಟರರು ನನ್ನನ್ನೂ ಬರುವಂತೆ ಹೇಳಿರುವರು' ಎಂದು! ಅಜ್ಜಯ್ಯನವರೂ "ಹೌದು" ಎಂದಾಗ ತಂದೆಯವರು ಒಲ್ಲದ ಮನಸ್ಸಿನಿಂದ ಸಮ್ಮತಿಸಲೇಬೇಕಾಯಿತು. ತಂದೆಯವರಿಗೆ ಹಗಲು ಬೇಟೆ ಯೆಂದರೆ ಅಷ್ಟಕ್ಕಷ್ಟೆ. ಹಗಲು ಬೇಟೆಯಲ್ಲಿ ಅವರೇನೂ ನುರಿತ ಶಿಕಾರಿ ಯಲ್ಲ. ಕೋಳಿ ಅಂಕ, ರಾತ್ರಿಯ ಲೈಟ್ ಶಿಕಾರಿಯಲ್ಲಿ ಅವರದು ಎತ್ತಿದ ಕೈ. ಆದರೆ ಲೈಟ್ ಶಿಕಾರಿಯನ್ನು ಅಜ್ಜಯ್ಯನವರು ಮೆಚ್ಚುತ್ತಿರಲಿಲ್ಲ. ಇದು ಮೃಗಗಳ ಕಣ್ಣು ಕಟ್ಟಿ ಮೋಸದಿಂದ ಕೊಂದು ನಾಲಿಗೆಯ ಚಾಪಲ್ಯ ವನ್ನು ತೀರಿಸುವ ಪೌರುಷಹೀನ ವಿಹಾರ. ಹಗಲು ಬೇಟೆಯಾದರೆ ಮೃಗ ಗಳು ಪ್ರತಿಭಟಿಸಬಹುದು; ಇಲ್ಲವೇ ಸೋವು ತಿಳಿದು ಓಡಬಹುದು. ಇಲ್ಲಿ ಬೇಟೆಗಾರನು ತನ್ನ ಜಾಣ್ಮೆ, ತಂತ್ರಗಳನ್ನು ಪ್ರದರ್ಶಿಸಲು ಯೋಗ್ಯಾವಕಾಶ ವಿದೆ. ಕೋವಿ ಹಿಡಿಯುವ ತಾಕತ್ತಿದ್ದರೆ ಲೈಟು ಶಿಕಾರಿಯನ್ನು ಹೆಂಗಸರೂ ಮಾಡಬಹುದೆಂದು ಅಜ್ಜಯ್ಯ ಲೇವಡಿ ಮಾಡುತ್ತಿದ್ದರು. ಕಲೆಕ್ಟರರು ಶಿಕಾರಿಗೆ ಬಂದದ್ದಲ್ಲವಾದರೆ ತಂದೆಯವರು ಎಲ್ಲಿಯಾದರೂ ಕೋಳಿ ಅಂಕಕ್ಕೆ ಹೋಗುತ್ತಿದ್ದರು. ನನಗೆ ಅವರೊಂದಿಗೆ ಹೊರಡಲು ಅನುಮತಿ ದೊರಕಿಸಿಕೊಟ್ಟ ಅಜ್ಜಯ್ಯನವರಿಗೆ ಮನದಲ್ಲೆ ವಂದನೆಗಳನ್ನರ್ಪಿಸಿ, ಹಿಂದಿನ ದಿನದ ದಿರಸನ್ನೆ ಧರಿಸಿ ಹೊರಗೆ ಬಂದು ನೋಡುವಾಗ ಅಂಗಳ, ಕೊಟ್ಟಿಗೆಯಲ್ಲಿ ನೆರೆದಿದ್ದ ಬೇಟೆಯಾಳುಗಳು ತಮ್ಮ ತುಂಬಿಸುವ ಕೋವಿ ಗಳನ್ನು ಅಣಿಗೊಳಿಸುತ್ತಿದ್ದರು. ಕೆಲವರು ತೆಂಗಿನ ನಾರನ್ನು ಉಂಡೆಗೊಳಿ ಸುತ್ತಿದ್ದರೆ, ಕೆಲವರು ಡಬ್ಬಿಯಿಂದ ರಂಜಕವನ್ನು ಮುಚ್ಚಳಕ್ಕೆ ಸುರಿದು ತಮ್ಮ ಕೋವಿಗೆ ಬೇಕಾದ ಅಳತೆಯ ಮೂರು ನಾಲ್ಕು ಮುಚ್ಚಳ ರಂಜಕ ವನ್ನು ನಳಿಗೆಗಿಕ್ಕಿ ಅದನ್ನು ಎತ್ತಿ ಹಿಡಿದು ಪಾತಿಗೆ ತಟ್ಟಿ, ತಟ್ಟಿ ನಿಪ್ಪಲಿನ ಬಾಯಿಗೆ ಅಡಕವಾಗಿ ಬಂದು ಕೂತಿದೆಯೇ ಎಂದು ನೋಡುತ್ತಿದ್ದರು. ಬಳಿಕ ಅದಕ್ಕೆ ಕರಿಮದ್ದನ್ನು ತುಂಬಿಸಿ ತಮ್ಮ ಕೋವಿಯು ಇಂತಿಷ್ಟೇ ಬೆರಳು ಮದ್ದಿ ನಿಂದ ತುಂಬಬೇಕೆಂಬ ನಿರ್ಧಾರವಿದ್ದುದರಿಂದ, ತೆಂಗಿನಹುರಿಯನ್ನು ಮದ್ದು ಸೋರಿಹೋಗದಂತೆ ಈಡು ಬಲವಾಗಿ ಸುಡುವಂತೆ ಗಜಕೋಲಿನಿಂದ ಒತ್ತಿ, ಒತ್ತಿ ಜಡಿದು ಬಿಟ್ಟಾಗ ಅದು ಮೇಲೇಳುವ ಎತ್ತರದಿಂದ ಜಡಿ ತವು ಸಾಕೋ ಇನ್ನಷ್ಟು ಬೇಕೋ ಎಂದು ನಿಶ್ಚಯಿಸಿ ಸಿದ್ಧಪಡಿಸಿಕೊಂಡರು.

ನಳಿಗೆಯ ಕೋವಿ ತುಂಬಿಸುವವರು ಬಲದ ನಳಿಗೆಗೆ ಒಂಟಿಗುಂಡಿನ ಶಲಾಕೆಯನ್ನೂ (ನೀಳವಾದ ಸೀಸದ ತುಂಡು), ಎಡನಳಿಗೆಗೆ ಕಿರು ಗಜ್ಜುಗದ ಗಾತ್ರದ ಎರಡು, ಮೂರು ಗುಂಡುಗಳನ್ನೂ ತುಂಬಿಸಿ ತಮ್ಮ ಈಡು ಎಷ್ಟು ಬೆರಳು ಗಾತ್ರವೆಂದು ಗಜಕೋಲನ್ನು ಹಾಕಿ ಅಳೆದುನೋಡಿ ಸಮಾಧಾನದ ಮುಖಭಾವವನ್ನು ಪ್ರದರ್ಶಿಸುತ್ತಿದ್ದರು. ಅಜ್ಜಯ್ಯನವರು ಧೈರ್ಯ ನೀಡಿದ್ದರಿಂದ ಪರವಾನಿಗೆ ಇಲ್ಲದ ಕೋವಿಗಳೂ ಸೇರಿ ಹತ್ತಾರು ಕೋವಿಗಳು, ಈಡು ತುಂಬಿಕೊಂಡು ಕೊಟ್ಟಗೆಯ ಗೋಡೆಗೆ ಒರಗಿಸಿಟ್ಟದು ಗೋಚರವಾದವು. ಬೆಳ್ತಮೇರನು ಹೊಗೆ ಹಿಡಿದು ಕಪ್ಪಾದ, ತನ್ನ ಬಿದಿರ ಬಿಲ್ಲನ್ನು ಗೋಡೆಗೆ ಒರಗಿಸ್ಸಿ;ಇಟ್ಟದ್ದಾನೆ. ಆ ಬಿಲ್ಲು ಹಿಡಿದು, ಹಿಡಿದು ನಯವಾಗಿ ಎಣ್ಣೆಯೊಸರುವಂತೆ ಕಾಣುತ್ತಿತ್ತು. ಅವನು ಮರದ ಒಚ್ಚಿ ಯಲ್ಲಿ ಕುಳಿತು ತನ್ನ ಬಿಲ್ಲಿನ ಇಬ್ಬಾಯಿಯ - ಗಿಡುಗನ ಗರಿಯನ್ನು ಕೊನೆಗೆ ಸಿಕ್ಕಿಸಿದ - ಪಗರಿಗಳನ್ನು ಮಸೆಯುತ್ತಿದ್ದಾನೆ. ಬಳಿಯಲ್ಲಿ ಅವನ ಸೊಂಟದ ತೊಡಂಕಿಗೆ ತೂಗಾಡಿಸಲಿರುವ ಮೊಳದುದ್ದ ಅಲಗಿನ ಮಸೆದಿಟ್ಟ ನಾರೆ ಕತ್ತಿಯು ಲಕಲಕಿಸುತ್ತಿದೆ. ಬೆಳ್ತನು ತನ್ನ ಹತ್ತಾರು ಪಗರಿಗಳನ್ನು ಉತ್ಸಾಹದಿಂದ ಮಸೆಯುತ್ತಲೇ ಇದ್ದಾನೆ. ಕೆಲವರು ತಮ್ಮ ಕವಣೆಗಳಿಗೆ, ಆಸುಪಾಸಿನಿಂದ, ಉರುಟಾದ ಕಲ್ಲುಗಳನ್ನು ಆಯುವುದರಲ್ಲಿದ್ದಾರೆ. ಕುಂಞಿಮೋನು ಬ್ಯಾರಿಯು ತನ್ನ ಎರಡಾಳು ಉದ್ದದ ಬರ್ಚಿಗೆ ಆಣಿ ಜಡಿದು ಭದ್ರಗೊಳಿಸಿದ ಇಬ್ಬಾಯಿಯ ಕತ್ತಿಗೆ ಅರ ಹಾಕುವ ತವಕದಲ್ಲಿ ದ್ದಾನೆ. ನನ್ನನ್ನು ಮಾತಾಡಿಸುವವರೇ ಇಲ್ಲ! ನಾನು, "ಅಜ್ಜಾ, ನಾನಿಂದು ನಿಮ್ಮ ಕೋವಿಯ ಚೀಲವನ್ನು ಹಿಡಿದುಕೊಂಡು ನಿಮ್ಮೊಂದಿಗೆ ನಿಲ್ಲುತ್ತೇನೆ" ಎಂದೆ. ಅವರೆಂದರು -"ಕಾಲ್ತೊಡಕು! ಮೃಗವನ್ನು ಬೆನ್ನಟ್ಟಿ ಹೊಡೆಯಬೇಕಾದ ಪ್ರಸಂಗ ಬಂದರೆ ತೊಂದರೆ. ನೀನು ಬೇಕಾದರೆ ದೊರೆ ಗಳನ್ನು ಕಾಣಲು ಸುಂಕದಕಟ್ಟೆಗೆ ಬಾ. ಬಂಗ್ಲೆಯಲ್ಲೆ ನಿಲ್ಲು". ನಾನು, "ಉಹುಂ, ನಿಮ್ಮೊಂದಿಗೆ ಬರುತ್ತೇನೆ. ನಿಮಗೆ ಮೃಗದೊಂದಿಗೆ ಹೋಗುವ ಪ್ರಸಂಗ ಬಂದರೆ ನೀವು ಪುನಃ ಬರುವ ತನಕ ನಾನು ನಿಂತಲ್ಲಿಯೇ ನಿಲ್ಲು ತ್ತೇನೆ. ನನಗೇನೂ ಹೆದರಿಕೆಯಿಲ್ಲ"ಎಂದು ಒತ್ತಿ ಹೇಳಿದಾಗ ಅವರು ಸಮ್ಮತಿ ಸಲೇಬೇಕಾಯಿತು. ಎಂಟು ಗಂಟೆಯ ಹೊತ್ತಾಗುವಾಗ ಹೊಲೆಯರು

ಹಿಂಬಾಗಿಲಿನ ಬಳಿಗೆ ಬಂದು ತಾಯಿಯವರು ಇಕ್ಕಿದ ತಂಗಳು, ತಿಳಿಗೆ ಉಪ್ಪು-ಮೆಣಸು ನುರಿದು ಕುಡಿದು ತೇಗಿ ತೃಪ್ತಿಯಿಂದ ಮೀಸೆ ತೀಡ ತೊಡಗಿದರು. ಅಂಥ ನೋಟದ ಸೊಗಸು ಇಂದು ಕಾಣಸಿಗದು. ಗೌಡ, ಬಿಲ್ಲವ, ನಾಯ್ಕರು ಜೋನಿಬೆಲ್ಲ - ನೀರನ್ನು ಕುಡಿದು ಹೊರಡುವ ಸಿದ್ಧತೆಗೆ ತೊಡಗಿದರು. ಅಜ್ಜಯ್ಯನವರು - ಸೋವತರೂ, ಕಳ್ಳಕೋವಿಯವರೂ ಸುಂಕದಕಟ್ಟೆಗೆ ಒಳದಾರಿಯಿಂದ ಹೋಗಬೇಕೆಂದರು. ಕೋವಿಯವರು ಪಳ್ಳಿಕಂಡದ ತೆಂಕು ಬದಿಯ ಗಂಡಿಗಳಲ್ಲಿ ನಿಲ್ಲಬೇಕೆಂದೂ, ಸೋವತರೂ, ಬಿರು - ಸಗರಿಯವರೂ ಬಂಗಲೆಗೆ ಬಂದು ದೊರೆಗಳನ್ನು ಕಾಣಬಹುದೆಂದೂ ತಾಕೀತು ಮಾಡಿ ಹೊರಟರು. ಸುಮಾರು ಮೂವತ್ತು - ಮೂವತ್ತೈದು ಜನರ ತಂಡವು ಪಿಲಿಮಜಲಿನ ಮಜಲು ಹತ್ತುವಾಗ ಗಾಡಿ ಎತ್ತುಗಳನ್ನು ನೊಗಕ್ಕೆ ಹೂಡಿ ಅಬ್ಬೋಕರೆ ಬ್ಯಾರಿಯು ಗಾಡಿ ಹೊಡೆಯಲು ಸಿದ್ಧನಾಗಿ ದ್ದಾನೆ. ತಲೆಗೆ ಮಾಪಿಳ್ಳೆ ಟೊಪ್ಪಿಯ ಮೇಲೆ ಮುಂಡಾಸು ಸುತ್ತಿ ತನ್ನ ಮುಂಗಾಲಿನ ತನಕ ಲುಂಗಿಯನ್ನು ಕಚ್ಚೆಯಂತೆ ಎತ್ತಿ ಕಟ್ಟಿ ನಮ್ಮ ಬರವನ್ನೇ ಕಾಯುತ್ತಿದ್ದಾನೆ. ಗಾಡಿಯ ಹಿಂದಿನ ತೆರಪ್ಪಿನಿಂದ ನನ್ನನ್ನು ಎತ್ತಿ ಗಾಡಿ ಯಲ್ಲಿ ಕುಳ್ಳಿರಿಸಿದರು. ನನ್ನ ತಂದೆ ದಾಸ ರೈಗಳೂ, ಚಿಕ್ಕತಂದೆ ಜತ್ತಪ್ಪ ರೈಗಳೂ, ಕಿರಿಯ ಅಜ್ಜ ಸುಬ್ಬಪ್ಪ ರೈಗಳೂ ಅಜ್ಜಯ್ಯನಿಗೂ ನನಗೂ ಎದುರು ಕೂರಲು ಎಡೆಮಾಡಿಕೊಟ್ಟು ತಾವು ಹಿಂದೆ ಗಾಡಿಯೇರಿ ತಮ್ಮ ತಮ್ಮ ಕೋವಿಗಳನ್ನು - ಮೋಹದ ಮಗಳನ್ನು ಮಡಿಲಲ್ಲಿ ಕೂತುಕೊಳ್ಳಿಸು ವಂತೆ - ಇರಿಸಿ ಕುಳಿತುಕೊಂಡರು. ತುಂಬಿದ ಕೋವಿಗಳು ಗಾಡಿಯಲ್ಲಿದ್ದು ದರಿಂದ ಎತ್ತುಗಳು ನಾಗಾಲೋಟದಲ್ಲಿ ಸಾಗದಂತೆ ನಿಯಂತ್ರಿಸಲು ತುಂಬ ಪಾಡುಪಡಬೇಕಾಯಿತು. ಬೀಡಿನ ಮೇಲ್ಗಡೆ ಮಿತ್ತೋಡಿಗೆ ಬರುವಾಗ ಕಾಣಸಿಕ್ಕಿದ ಗಿಡ್ಡ ಶರೀರದ, ಅರೆನೆರೆತ ಕೂದಲಿನ, ಗಿರಿಜಾ ಮೀಸೆಯ ದೊಳ್ಳಜ್ಜನು ತನ್ನ ಆಳುಗಾತ್ರದ ಮದ್ದಿನ ಕೋವಿಯನ್ನು ಹಿಡಿದು, ಅರೆತೋಳಿನ ಕೋಟನ್ನು ಹಾಕಿ ಬಿಲ್ಲವರ ದಟ್ಟಿಯುಟ್ಟು ನಿಂತ ವೀರ ಠೀವಿಯು ನೋಡುವಂತಹುದು. ಇವನು ಆ ಸಮಯದಲ್ಲಿ ಬಿಲ್ಲವರ ಸಮಾಜದ ಗುರಿಕಾರ; ಊರ ಬೋಂಟ್ರ; ತಕ್ಕಮಟ್ಟಿನ ಸ್ಥಿತಿವಂತ. ಇವನ ಕೈಕೆಳಗೆ ತೆಂಕಲಾಗಿನ ಮೂರು - ನಾಲ್ಕು ಜನ ಹೊಂತಕಾರಿ ಮೂರ್ತೆಯ

ನಳಿಗೆಯ ಕೋವಿ ತುಂಬಿಸುವವರು ಬಲದ ನಳಿಗೆಗೆ ಒಂಟಿಗುಂಡಿನ ಶಲಾಕೆಯನ್ನೂ (ನೀಳವಾದ ಸೀಸದ ತುಂಡು), ಎಡನಳಿಗೆಗೆ ಕಿರು ಗಜ್ಜುಗದ ಗಾತ್ರದ ಎರಡು, ಮೂರು ಗುಂಡುಗಳನ್ನೂ ತುಂಬಿಸಿ ತಮ್ಮ ಈಡು ಎಷ್ಟು ಬೆರಳು ಗಾತ್ರವೆಂದು ಗಜಕೋಲನ್ನು ಹಾಕಿ ಅಳೆದುನೋಡಿ ಸಮಾಧಾನದ ಮುಖಭಾವವನ್ನು ಪ್ರದರ್ಶಿಸುತ್ತಿದ್ದರು. ಅಜ್ಜಯ್ಯನವರು ಧೈರ್ಯ ನೀಡಿದ್ದರಿಂದ ಪರವಾನಿಗೆ ಇಲ್ಲದ ಕೋವಿಗಳೂ ಸೇರಿ ಹತ್ತಾರು ಕೋವಿಗಳು, ಈಡು ತುಂಬಿಕೊಂಡು ಕೊಟ್ಟಗೆಯ ಗೋಡೆಗೆ ಒರಗಿಸಿಟ್ಟದು ಗೋಚರವಾದವು. ಬೆಳ್ತಮೇರನು ಹೊಗೆ ಹಿಡಿದು ಕಪ್ಪಾದ, ತನ್ನ ಬಿದಿರ ಬಿಲ್ಲನ್ನು ಗೋಡೆಗೆ ಒರಗಿಸಿಟ್ಟಿದ್ದಾನೆ. ಆ ಬಿಲ್ಲು ಹಿಡಿದು, ಹಿಡಿದು ನಯವಾಗಿ ಎಣ್ಣೆಯೊಸರುವಂತೆ ಕಾಣುತ್ತಿತ್ತು. ಅವನು ಮರದ ಒಚ್ಚಿಯಲ್ಲಿ ಕುಳಿತು ತನ್ನ ಬಿಲ್ಲಿನ ಇಬ್ಬಾಯಿಯ - ಗಿಡುಗನ ಗರಿಯನ್ನು ಕೊನೆಗೆ ಸಿಕ್ಕಿಸಿದ - ಪಗರಿಗಳನ್ನು ಮಸೆಯುತ್ತಿದ್ದಾನೆ. ಬಳಿಯಲ್ಲಿ ಅವನ ಸೊಂಟದ ತೊಡಂಕಿಗೆ ತೂಗಾಡಿಸಲಿರುವ ಮೊಳದುದ್ದ ಅಲಗಿನ ಮಸೆದಿಟ್ಟ ನಾರೆ ಕತ್ತಿಯು ಲಕಲಕಿಸುತ್ತಿದೆ. ಬೆಳ್ತನು ತನ್ನ ಹತ್ತಾರು ಪಗರಿಗಳನ್ನು ಉತ್ಸಾಹದಿಂದ ಮಸೆಯುತ್ತಲೇ ಇದ್ದಾನೆ. ಕೆಲವರು ತಮ್ಮ ಕವಣೆಗಳಿಗೆ, ಆಸುಪಾಸಿನಿಂದ, ಉರುಟಾದ ಕಲ್ಲುಗಳನ್ನು ಆಯುವುದರಲ್ಲಿದ್ದಾರೆ. ಕುಂಞಿಮೋನು ಬ್ಯಾರಿಯು ತನ್ನ ಎರಡಾಳು ಉದ್ದದ ಬರ್ಚಿಗೆ ಆಣಿ ಜಡಿದು ಭದ್ರಗೊಳಿಸಿದ ಇಬ್ಬಾಯಿಯ ಕತ್ತಿಗೆ ಅರ ಹಾಕುವ ತವಕದಲ್ಲಿದ್ದಾನೆ. ನನ್ನನ್ನು ಮಾತಾಡಿಸುವವರೇ ಇಲ್ಲ! ನಾನು, "ಅಜ್ಜಾ, ನಾನಿಂದು ನಿಮ್ಮ ಕೋವಿಯ ಚೀಲವನ್ನು ಹಿಡಿದುಕೊಂಡು ನಿಮ್ಮೊಂದಿಗೆ ನಿಲ್ಲುತ್ತೇನೆ" ಎಂದೆ. ಅವರೆಂದರು -"ಕಾಲ್ತೊಡಕು ! ಮೃಗವನ್ನು ಬೆನ್ನಟ್ಟಿ ಹೊಡೆಯಬೇಕಾದ ಪ್ರಸಂಗ ಬಂದರೆ ತೊಂದರೆ. ನೀನು ಬೇಕಾದರೆ ದೊರೆಗಳನ್ನು ಕಾಣಲು ಸುಂಕದಕಟ್ಟೆಗೆ ಬಾ. ಬಂಗ್ಲೆಯಲ್ಲೆ ನಿಲ್ಲು". ನಾನು, "ಉಹುಂ, ನಿಮ್ಮೊಂದಿಗೆ ಬರುತ್ತೇನೆ. ನಿಮಗೆ ಮೃಗದೊಂದಿಗೆ ಹೋಗುವ ಪ್ರಸಂಗ ಬಂದರೆ ನೀವು ಪುನಃ ಬರುವ ತನಕ ನಾನು ನಿಂತಲ್ಲಿಯೇ ನಿಲ್ಲುತ್ತೇನೆ. ನನಗೇನೂ ಹೆದರಿಕೆಯಿಲ್ಲ"ಎಂದು ಒತ್ತಿ ಹೇಳಿದಾಗ ಅವರು ಸಮ್ಮತಿಸಲೇಬೇಕಾಯಿತು. ಎಂಟು ಗಂಟೆಯ ಹೊತ್ತಾಗುವಾಗ ಹೊಲೆಯರು

ಹಿಂಬಾಗಿಲಿನ ಬಳಿಗೆ ಬಂದು ತಾಯಿಯವರು ಇಕ್ಕಿದ ತಂಗಳು, ತೆಳಿಗೆ ಉಪ್ಪು-ಮೆಣಸು ನುರಿದು ಕುಡಿದು ತೇಗಿ ತೃಪ್ತಿಯಿಂದ ಮೀಸೆ ತೀಡ ತೊಡಗಿದರು. ಅಂಥ ನೋಟದ ಸೊಗಸು ಇಂದು ಕಾಣಸಿಗದು. ಗೌಡ, ಬಿಲ್ಲವ, ನಾಯ್ಕರು ಜೋನಿಬೆಲ್ಲ - ನೀರನ್ನು ಕುಡಿದು ಹೊರಡುವ ಸಿದ್ಧತೆಗೆ ತೊಡಗಿದರು. ಅಜ್ಜಯ್ಯನವರು - ಸೋವತರೂ, ಕಳ್ಳಕೋವಿಯವರೂ ಸುಂಕದಕಟ್ಟೆಗೆ ಒಳದಾರಿಯಿಂದ ಹೋಗಬೇಕೆಂದರು. ಕೋವಿಯವರು ಪಳ್ಳಿಕಂಡದ ತೆಂಕು ಬದಿಯ ಗಂಡಿಗಳಲ್ಲಿ ನಿಲ್ಲಬೇಕೆಂದೂ, ಸೋವತರೂ, ಬಿರು - ಪಗರಿಯವರೂ ಬಂಗಲೆಗೆ ಬಂದು ದೊರೆಗಳನ್ನು ಕಾಣಬಹುದೆಂದೂ ತಾಕೀತು ಮಾಡಿ ಹೊರಟರು. ಸುಮಾರು ಮೂವತ್ತು - ಮೂವತ್ತೈದು ಜನರ ತಂಡವು ಪಿಲಿಮಜಲಿನ ಮಜಲು ಹತ್ತುವಾಗ ಗಾಡಿ ಎತ್ತುಗಳನ್ನು ನೊಗಕ್ಕೆ ಹೂಡಿ ಅಬ್ಬೋಕರೆ ಬ್ಯಾರಿಯು ಗಾಡಿ ಹೊಡೆಯಲು ಸಿದ್ಧನಾಗಿ ದ್ದಾನೆ. ತಲೆಗೆ ಮಾಪಿಳ್ಳೆ ಟೊಪ್ಪಿಯ ಮೇಲೆ ಮುಂಡಾಸು ಸುತ್ತಿ ತನ್ನ ಮುಂಗಾಲಿನ ತನಕ ಲುಂಗಿಯನ್ನು ಕಚ್ಚೆಯಂತೆ ಎತ್ತಿ ಕಟ್ಟಿ ನಮ್ಮ ಬರವನ್ನೇ ಕಾಯುತ್ತಿದ್ದಾನೆ. ಗಾಡಿಯ ಹಿಂದಿನ ತೆರಪ್ಪಿನಿಂದ ನನ್ನನ್ನು ಎತ್ತಿ ಗಾಡಿ ಯಲ್ಲಿ ಕುಳ್ಳಿರಿಸಿದರು. ನನ್ನ ತಂದೆ ದಾಸ ರೈಗಳೂ, ಚಿಕ್ಕತಂದೆ ಜತ್ತಪ್ಪ ರೈಗಳೂ, ಕಿರಿಯ ಅಜ್ಜ ಸುಬ್ಬಪ್ಪ ರೈಗಳೂ ಅಜ್ಜಯ್ಯನಿಗೂ ನನಗೂ ಎದುರು ಕೂರಲು ಎಡೆಮಾಡಿಕೊಟ್ಟು, ತಾವು ಹಿಂದೆ ಗಾಡಿಯೇರಿ ತಮ್ಮ ತಮ್ಮ ಕೋವಿಗಳನ್ನು - ಮೋಹದ ಮಗಳನ್ನು ಮಡಿಲಲ್ಲಿ ಕೂತುಕೊಳ್ಳಿಸು ವಂತೆ - ಇರಿಸಿ ಕುಳಿತುಕೊಂಡರು. ತುಂಬಿದ ಕೋವಿಗಳು ಗಾಡಿಯಲ್ಲಿದ್ದು ದರಿಂದ ಎತ್ತುಗಳು ನಾಗಾಲೋಟದಲ್ಲಿ ಸಾಗದಂತೆ ನಿಯಂತ್ರಿಸಲು ತುಂಬ ಪಾಡುಪಡಬೇಕಾಯಿತು. ಬೀಡಿನ ಮೇಲ್ಗಡೆ ಮಿತ್ತೋಡಿಗೆ ಬರುವಾಗ ಕಾಣಸಿಕ್ಕಿದ ಗಿಡ್ಡ ಶರೀರದ, ಅರೆನೆರೆತ ಕೂದಲಿನ, ಗಿರಿಜಾ ಮೀಸೆಯ ದೊಳ್ಳಜ್ಜನು ತನ್ನ ಆಳುಗಾತ್ರದ ಮದ್ದಿನ ಕೋವಿಯನ್ನು - ಹಿಡಿದು, ಅರೆತೋಳಿನ ಕೋಟನ್ನು ಹಾಕಿ ಬಿಲ್ಲವರ ದಟ್ಟಿಯುಟ್ಟು ನಿಂತ ವೀರ ಶೀವಿಯು ನೋಡುವಂತಹುದು. ಇವನು ಆ ಸಮಯದಲ್ಲಿ ಬಿಲ್ಲವರ ಸಮಾಜದ ಗುರಿಕಾರ; ಊರ ಬೋಂಟ್ರ; ತಕ್ಕಮಟ್ಟಿನ ಸ್ಥಿತಿವಂತ. ಇವನ ಕೈಕೆಳಗೆ ತೆಂಕಲಾಗಿನ ಮೂರು - ನಾಲ್ಕು ಜನ ಹೊಂತಕಾರಿ ಮೂರ್ತೆಯ

ಆಳುಗಳು ದುಡಿಯುತ್ತಿದ್ದರು. ಈತ, ಅಜ್ಜಯ್ಯನವರಿಗೆ ಸರಿಮಿಗಿಲೆನಿಸುವ ಜೇಟಿಗಾರ. ಇವನು - ಹೊಗೆಸೊಪ್ಪನ್ನು ಸುರುಟಿ ಬಾಡಿಸಿದ ಬಾಳೆಯೆಲೆಯಲ್ಲಿ ಸುತ್ತಿ - ಸೇದುವ ಚುರುಟದಿಂದ 'ಫುಸ್ ಫುಸ್' ಎಂದು ಹೊರಬೀಳುತ್ತಿದ್ದ ಹೊಗೆಯು ತಿದಿಯಿಂದ ಹೊರಬೀಳುವ ಹೊಗೆಯನ್ನು ಜ್ಞಾಪಕಕ್ಕೆ ತರುತ್ತಿತ್ತು. ನಾವು ಹತ್ತಿರವಾಗುವಾಗ ತನ್ನ ಚುರುಟನ್ನು ಬಳಿಯಿದ್ದ ಮರದ ಬೊಡ್ಡೆಗೆ ಒರೆಸಿ ನಂದಿಸಿ ಉಳಿದ ತುಂಡನ್ನು ತನ್ನ ಕೋಟಿನ ಕಿಸೆಗೆ ಇಳಿಬಿಟ್ಟ. ಗಾಡಿಯ ತೆರಪಿನಿಂದ ಚಿಕ್ಕಪ್ಪನ ಕೈಗೆ ತನ್ನ ಕೋವಿಯನ್ನು ಕೊಟ್ಟು, ಮದ್ದಿನ ಚೀಲವನ್ನು ತಾನೇ ಹಿಡಿದುಕೊಂಡು, ಭರದಿಂದ ಸಾಗುತ್ತಿದ್ದ ಗಾಡಿಯನ್ನೇರಿ ಕುಳಿತ. ಹಿಂದಿನ ದಿನವೇ ದೊರೆಗಳು ಬಂದಿರುವುದನ್ನೂ ಊಟೋಪಚಾರದ ವಿಚಾರಗಳನ್ನೂ ಮಾತಾಡುತ್ತಿದ್ದಾಗ ಗಾಡಿಯು ಮರ್ದಾಳವನ್ನು ತಲುಪಿತು. ಉಪ್ಪಿನಂಗಡಿಯ ಮಾರ್ಗ ಕೂಡುವಲ್ಲಿ ಬರುವಾಗ ಫರ್ಲಾಂಗು ದೂರದಿಂದ ಬರುವ ಅತ್ತಾಜೆ ಅಣ್ಣು ಶೆಟ್ಟರ ಗಾಡಿಯ ಗಡಗಡ ಕೇಳಿಸಿತು. ಹೋರಿಗಳ ಗೆಜ್ಜೆಯ ಸದ್ದನ್ನು ಆಲಿಸಿದಂತೆ ಗಾಡಿಯು ಹತ್ತಿರ ಬರುತ್ತಿರುವುದನ್ನು ಅರಿತ ಗಾಡಿಯಾಳು ನಮ್ಮ ಗಾಡಿಗೆ ಬಿರಿಯಿಕ್ಕಿ, ಮೂಗುದಾರದ ಹಗ್ಗವನ್ನು ಹಿಡಿದೆಳೆದು - ಬುಸುಗುಟ್ಟಿ ಮುನ್ನುಗ್ಗಲು ಹಾತೊರೆಯುತ್ತಿದ್ದ ಎತ್ತುಗಳನ್ನು ಒತ್ತಿ ನಿಲ್ಲಿಸಿ ಹಿಂತಿರುಗಿ ನೋಡಿದ. ಹಿಂದಿನ ಗಾಡಿಯಲ್ಲಿದ್ದ ನಡುಮಜಲು-ನೆಕ್ಕಿಲಾಡಿಯ ಬೇಟೆಗಾರರೂ, ಕೆಲವು ಸೋವತರೂ ನಮಗೆ ಮುಂದುವರಿಯಲು ಕೈಸನ್ನೆ ಮಾಡಿದರು. ಮೆಟ್ಟಿದ ಬಿರಿಯಿಂದ ಕಾಲ್ತೆಗೆದು, ಮೂಗುದಾರವನ್ನು ಸಡಿಲಿಸಿದಾಗ ಹಿಂದಿನ ಗಾಡಿಯ ಶಬ್ದದಿಂದ ಹುರುಪುಗೊಂಡ ಎತ್ತುಗಳು ತೀವ್ರಗತಿಯಿಂದ ಮುಂದೊತ್ತಿದವು. ಹಿಂದಿನ ಗಾಡಿಗಳೂ ಸಂಧಿ ಸಿಕ್ಕಿದರೆ ಮುಂದೆ ಹೋಗುವ ತವಕದಲ್ಲಿ ಹಿಂಬಾಲಿಸುತ್ತಿದ್ದವು. ಹಿರಿಯರು ಬೇಟೆಯ ವಿಚಾರವಾಗಿ ಏನೇನೊ ಮಾತುಗಳಲ್ಲಿ ತಲ್ಲೀನರಾಗಿದ್ದರು. ನಾನು ಹಿಂದಿನಿಂದ ಪೈಪೋಟಿಗೊಂಡು ಬರಲು ಹವಣಿಸುವ ಅಣ್ಣುಶೆಟ್ಟರ ಅಮೃತ ಮಹಲಿನ ಹೋರಿಗಳ ನಡೆಯುವಿಕೆಗೂ, ಚೆಲುವಿಗೂ ಮಾರು ಹೋಗಿ, ನಮ್ಮ ಎತ್ತುಗಳನ್ನೂ ಹಿಂದಿನವುಗಳನ್ನೂ ಕುತೂಹಲದಿಂದ ನೋಡುತ್ತಿದ್ದೆ.

ಸುಂಕದಕಟ್ಟೆಯ ರಾಜಮಾರ್ಗವನ್ನು ಬಿಟ್ಟು ಗಾಡಿಯು ಬಂಗಲೆಯತ್ತ ಸಾಗುವ ಒಳರೋಟಿಗೆ ತಿರುಗುವಾಗಲೇ ನನಗೆ ಆ ಸ್ಥಿತಿಯಿಂದ ಎಚ್ಚರ ವಾದುದು.

ದೊರೆಗಳೂ, ಅವರ ಜತೆಯಲ್ಲಿದ್ದ ಅತಿಥಿಗಳೂ ತಮ್ಮ ರೈಫಲ್, ಕೋವಿಗಳನ್ನು ತಿಕ್ಕಿ ಬಾಗಿಲು, ಕಿಟಕಿಗಳಿಗೆ ಒರಗಿಸಿ ಒಪ್ಪವಾಗಿರಿಸಿದ್ದರು. ಒರಗುಕುರ್ಚಿಯಲ್ಲಿ ಆಸೀನರಾಗಿದ್ದ ಅವರೆಲ್ಲರಿಗೆ ಗಾಡಿಯಿಂದ ಇಳಿಯುತ್ತಲೇ ನಮ್ಮ ಹಿರಿಯರು ವಂದನೆಗಳನ್ನರ್ಪಿಸಿದರು. ನಾನೂ, ಹಿಂದಿನ ದಿನದಂತೆ, ಸೆಲ್ಯೂಟ್ ಮಾಡಿದುದನ್ನು ಕಂಡ ದೊರೆಗಳು ನನಗೆ ಮರುವಂದಿಸಿ ಮುಗುಳ್ನಕ್ಕು ಬಳಿಯಲ್ಲಿದ್ದ ಕಾಲ್ಮಣೆಯಲ್ಲಿ ನನ್ನನ್ನು ಕುಳಿತುಕೊಳ್ಳುವಂತೆ ಆದೇಶಿಸಿದರು. ಆಮೇಲೆ ಅಜ್ಜನವರನ್ನು ಅವರು ಹಿಡಿದಿದ್ದ ಆಳುದ್ದ ಕೋವಿಯೊಂದಿಗೆ ಕಂಡು ಹತ್ತಿರ ಬರುವಂತೆ ಕರೆದು ಅವರ ಕೈಯಿಂದ ಕೋವಿಯನ್ನು ಇಸಕೊಂಡು, ಅದರ ಹದಿನಾರು ಬೆಳ್ಳಿಯ ಕಟ್ಟನ್ನು ಕಂಡು, ಲಕಲಕಿಸುವ ಹಿತ್ತಾಳೆಯ ಗಜಕೋಲನ್ನು ಮೆಚ್ಚಿ - "ಪಟೇಲರೇ, ನೀವು ಈ (ಜಡಿದು ತುಂಬಿಸುವಂತೆ ಕೈಸನ್ನೆ ಮಾಡುತ್ತ) ಹೀಗೆ - ಹೀಗೆ, ಮಾಡಿ ಹೊಡೆಯುವ ಈಡಿನಿಂದ ಮೃಗಗಳು ಸಾಯುವವೆ? ಹೇಗೆ ಹೊಡೆಯು ತ್ತೀರಿ?" ಎಂದು ವ್ಯಂಗ್ಯದೊಡನೆ ಕನ್ನಡ ಇಂಗ್ಲಿಷ್ ಮಿಶ್ರ ಭಾಷೆಯಲ್ಲಿ ಅಣ ಕಿಸುವಂತೆ ಪ್ರಶ್ನಿಸಿದರು. ಅಜ್ಜಯ್ಯನವರು 'ಹೊಡೆಯುವುದು ಹೇಗೆಂಬು ದನ್ನು' ಕೃತಿಯಲ್ಲಿ ತೋರಿಸುವೆನೆಂಬ ದೃಢ ಮುಖಮುದ್ರೆಯ ಮುಗುಳ್ನಗು ವಿನ ಮೌನ ಉತ್ತರವನ್ನಷ್ಟೇ ನೀಡಿದರು. ಕಲೆಕ್ಟರರು ತಮ್ಮಲ್ಲೇ "ಕಷ್ಟ, ಕಷ್ಟ" ಎಂದು ಗೊಣಗಿಕೊಂಡರು.

ಸುತ್ತಲಿನ ಮೂರು - ನಾಲ್ಕು ಗ್ರಾಮಗಳಿಂದ ಬಂದು ನೆರೆದಿದ್ದ ಬೇಟೆಗಾರರ, ಸೋವತರ, ನಾಯಿಗಳ, ಬೊಬ್ಬೆ, ಕಣ್ಣಿ ಹರಿದುಕೊಂಡ ನಾಯಿಗಳ ಗುರುಗುಟ್ಟುವಿಕೆ, ಬೊಗಳಾಟ, ಕಚ್ಚಾಟ; ಇವುಗಳನ್ನು ಬಿಡಿಸಲು ನಾಯಿಗಳ ಒಡೆಯರು ಮಾಡುವ ಗದ್ದಲ - ಎಲ್ಲ ಒಟ್ಟಾಗಿ ಜೀರುಂಡೆ, ಕಾಡುಹಕ್ಕಿಗಳ ಸದ್ದಿಗೆ ಮೀಸಲಾಗಿದ್ದ ತಾಣದಲ್ಲಿ ಅದು ಆ ಮುನ್ನವೇ ಮರೆಯಾಗಿ ಈ ಹೊಸ ಗದ್ದಲವೇ ತುಂಬಿತ್ತು. ನಮಗಿಂತ

ಮುಂದಾಗಿ ಒಳದಾರಿಯಲ್ಲಿ ಬಂದಿದ್ದ ಮೇರ ಬೆಳ್ತನು ಬಂಗಲೆಯ ಎದುರಿದ್ದ ಮರದ ಬುಡಕ್ಕೆ ತನ್ನ ಬಿಲ್ಲನ್ನು ಒರಗಿಸಿಟ್ಟಿದ್ದ. ಅವನು ತನ್ನ ಮೇರ್ತಿ ಜೋಮುವು ಸಂಚಿಯಿಂದ ತೆಗೆದುಕೊಡುತ್ತಿದ್ದ ಎಲೆಗೆ ಸುಣ್ಣವನ್ನು ತೀಡಿ, ಮೊದಲೇ ಬಾಯಿಗೆ ಹಾಕಿದ್ದ ಅಡಿಕೆಯ ಹೋಳಿನೊಂದಿಗೆ ಜಗಿಯುತ್ತಿದ್ದ. ಆ ಮೇಲೆ ಅವನು ಹೊಗೆಸೊಪ್ಪನ್ನು ತಿರುವಿ ಅಂಗೈಗೆ ಹಾಕಿ ತಿಕ್ಕಿ ಉಂಡೆಯನ್ನು ಬಾಯಿಗಿಕ್ಕಿ ಎರಡು ಸಲ ದವಡೆಯನ್ನು ಅಲುಗಾಡಿಸಿದ. ಬಾಯಲ್ಲಿ ತುಂಬಿದ ಜೊಲ್ಲು ಮಿಶ್ರಿತ ತಂಬಾಕಿನ ಎಂಜಲನ್ನು ಎಡಗೈಯ ಬೆರಳೆರಡನ್ನು ತುಟಿಗಳಿಗೆ ಒತ್ತಿ ಉಗಿಯುವಾಗ ಅದು ಜೀರ್ಕೋವಿಯಿಂದ ಹೊರಡುವ ಓಕುಳಿ ನೀರಿನಂತೆ ಕಾಣುತ್ತಿತ್ತು. ಜೋಮು ಗೇಂಟೆ ಕಟ್ಟಿದ, ಉಬ್ಬಿದ ಎದೆಯ, ಅಚ್ಚುಕಟ್ಟಾದ ಮೈಕಟ್ಟಿನ ಹೆಣ್ಣು. ಆಕೆ ಕೆಂಪು, ಹಳದಿ, ನೀಲ ಮಣಿಗಳಿಂದ ಮಾಡಿದ ಬಿಗಿಯಾದ ಸರಗಳನ್ನು ಕುತ್ತಿಗೆ ಮುಚ್ಚುವಂತೆ ಕಟ್ಟಿಕೊಂಡಿದ್ದಳು. ಬಿಗಿಯಾದ ಹಿತ್ತಾಳೆಯ ಬಳೆಗಳನ್ನು ಮೊಣಕೈ ಕಾಣದಷ್ಟು ತುರುಕಿದ್ದಳು. ಕೆದರಿದ ತಲೆಯ, ಮೊಣಕಾಲು ತನಕ ಮುಂಡು ಉಟ್ಟು ಬಂದ ಜೋಮುವನ್ನು ಕಂಡ ದೊರೆಗಳಿಗೆ ಅಚ್ಚರಿಯೇ ಅಚ್ಚರಿ! "ಈ ಹೆಂಗಸೂ ಬೇಟೆಗೆ ಬರುವಳೇ ಪಟೇಲರೇ?" ಎಂದು ಅವರು ಕೇಳಿದಾಗ ಅಜ್ಜಯ್ಯನವರೆಂದರು - "ಹೌದು. ಆ ಜಾತಿಯವರಲ್ಲಿ ಅದೂ ಒಂದು ಸಂಪ್ರದಾಯ. ಗಂಡ ತನ್ನ ಬಿಲ್ಲಿನಿಂದ ಹೊಡೆದು ಉರುಳಿಸಿದ ಮೃಗವು ಪ್ರಾಣಾಂತಿಕ ವೇದನೆಯಿಂದ ಹೊರಳುವಾಗ ನಾಟಿದ ಅಂಬನ್ನು ಕಿತ್ತು ಅದರಿಂದ ಹೊರಬರುವ ಬಿಸಿರಕ್ತವನ್ನು ಮುಟ್ಟಾಳೆಯಲ್ಲಿ ಹಿಡಿದು ಕುಡಿಯುವುದೆಂದರೆ ಆ ಹೆಂಗಳಿಗೆ ರಸದೂಟ. ಇದು ದೇಹದಾರ್ಢ್ಯಕ್ಕೆ, ಆಯುಷ್ಯ ವೃದ್ಧಿಗೆ, ಆರೋಗ್ಯ ಭಾಗ್ಯಕ್ಕೆ ದಿವ್ಯೌಷಧ. ಅಲ್ಲದೆ ಇವರು ಇದು ಸಾಹಸ ಪ್ರದರ್ಶನಕ್ಕೆ ಕ್ಷಿಪ್ರ ಬಹುಮಾನವೆಂದು ಭಾವಿಸುತ್ತಾರೆ. ಈಕೆಯಾದರೋ ಹಂದಿ, ಕಾಡುಕೋಣಗಳಿಗೆ ಹೆದರಿ ಹಿಮ್ಮೆಟ್ಟುವ ಹೆಣ್ಣಲ್ಲ. ಬೆಳ್ತನಷ್ಟೇ ಗಡಸುಗಾರ್ತಿ". ಈ ಮಾತುಗಳನ್ನು ಕೇಳಿ, ಅಂಥ ಸಾಹಸಿಗರನ್ನು ಮೆಚ್ಚಿಕೊಂಡ ದೊರೆಗಳು ಅವರಿಬ್ಬರನ್ನೂ ಬಂಗಲೆಯ ಬಾಗಿಲಿಗೆ ಬರುವಂತೆ ಆಜ್ಞಾಪಿಸಿದರು.

"ಬೆಳ್ತಾ" ಎಂದು ಕೂಗಿದ ಕರೆಗೆ ಒಮ್ಮೆ ಅಳುಕು ಮುಖ ಮಾಡಿದ ಬೆಳ್ತ. ಬಂಗಲೆಯ ಬಾಗಿಲಿಗೆ ಕಾಣುವಂತೆ ತಾನು ವೀಳ್ಯ ಮೆದ್ದು ಉಗುಳಿದುದು ಅಪರಾಧವಾಯಿತೇ ಎಂದು ಭಯಗೊಂಡಿದ್ದ ಬೆಳ್ತನನ್ನು-ಕೈಸನ್ನೆಯಿಂದ ಧೈರ್ಯ ನೀಡಿದ - ನಮ್ಮಜ್ಜನವರು ಬಿಲ್ಲುಬಾಣಗಳೊಡನೆ ದೊರೆಗಳ ಬಳಿ ಬರುವಂತೆ ಹೇಳಿದರು. ಆರು ಅಡಿ ಎತ್ತರದ, ಎಣ್ಣೆಗಪ್ಪಿನ, ದೃಢಕಾಯದ ಬೆಳ್ತ ಯಜಮಾನರ ಆಜ್ಞೆಯನ್ನು ಪಾಲಿಸುವಂತೆ ಹತ್ತಿರ ಬರುತ್ತಿದ್ದ; ಆತ ತನ್ನ ತಲೆಯಲ್ಲಿ ಮುಟ್ಟೆಪ್ಪಾಳೆಯನ್ನಿಟ್ಟು ಅದರ ಮೇಲೆ ನಾಲ್ಕು ಮೊಳದ ವಸ್ತ್ರವನ್ನು ಮುಂಡಾಸಿನಂತೆ ಸುತ್ತಿದ್ದ. ಅದರ ಎಡೆಯಿಂದ ಎದುರು ಭಾಗದಲ್ಲಿ ಸಿಂಗರಿಸಿದ ಮುಟ್ಟೆಪ್ಪಾಳೆಯ ಕೋಂಟು ಇಣುಕುತ್ತಿತ್ತು. ಮೊಣಕಾಲಿನವರೆಗೆ ದಟ್ಟಿಯನ್ನು ಉಟ್ಟಿದ್ದ. ಆತನ ಕೈ, ಕಾಲು, ಎದೆಯ ಮಾಂಸಖಂಡಗಳು ಕಡೆಚ್ಚಿಲಿನಲ್ಲಿ ಹಿಡಿದು ರೂಪುಗೊಂಡವೋ ಎಂಬಂತೆ ಉಬ್ಬಿಕಾಣುತ್ತಿದ್ದವು. ತನ್ನ ಒಂದು ಕೈಯಲ್ಲಿ ಬಿಲ್ಲನ್ನೂ ಇನ್ನೊಂದರಲ್ಲಿ ಪಗರಿಗಳಿರುವ ಬಿದಿರ ಅಂಡೆಯನ್ನೂ ಹಿಡಿದುಕೊಂಡು ದೊರೆಗಳ ಹತ್ತಿರಕ್ಕೆ ಬರುತ್ತಿದ್ದ ಅವನನ್ನು ಮೆಚ್ಚುಗೆ ಅಭಿಮಾನಗಳಿಂದ ದೊರೆಗಳು ನೋಡುತ್ತಿದ್ದರು. ಜೋಮು ಬೆಳ್ತನನ್ನೇ ಹಿಂಬಾಲಿಸಿ ಬರುತ್ತಿದ್ದಳು.

ಗೋನ್ ಸಾಹೇಬರು ಅಭಿಮಾನ ತುಂಬಿದ ದಿಟ್ಟಿಯನ್ನು ಆ ದಂಪತಿಗಳಲ್ಲಿ ನೆಟ್ಟು ಬೆಳ್ತನನ್ನು ಹತ್ತಿರ ಕರೆದರು. ಬಿಲ್ಲನ್ನು ಅವನಿಂದ ಇಸಿದುಕೊಂಡು, ಆಮೂಲಾಗ್ರವಾಗಿ ಚಿಕಿತ್ಸಕ ದೃಷ್ಟಿಯಿಂದ ನೋಡಿ ಅದರ ಹಿಡಿತದ ಭಾಗಕ್ಕೆ ಸುತ್ತಿದ ಬೆತ್ತದ ಹೆಣಿಗೆಯನ್ನು ಕಂಡು ಮೆಚ್ಚಿ ಇದೇಕೆಂದು ಕೇಳಿದರು. ಆಗ, "ಇದು ಹೆದೆ ಏರಿಸುವಾಗ ಬಿಲ್ಲು ಬಾಗಿ ಬಾಸಿ ಎದ್ದು ಮುರಿಯದಂತೆ ಆಧಾರಕ್ಕೆ; ಇದರಲ್ಲಿ ಸಡಿಲವಾಗಿ ಉದ್ದಕ್ಕೆ ಕಟ್ಟಿರುವ ಬೆತ್ತದ ಹುರಿಯು ಬಿಲ್ಲಿಗೆ ಹೆದೆಯೇರಿಸಿ ಬಾಣವನ್ನು ಬಿಡಲು" ಎಂದು ಅಜ್ಜನವರೆಂದರು. ಇದನ್ನು ಕೇಳಿ 'ಸೈ' ಯೆಂದು ದೊರೆಗಳು ಇದರಿಂದ ಎಷ್ಟು ದೂರಕ್ಕೆ, ಯಾವೆಲ್ಲ ಮೃಗಗಳನ್ನು ಹೊಡೆಯಬಹುದೆಂದು ಪ್ರಶ್ನಿಸಿದರು. ಸುಮಾರು ಮೂವತ್ತು ಮಾರು ದೂರದಿಂದ ಏಳು ಜನ ಹೊರಬೇಕಾದಂಥ, ಹಲವು ಹಂದಿಗಳನ್ನು ಹೊಡೆದಿರುವೆನೆಂದೂ, ಹಾಯಲು

ಬಂದ ಕಾಡುಕೋಣಕ್ಕೆ ಇಪ್ಪತ್ತು ಗಜ ದೂರದಿಂದ ಹೊಡೆದುರುಳಿಸಿರುವೆ ನೆಂದೂ ನುಡಿದ ಬೆಳ್ತ, ತನ್ನ ಜೀವವುಳಿಸಿದ ಬಿಲ್ಲನ್ನು ಎದೆಗವಚಿಕೊಂಡು ದನ್ನು ಕಂಡು ದೊರೆಗಳು ಅವನ ಬೆನ್ನು ತಟ್ಟಿ, "ನನಗೆ ನಿನ್ನ ಗುರಿಯು ಗತ್ತನ್ನು ತೋರಿಸು" ಎಂದರು. ಇದನ್ನು ಕೇಳಿ ತಬ್ಬಿಬ್ಬಾದ ಬೆಳ್ತ ಧನಿಯ ಮುಖವನ್ನು ನೋಡಿದ. ಧನಿಯ ಕಣ್‌ಸನ್ನೆಯ ಪ್ರೋತ್ಸಾಹವನ್ನು ಕಂಡ ಬೆಳ್ತ ದೊರೆಯ ಮುಖವನ್ನು ನೋಡಿ ಸಮ್ಮತಿಸೂಚಕವಾಗಿ ತಲೆಯಾಡಿ ಸುತ್ತ 'ಸೈ' ಎಂದನು. ಬಳಿಯಲ್ಲಿದ್ದ ಉಗ್ರಾಣಿಯನ್ನು ಕರೆದ ಕಲೆಕ್ಟರರು ಎದುರಿನ ಬೈನಿ ಮರಕ್ಕೆ ಅಂಗೈ ಅಗಲ ಸುಣ್ಣ ಲೇಪಿಸುವಂತೆ ಹೇಳಿದರು. ಬೆಳ್ತ ನಿಂತಿದ್ದ ಸ್ಥಳದಿಂದ 30 ಮಾರುಗಳಷ್ಟು ದೂರವಿತ್ತು ಆ ಗುರಿ. "ಬಿಲ್ಲಿಗೆ ಬಾಣಹೂಡಿ ಸಿದ್ಧನಾಗಿ ಗುರಿ ತಪ್ಪದಂತೆ ಹೊಡೆ" ಎಂದು ದೊರೆ ಗಳು ಅಪ್ಪಣೆ ಮಾಡಿದರು. ಅಲ್ಲದೆ, "ನೀನೆಂದಂತೆ ಗುರಿಗೆ ಹೊಡೆದರೆ ನಿನಗೆ ಹತ್ತು ರೂಪಾಯಿ ಬಹುಮಾನ; ಗುರಿಯು ತೀಕ್ಷ್ಣವಾಗಿದ್ದರೆ ಮತ್ತೂ ಮೆಚ್ಚುಗೆ ಇದೆ" ಎಂದುದನ್ನು ಕೇಳಿದ ಬೆಳ್ತ 'ಇದಾವ ಗಹನ' ಎಂಬಂತೆ ಒಮ್ಮೆ ದಾರ್ಷ್ಟ್ಯದ ಮುಗುಳ್ನಗು ಬೀರಿದ. ಎಡಕೈಯಲ್ಲಿದ್ದ ಬಿಲ್ಲನ್ನು ಬಲ ಕೈಗೆ ಬದಲಾಯಿಸಿ, ನೆಲಕ್ಕೂರಿ ಮೊಣಕಾಲು ಮಧ್ಯಕ್ಕೆ ಕೊಟ್ಟು ಬಾಗಿಸಿ, ಬೆತ್ತದ ಹುರಿಯನ್ನು ಬಿಲ್ಲಕೊಪ್ಪಿಗೆ ಸಿಕ್ಕಿಸಿದ. ಒಮ್ಮೆ ಅದರ ಬಿಗಿತವನ್ನು ಪರಿಶೀಲಿಸಿದ. ಅದರ ನಾದವನ್ನು ಕೇಳಿ ಮೆಚ್ಚುಗೆಯ ಮುಖಮಾಡಿದ ವೀಣಾವಾದಕನಂತೆ ಹರ್ಷಿತನಾಗಿ, ಹಿಡಿದ ಬಿಲ್ಲನ್ನು ಹಣೆಗೊತ್ತಿ, ಮಡದಿ ಯತ್ತ ದೃಷ್ಟಿ ಹಾಯಿಸಿ, "ಅಂಡೆಯಿಂದ ಐದನೇ ಪಗರಿಯನ್ನು ಕೊಡು" ಎಂದನು. ಆಗ ಚೋಮು ಚೂಪಾದ ತುದಿಯ ಎಂಟಂಗುಲ ಉದ್ದದ ಮಧ್ಯಭಾಗವು ಒಂದಂಗುಲ ಅಗಲವಿರುವ ಇಬ್ಬಾಯಿಯ ಬಿದಿರ ಕೈಯುದ್ದದ ಗಿಡುಗನ ಗರಿ ಸಿಕ್ಕಿಸಿದ ಬಾಣವನ್ನು ಕೊಟ್ಟಳು. ಬಾಣವನ್ನು ಬತ್ತಳಿಕೆ ಯಿಂದ ತೆಗೆದುಕೊಡುವಾಗ ಆ ಎಂಟು ಅಂಗುಲದ ಅಲಗು ಲಕಲಕಿಸು ತ್ತಿತ್ತು. ಬಲಗೈಯನ್ನು ಹಿಂದೆ ನೀಡಿ, ಅದನ್ನು ಸರ್ರೆಂದು ಆಕೆಯಿಂದ ಎಳೆದುಕೊಂಡವನೇ ಬೈನಿ ಮರದತ್ತ ಮುಖಮಾಡಿ, ವೀರ ಮಂಡಿಯೂರಿ, ಬಾಣವನ್ನು ಬಿಲ್ಲ ಹಗ್ಗಕ್ಕೆ ಸಿಕ್ಕಿಸಿ, ಸುಣ್ಣದ ಗುರುತನ್ನೇ ಗುರಿಯಾಗಿರಿಸಿ ಕಿವಿಯ ತನಕ ಶಕ್ತಿಯಿಂದೆ ಎಳೆದು ಇಹವನ್ನೇ ಮರೆತವನಂತೆ ಗುರಿಯನ್ನೇ

ದಿಟ್ಟಿಸುತ್ತಿದ್ದ. ಆತನ ಉಬ್ಬಿದ ಕಂಠ, ತ್ವರಿತಗತಿಯ ರಕ್ತಸಂಚಾರವಾಗುತ್ತಿದ್ದ ಮುಖದಲ್ಲಿ ಒಗ್ಗೂಡಿದ್ದ ರಕ್ತವೆಲ್ಲ ಕಣ್ಣಿನಿಂದಲೇ ಹೊರಡಲು ಹವಣಿಸುತ್ತಿರುವಂತೆ ಕಾಣಿಸುತ್ತಿತ್ತು. ಶಕ್ತಿ ಸಂಚಯದಿಂದ ಬೆಳ್ತನು ಅಂಬನ್ನು ಕಿವಿಯ ಹತ್ತಿರ ಸೆಳೆದು ಸಡಿಲಿಸಿದುದೇ ತಡ, ಅದು ಸುಯ್ಯೆಂದು ಕಣ್ಣು ಕೋರೈಸುವ ಉಲ್ಕೆಯಂತೆ ಹರಿದು ರೆಪ್ಪೆ ಮುಚ್ಚುವುದರೊಳಗೆ ಸುಣ್ಣದ ಗುರುತಿನ ಮಧ್ಯಭಾಗದಲ್ಲಿ ನಾಲ್ಕಂಗುಲ ಹೊತು ಅತ್ತಿತ್ತ ತೊನೆಯುವುದನ್ನು ದೊರೆಗಳು ಕಂಡರು! "ಹುರ್ರಾ" ಅಂದವರೇ ಎದ್ದು ಓಡಿ ಮರದ ತೊಗಟೆಯಲ್ಲಿ ಸಿಲುಕಿಹೋಗಿ ಅಲ್ಲಾಡುತ್ತಿದ್ದ ಬಾಣವನ್ನು ಶಕ್ತಿ ಹಾಕಿ ಎಳೆಯಲು ಪ್ರಯತ್ನಿಸಿದರು. ಊಹೂಂ, ಅದು ಎಳ್ಳಷ್ಟೂ ಹಿಂದಕ್ಕೆ ಸರಿಯಲಿಲ್ಲ! ಅಂಗಾಲು ದಪ್ಪದ ಕಲ್ಲಿನಂತಿರುವ ಜೈನಿಯ ಮರದ ಮಧ್ಯಭಾಗದ ತನಕ ಹೊತ ಅಂಬನ್ನು ಶಕ್ತಿಯಿಂದ ಎಳೆಯುವುದು ಅಸಾಧ್ಯ. ಅದಕ್ಕೂ ಯುಕ್ತಿಯೇ ಬೇಕು. "ಬಿಡಿರಿ, ನಾನು ತೆಗೆಯುವೆ" ಎಂದ ಬೆಳ್ತನ ಮುಖವನ್ನು ಮೆಚ್ಚುಗೆಯ ಮುಗುಳ್ನಗುವಿನೊಡನೆ ನೋಡಿ ಆ ಸ್ಥಳವನ್ನು ಬಿಟ್ಟರು ದೊರೆಗಳು. ಬೆಳ್ತನು ಅಂಬನ್ನು ನಿಧಾನವಾಗಿ ಮೇಲೆ ಕೆಳಗೆ ಅಲ್ಲಾಡಿಸಿ ಸಡಿಲವಾದುದನ್ನು ತಿಳಿದು, ಸರಕ್ಕೆಂದು ಹಿಂದೆಳೆದುದನ್ನು ಕಂಡ ದೊರೆಗಳೊಮ್ಮೆ ನಿರಾಳವಾಗಿ ಉಸಿರೆಳೆದು ತಮ್ಮ ಸ್ಥಾನದಲ್ಲಿ ಬಂದು ಕುಳಿತರು. ಬೇಟೆ ಮುಗಿಸಿ ಹಿಂತಿರುಗಿದ ಬಳಿಕ ಬೆಳ್ತನಿಗೆ ಹದಿನೈದು ರೂಪಾಯಿ ಇನಾಮು ಕೊಡುವುದಾಗಿ ದೊರೆಗಳು ಒಡನೆಯೇ ಘೋಷಿಸಿದುದನ್ನು ಕೇಳಿ ಅಲ್ಲಿ ನೆರೆದಿದ್ದ ಬೇಟೆಗಾರರು ಅಸೂಯೆಯಿಂದಲೋ, ಮೆಚ್ಚುಗೆಯಿಂದಲೋ ಬೆಳ್ತನ ಮುಖವನ್ನೆ, ತೆರೆದ ಕಣ್ಣುಗಳನ್ನು ಮುಚ್ಚದೆ ನೋಡುತ್ತಿದ್ದರು. ಬೆಳ್ತನು, ತನ್ನ ಎಲೆ ಅಡಿಕೆ ಸಂಚಿಯನ್ನು ಬಿಚ್ಚಿ ಜೋಮು ಕೊಟ್ಟ ಎಲೆಗೆ ಸುಣ್ಣವನ್ನು ತೀಡುತ್ತಿದ್ದಾನೆ. ದೊರೆಗಳು ತನ್ನ ಎರಡು ಬೆರಳು ಉದ್ದದ ಚುಟ್ಟಾಕ್ಕೆ ಕಡ್ಡಿಗೀರಿ ಬೆಂಕಿ ಕೊಡುತ್ತಿದ್ದಾರೆ. ಅಜ್ಜಯ್ಯ ದೊಳ್ಳಪೂಜಾರಿಯ ಮುಖವನ್ನು ನೋಡಿ ಬೆಳ್ತನ ಸಾಹಸಕ್ಕೆ ಮುಗುಳ್ನಗುತ್ತಿದ್ದಾರೆ. ಅಂದಿನ ಹದಿನೈದು ರೂಪಾಯಿ ಬೆಲೆಯನ್ನು ಅರಿತಿದ್ದ ಅತಿಥಿಗಳು ದೊರೆಯ ಕೊಡುಗೈ ಗುಣವನ್ನು ಅಭಿನಂದಿಸುವಂತೆ ಅವರ ಮುಖವನ್ನೇ ನೋಡುತ್ತಿದ್ದಾರೆ. ಆಗ ಐದು ರೂಪಾಯಿಗೆ ಒಂದು ಮುಡಿ ಅಕ್ಕಿ ಸಿಗುತ್ತಿದ್ದ ಕಾಲ.

ಅಷ್ಟರಲ್ಲಿ ಕಾಡು ಸೋವಲು ನಾಲ್ಕು ಗ್ರಾಮದ - ಪಟ್ಟದ ಮೇರರು, ಬೊಟ್ಟದ ಮಾರಿಹೊಲೆಯರು, ದಟ್ಟಿಗೆಯ ಅಜಲರು, ಕೊಟ್ಯದ ಕೊರಗರು, ಜೇರದ ಮ್ಯಾಲರು- ಮುದುಕರು, ಯುವಕರು, ಮಕ್ಕಳೆನ್ನದೆ ತಮ್ಮ ತಮ್ಮ ಬಿಲ್ಲು, ಬಡಿಗೆ, ಕತ್ತಿಗಳೊಂದಿಗೆ ಸಜ್ಜಾಗಿ ಸಂದಣಿಸಿದವರ ಸಿದ್ಧತೆಗಳನ್ನು ಕಂಡು ಅಜ್ಜಯ್ಯನವರು, "ಬೇಟೆಗೆ ಹೊರಡೋಣವೇ?" ಎಂದರು. ''Yes, alright'' ಎಂದರು ದೊರೆಗಳು. ಸಂಗಾತಿಗಳು ತಮ್ಮ ಕೋವಿಗಳನ್ನು ಹೆಗಲಿಗೇರಿಸಿ ಹೊರಡಲು ಸಿದ್ಧರಾದರು. ದೊರೆಗಳೂ ತಮ್ಮ ಕಾಲಿಗೆ ಬೂಟುಗಳನ್ನು ಸಿಕ್ಕಿಸಿ ಹೆಗಲಿಗೆ ತಮ್ಮ 'ಕಾಂಬಿನೇಶನ್ ರೈಫಲ'ನ್ನು ಏರಿಸಿದರು. ನಿರ್ದೇಶಕತ್ವವನ್ನು ಹೊತ್ತ ಅಜ್ಜಯ್ಯನವರೂ ಜೊತೆಯಲ್ಲೆ ನಾನೂ ಮುಂದಾದೆವು. ಹಿಂದಿರುಗಿ ನೋಡಿದೆ; ಕಂಬಳಕ್ಕೆ ಹೋಗುವ ಜನ ದಟ್ಟಣೆಯ ನೆನಪಾಗುವಂತಿದೆ. ಎಲ್ಲರಿಗೂ ಹಿಂದುಗಡೆಯಲ್ಲಿ ಊರ ಗುರಿಕಾರ, ಬೋಂಟ್ರ; ಬೇಟೆಗಾರರೊಂದಿಗೆ ತಂದೆಯವರೂ ಹೆಜ್ಜೆ ಹಾಕುತ್ತಿದ್ದಾರೆ. ವೈರಿಯಕೋಟೆಯನ್ನು ನುಚ್ಚುನುರಿಮಾಡಲು ಹೊರಟ ಸೇನೆಯ ಗಂಭೀರತೆಯನ್ನು ನೆನಪಿಗೆ ತರುವ ಈ ಬೇಟೆಯ ತಂಡವು ಮುಂದಾಳುವನ್ನು ಹಿಂಬಾಲಿಸಿ ಸುಬ್ರಹ್ಮಣ್ಯ ಮಾರ್ಗದಲ್ಲಿ ಮುಂದುವರಿಯಿತು. ಅಜ್ಜಯ್ಯನವರು ಊರ ಬೆಡಿಕಾರರನ್ನು ಗಂಡಿಯ ಹೆಸರು ಹೇಳಿ ಇಂಥವರು ಇಂತಿಂಥ ಗಂಡಿಗಳಲ್ಲಿ ನಿಲ್ಲಬೇಕೆಂದು ತಿಳಿಸಿದರು. ಅತಿಥಿಗಳನ್ನು ಅವರವರ ಯೋಗ್ಯತಾನುಸಾರ ವಿವಿಧ ತಾಣಗಳಲ್ಲಿ ನಿಲ್ಲಿಸಿ, ಕಲೆಕ್ಟರರನ್ನು ಸುಬ್ರಹ್ಮಣ್ಯ ಮಾರ್ಗದ ಬದಿಯ ಹಿರಿಯ ಚಿರುವೆ ಮರದ ಬುಡದಲ್ಲಿ ನಿಲ್ಲುವಂತೆ ಸೂಚಿಸಿದರು. ಪಳ್ಳಿಕಂಡದ ಕಾಡನ್ನು ಸೋವ ಸಮಯ. ಆಜಣದ ಕಡೆಗೆ ಓಡುವ ಮೃಗಗಳು ಈ ದಾರಿಯಿಂದಲೆ ಆ ತಾಣವನ್ನು ಸೇರುವವೆಂದೂ, ಹಂದಿ, ಕಡವೆ, ಜಿಂಕೆಯಲ್ಲದೆ ಆನೆ, ಹುಲಿಗಳು ಈ ದಾರಿಯಾಗಿ ಬರುವ ಪರಿಪಾಠವಿಲ್ಲವೆಂದೂ ಹೇಳಿದರು. ಇಲ್ಲಿ ರೈಫಲಿನ ಅಗತ್ಯವಿಲ್ಲ. ಜೋಡು ನಳಿಗೆಯ ಕೋವಿಯೇ ಸಾಕು ಎಂದು ಜಾಗ್ರತೆ ಹೇಳಿ ಅವರೊಂದಿಗೆ, ಬರ್ಜಿಯನ್ನು ಹಿಡಿದಿರುವ ಕುಂಞಿಮೋನು ಬ್ಯಾರಿಗೆ ದೊರೆಗಳ ಸಂಗಾತಿಯಾಗಿ ನಿಲ್ಲುವಂತೆ ತಿಳಿಸಿದರು. ಸೋವತರನ್ನು ಕೂಡಿಕೊಂಡು ಮುಂದುವರಿದೆವು. ದೊರೆಗಳು ರೈಫಲನ್ನು ಕುಂಞಿಮೋನು ಬ್ಯಾರಿಯ ಕೈಯಲ್ಲಿ ಕೊಟ್ಟು,

ಅತ್ತಿತ್ತ ದೂರ ದೃಷ್ಟಿಯನ್ನೊಮ್ಮೆ ಹಾಯಿಸಿ, ತಮ್ಮ ಜೋಡುನಳಿಗೆಯ ತೋಟಾ ಕೋವಿಯನ್ನು ಹಿಡಿದು ನಿಂತಿದ್ದ ಪೇದೆಯ ಕೈಯಿಂದ ಇಸಿದು ಕೊಂಡರು. ಆತನನ್ನು ಮಾರ್ಗದ ಆಚೆ ಬದಿಗೆ ಹೋಗಿ ಸುರಕ್ಷಿತ ಸ್ಥಳವನ್ನು ಆರಿಸಿ ಕುಳಿತುಕೊಳ್ಳಲು ಹೇಳಿದ ದೊರೆಗಳು ಕೋವಿಗೆ ತೋಟಾ ತುಂಬಿಸಿ ಸನ್ನದ್ಧರಾದುದನ್ನು ಕಂಡು, ನಾವು ಮುಂದೊತ್ತಿದೆವು. ಅಜ್ಜಯ್ಯನವರ ಕೋವಿಮದ್ದಿನ ಚೀಲವು ನನ್ನ ಹೆಗಲಲ್ಲಿ ಜೋತಾಡುತ್ತಿತ್ತು. ಈ ಸಮಯದಲ್ಲಿ ಒಂದಕ್ಕೊಂದು ಕಚ್ಚಾಡುತ್ತಿದ್ದ ಹಲವಾರು ಮನೆಯ ನಾಯಿ ಗಳು ಉಸಿರು ಬಿಗಿಹಿಡಿದಂತೆ, ತಮ್ಮ ತಮ್ಮ ಯಜಮಾನರ ಹಿಂದೆ - ಪೋಕರಿ ಮಕ್ಕಳು ಬರುವಂತೆ - ಬರುತ್ತಿದ್ದವು. ಕೋವಿಯವರೆಲ್ಲ ಎದುರು ಬದಿಯಿಂದ ನಿರ್ದೇಶಿತ ಗಂಡಿಯಲ್ಲಿ ನಿಲ್ಲಲು ಈ ಮೊದಲೇ ಹೋಗಿದ್ದರು. ಕಳ್ಳಕೋವಿಯವರು ಸೋವತರ ಹಿಂದಿನಲ್ಲಿರತಕ್ಕದ್ದೆಂದೂ ಅವರಲ್ಲಿ ಯಾರಾ ದರೂ ಈಡು ಮಾಡಿದರೆ ಪಟೇಲರೇ ಹೊಡೆದುದೆಂದು ಹೇಳಬೇಕೆಂದೂ ಅಜ್ಜಯ್ಯನವರ ತಾಕೀತು ಆಗಿತ್ತು. ಎಷ್ಟೆಂದರೂ ಕಳ್ಳಕೋವಿಯಲ್ಲವೆ? ಕಲೆಕ್ಟರರ ಮನಸ್ಸು ಹೇಗೆಂದು ಅರಿತಿರಲಿಲ್ಲ.

ಪಟೇಲರ ಆಣತಿಯಂತೆ ಹತ್ತೈವತ್ತು ಗರ್ನಾಲುಗಳೊಂದಿಗೆ ಬಂದಿದ್ದ ಗರ್ನಾಲು ಕಾಸಿಂ ಸಾಹೇಬರು ನಮ್ಮೊಂದಿಗೆ ಇದ್ದರು. ಕಾಡು ಹೊಡೆ ಯಲು ಸೋವತರನ್ನು ಜನರಿಷ್ಟೇ ಎಂದು ನಿಶ್ಚಯಿಸಿ - ಇಂತಿಷ್ಟು ದೂರಕ್ಕೆ ಬಿಲ್ಲಿನವನಿಗೆ ಸಾಥಿಯಾಗಿ ಬಡಿಗೆಯವನೊಬ್ಬ, ಕತ್ತಿ ಕವಣೆಯಂತೆ ಕಾಡನ್ನು ಬಳಸಿ ನಿಲುವ ವ್ಯವಸ್ಥೆ ಮಾಡಿದರು. ಆಯಾ ನಾಯಿಯ ಒಡೆಕ್ಕಾರನು ತನ್ನ ನಾಯನ್ನು ಹುರಿದುಂಬಿಸಬೇಕೆಂದು ತಿಳಿಸಿದರು. ಸೀಗೆ ಬಲ್ಲೆಗೆ ಗರ್ನಾಲು ಎಸೆದೇ ಅದರಲ್ಲಿದ್ದ ಮೃಗವನ್ನು ಹೊರಡಿಸಬೇಕೆಂದು ಕಾಸಿಂ ಸಾಹೇಬರಿಗೆ ಆಣತಿ ಮಾಡಿ, ಯಾರೊಬ್ಬನೂ ಗುಂಪಿನಲ್ಲಿ ಸೇರಬಾರದೆಂದೂ ಒಬ್ಬಂಟಿ ಯಾಗಿಯೇ ಕಾಡು ಹೊಡೆಯಬೇಕೆಂದೂ, ದಾರಿಯಲ್ಲಿ ಅಡ್ಡವಾದ ಬಲ್ಲೆ ಪೊದೆಯನ್ನು ಕಡಿದೇ ಮುಂದುವರಿಯಬೇಕೆಂದೂ ಎಚ್ಚರಿಸಿದರು. ತಾವು ಕರಿಕಲ್ಲ ಗುಡ್ಡೆಯ ಗಂಡಿಯನ್ನು ಮುಟ್ಟಿದುದನ್ನು ಅರಿತೊಡನೆಯೇ ಒಂದು ಗರ್ನಾಲು ಹೊಡೆಯಬೇಕೆಂದೂ, ಅಜಾಗರೂಕತೆಯಿಂದ ಹಂದಿಯ ಹಿಂದೆ ಬೀಳಬಾರದೆಂದೂ ಆದೇಶಿಸಿದರು. ನಾವು ಸೇರಲಿರುವ ಕರಿಕಲ್ಲಗುಂಡಿಯನ್ನು

7, 8 ನಿಮಿಷಗಳೊಳಗೆ ತಲುಪಿದೆವು. ಕರಿಕಲ್ಲಗುಂಡಿಯೆಂದರೆ 'ಆಜನ' ಎಂಬ ಸ್ಥಳದಲ್ಲಿ ಇಂದು ಕಬ್ಬಿಣದ ಅದುರು ತೆಗೆದ ಬೆಟ್ಟಕ್ಕೆ ಹೋಗುವ ದಾರಿ. ಇದು, ಸಾಧಾರಣ ಕಾಡಿನ ಮಧ್ಯಭಾಗದಲ್ಲಿರುವ ಸ್ಥಳ. ಸೋವತರ ಬೊಬ್ಬೆಗೆ ಎಚ್ಚರಗೊಂಡ ಮೃಗಗಳು ಕಾಡಿನಿಂದ ಓಡಲು ಹವಣಿಸುತ್ತ ಸಂಧಿಸ್ಥಳವಾದ ಇಲ್ಲಿಗೆ ಬಂದೇ ಸುಬ್ರಹ್ಮಣ್ಯದ ಕಾಡಿನತ್ತಲೋ, ಕರಿಕಲ್ಲಿನ ಗುಡ್ಡದತ್ತಲೋ, ಆಜನ-ಪಳ್ಳಿಕಂಡದತ್ತಲೋ ಹೋಗಬೇಕು. ಇದು ಅಂಥ ಮಧ್ಯ ಸ್ಥಳ; ಉಸಿರ್ದಾಣ. ಅಂತೆಯೇ ಗಂಡಿನಲ್ಲಿ ನಿಂತವರಿಗೂ ಅತಿ ಸನಿಯದ ಸ್ಥಾನ. ನನ್ನ ಹೆಗಲಲ್ಲಿದ್ದ ಚೀಲವನ್ನು ಅಜ್ಜಯ್ಯನವರು ಇಸಿದುಕೊಂಡು ನನ್ನನ್ನು ಸನಿಹದಲ್ಲಿನ ಬೊಡ್ಡೆಯಲ್ಲಿ ಕೂತುಕೊಳ್ಳುವಂತೆ ಕೈಸನ್ನೆಯಿಂದ ಸೂಚಿಸಿದರು. ತಮ್ಮ ಕೋವಿಯನ್ನೊಮ್ಮೆ ಎದೆಗೆ ಹಾಕಿ, ಸುತ್ತು ದೃಷ್ಟಿ ಬೀರಿ ಮರವೊಂದರ ಮರೆಯಲ್ಲಿ ನಿಂತೊಡನೆಯೇ ಸೋವತರತ್ತಣಿಂದ ಕಾಸಿಂ ಸಾಹೇಬರ ಗರ್ನಾಲಿನ 'ಧಮ್ಯ್ಯಾಲ್' ಎಂಬ ಶಬ್ದವು ಕೇಳಿಸಿತು. ಒಡನೆ ಸ್ಕೂಲಿನಿಂದ ಹೊರಬಿದ್ದ ಮಕ್ಕಳ ಕೋಲಾಹಲದಂತೆ ಒಮ್ಮೆಲೇ 'ಕಾ, ಕೂವು, ಹಿಡಿ, ಬಡಿ, ಕಡಿ, ತುಚ್ಚಿ, ಪತ್ತಿ' ಎಂಬ ಬೊಬ್ಬೆ ಕೇಳಿಬಂತು. ಅಜ್ಜಯ್ಯನವರು ಸಜ್ಜಾಗಿ ಎದುರು ನೋಡುತ್ತಿದ್ದಾರೆ. ಕೊಡಿದನಿಗೆ ಎದ್ದ ಒಂಟಿ ಜಿಂಕೆಯೊಂದು ಎತ್ತ ಹೋಗಲಿ? ಸುಬ್ರಹ್ಮಣ್ಯದತ್ತವೇ? ಕರಿಕಲ್ಲಗಂಡಿಗೆ? ಆಜನದತ್ತವೇ? ಪಳ್ಳಿಕಂಡಕ್ಕೇ? ಎಂಬಂತೆ ತೊಳಲಾಟಕ್ಕೆ ಸಿಲುಕಿತು. ಹಿಂದೆ ಹೋಗಬಹುದೆಂದರೆ ಬೊಗಳುವ ನಾಯಿಗಳ ಭೀತಿ. ಒಮ್ಮೆ ನಿಂತು, ಒಮ್ಮೆ ಮೈಸಿಗುರಿಸಿ ಎರಡು ಮಾರು ನೆಗೆದು ಕೋಡುಗಳನ್ನು ತನ್ನ ಶರೀರಕ್ಕೆ ಆನಿಸಿ ಅದರ ಕವಲುಗಳು ಎಲ್ಲಿಯೂ ಸಿಕ್ಕಿಕೊಳ್ಳದಂತೆ ಭದ್ರವಾಗಿರಿಸಿಕೊಂಡು ಬರುವ ಗಂಭೀರತೆಯ ಅಂದಕ್ಕೆ ಸೋಲದವರಿಲ್ಲ. ಎತ್ತ ಹೋಗುವುದೆಂಬ ಖಚಿತತೆಯಿಲ್ಲದೆ ಮುಂದೊತ್ತಿ ಬರುತ್ತ ಇನ್ನೇನು ಅಜ್ಜಯ್ಯನವರಿಗೆ ಬರಿಯ ಇಪ್ಪತ್ತು ಮಾರು ದೂರವಿದೆಯೆನ್ನುವಷ್ಟರಲ್ಲಿ ಗಕ್ಕನೇ ನಿಂತಿತ್ತು. 'ಢಮಾಲ್' ಎಂದ, ಅಜ್ಜಯ್ಯನವರ ಕೋವಿಯ ನಳಿಗೆಯು ಹೊಗೆಯನ್ನು ಕಾರುತ್ತಿದೆ. ಜಿಂಕೆಯು ನೀಳವಾದ ಒಂದು ನೆಗೆತವನ್ನು ನೆಗೆದು ಬಿದ್ದು ಜೀವ ತೊರೆಯಲು ಕೈ, ಕಾಲು ಜಾಡಿಸುತ್ತಿದೆ!

ಅಜ್ಜಯ್ಯನವರು ಪುನಃ ಈಡು ತುಂಬಿಸಲು ಹವಣಿಸುತ್ತಿದ್ದಾರೆ. ಎಲ್ಲಿಯಾದರೂ ಬೋಣಿಯ ಪ್ರಾಣ ಎದ್ದೋಡಿದರೆ ಎಂಬ ಶಂಕೆ! ಅಜ್ಜಯ್ಯನವರಿಗೆ ಸಹಾಯ ಮಾಡಲೆಂದು, ಉಸಿರು ಬಿಗಿಹಿಡಿದು ಮರದ ಬೊಡ್ಡೆಗೆ ಆತು ಕುಳಿತಿದ್ದ ನಾನು, ನಾಲ್ಕೇ ನೆಗೆತದಲ್ಲಿ ಅಜ್ಜಯ್ಯನವರ ಬಳಿಸೇರಿದೆ. ಅವರು ಡಬ್ಬಿಯಿಂದ ಸುರಿದು ಸುರಿದು ರಂಜಕವನ್ನು ಕೋವಿಗೆ ತುಂಬಿಸಿ, ತಟ್ಟಿ ಕೆಳಗಿಳಿಸುತ್ತಿದ್ದರು. ಅವರಿಂದ ರಂಜಕದ ಡಬ್ಬಿಯನ್ನು ತೆಗೆದುಕೊಂಡು ತೆರೆದಿದ್ದ ಮುಚ್ಚಳ ಹಾಕಿದೆ. ಕೋವಿಯಿಂದ ಮದ್ದು ಸೋರಿ ಹೋಗದಂತೆ ಮಾಡಲಿರುವ ತೆಂಗಿನ ಚುಂಗನ್ನು ಆರಿಸಿ ಅಂಗೈಯಲ್ಲಿ ಉರುಟಿಸಿ ಕೊಟ್ಟೆ. ಅವರು ಗಜಕೋಲಿನಿಂದ ಅದನ್ನು ಜಡಿದು,ಜಡಿದು ಗಟ್ಟಿ ಮಾಡುತ್ತಿರುವಾಗ ನಾನು ಗುಂಡಿನ ಚೀಲವನ್ನು ತೆಗೆದೆ. ಗುಂಡುಗಳನ್ನು ಅಂಗೈಗೆ ಸುರಿದು ಅವರಿಗೆ ನೀಡಿದೆ. ಅವರು ಬೇಕಾದ ಗುಂಡುಗಳನ್ನು ಆಯ್ದು ಕೋವಿಗೆ ತುಂಬಿಸಿ ಪುನಃ ಚುಂಗನ್ನು ಹಾಕಿ ಹದವಾಗಿ ಜಡಿದು ನಾನು ಕೊಟ್ಟ ಕೇಪು ಮದ್ದಿನಿಂದ ಕೂಡಿದೆಯೇ ಎಂದು ನೋಡಿ, ಕುದುರೆಯನ್ನೆತ್ತಿ ನಿಪ್ಪಲಿಗೆ ಇಟ್ಟು ತಳದಲ್ಲಿದ್ದ ರಂಜಕವನ್ನು ಊದಿ ಕುದುರೆ ಇಳಿಸಿ ಎದುರು ನೋಡುತ್ತಿರುವಾಗ, ಕವಲು ಕವಲಾದ ಅರೆಮಾರು ಗಾತ್ರದ ಕೋಡಿನ, ಹೊಳೆಯುವ ಬಿಳಿಯ ಚುಕ್ಕೆಯ, ನಸುಕೆಂಪು, ಹಳದಿ ಬಣ್ಣದ ಜಿಂಕೆಯು ಸತ್ತೇಹೋಗಿದೆ. "ಹತ್ತಿರ ಹೋಗಿ ಒಮ್ಮೆ ನೋಡಲೆ, ಅಜ್ಜ?" ಎಂದೆ. "ಬೇಡ, ಎದುರಿನಿಂದ ಕಾಡು ಹೊಡೆಯುತ್ತಿದ್ದಾರೆ. ಹಂದಿ, ಕಡವೆ, ಕಾಡುಕೋಣಗಳು ಬರಲೂ ಬಹುದು" ಎಂದರು. ನಾನು ಸುಮ್ಮನಾಗಿ ಹಿಂದಿರುಗುವೆನೆನ್ನುವಾಗ "ಈಗ ತಾನೆ ಇಲ್ಲಿಂದ ಈಡಾದುದರಿಂದ ಇನ್ನು ಮೃಗಗಳು ಇಲ್ಲಿಗೆ ಬರುವ ಸಾಧ್ಯತೆಯಿಲ್ಲ. ಮೃಗಗಳು ಇದ್ದರೆ ಆಯಾ ಕಾಡಿನ ಗಂಡಿಯತ್ತಲೇ ಓಡುವುವು. ಆದರೂ ಈಗ ಹತ್ತಿರ ಹೋಗುವುದು ಬೇಡ. ಹಿಂದೆ ಕೂತಲ್ಲಿಗೇ ಹೋಗು" ಎಂದರು. ನಾನು ನನ್ನ ಮೊದಲಿನ ಸ್ಥಳವನ್ನು ಸೇರಿದೆ. ಅಷ್ಟರಲ್ಲಿ ಎದುರಿನಿಂದ 'ಹೋ, ಹಂದಿಗಳು ಮುಂದೆ! ಬೊಳ್ಳು, ಕಾಳು, ಹಿಡಿ, ಹಿಡಿ, ಬಡಿ, ಕಡಿ' ಎಂಬ ಬೊಬ್ಬೆಯೇ ಬೊಬ್ಬೆ. ಢಂ, ಢಂ, ಢಮ್ಮೆಂದು ನಾಲ್ಕು ಕೋವಿಯ ಈಡನ್ನು ಕೇಳಿದ ಅಜ್ಜಯ್ಯನವರು ಭೂತ ಹಿಡಿದ ಪಾತ್ರಿಯಂತೆ ಆವೇಶದಿಂದ ಅತ್ತಿತ್ತ ನೋಡುತ್ತಿದ್ದಾರೆ. ಹಂದಿಗಳೊಂದೂ

ನಮ್ಮತ್ತ ಬರುವುದಿಲ್ಲ. ಕೋವಿಯನ್ನು ನೆಲಕ್ಕೂರಿ ಅಜ್ಜಯ್ಯನವರು ಎದುರ್ಗಡೆಯೇ ನೋಡುತ್ತಿದ್ದಾರೆ. ಛಟೀಲ್ ಎಂಬ ಸದ್ದನ್ನು ಕೇಳಿದ ಅಜ್ಜಯ್ಯನವರು ಕೈಯಿಂದ ಕಲೆಕ್ಟರರು ನಿಂತ ಸ್ಥಳವನ್ನು ತೋರಿಸಿ ಕಲೆಕ್ಟರರು ಈಡು ಮಾಡಿದರಲ್ಲ ಎಂಬ ಸಂತೋಷದ ಮುಖಮುದ್ರೆಯ ನ್ನಾಂತರು. ಅಷ್ಟರಲ್ಲಿ, ಅಲ್ಲಿಂದಲೇ ಅದೇ ರೀತಿಯ ಮತ್ತೊಂದು ಗುಂಡಿನ ಸದ್ದು ಕೇಳಿಸಿತು. ಸೋವತರ ಬೊಬ್ಬೆಯ ಅಬ್ಬರಕ್ಕೆ ನಿಲುಗಡೆಯಿರಲಿಲ್ಲ. ನಾಯಿಗಳು ನಾಗಾಲೋಟದಿಂದ ಮುನ್ನುಗ್ಗುತ್ತಿವೆ. ಇದ್ದ ಮೃಗಗಳೆಲ್ಲಾ ಆ ಕಾಡಿನಿಂದ ಹೊರಬಿದ್ದಾಯಿತೆಂದು ಅರಿತ ಸೋವತರು ಗಂಡಿಗಳಲ್ಲಿ ನಿಂತ ಕೋವಿಯವರನ್ನು ಕಾಣುವ ತವಕದಲ್ಲಿ ಕಾಲಿಗೆ ಚುಚ್ಚಿದ ಮುಳ್ಳು, ತೊಡಕಿದ ಬೀಳಲನ್ನೂ ಲೆಕ್ಕಿಸದೆ ಮುನ್ನುಗ್ಗುವ ಭರದಲ್ಲಿ ಇದ್ದಾರೆ. ಬಾಣ ಎಸೆದು ಕೊಂದ ಮಣಭಾರದ ಬರಿಂಕವನ್ನು ಹೆಮ್ಮೆಯಿಂದ ಹೆಗಲಿಗೆ ಏರಿಸಿಕೊಂಡು ನಿದಾನವಾಗಿ ಬರುತ್ತಿರುವ ಬೆಳ್ತನನ್ನು ಕರೆದು, ತಮ್ಮ ಈಡಿನಿಂದ ಸತ್ತ ಜಿಂಕೆಯನ್ನು ಅಜ್ಜಯ್ಯ ತೋರಿಸಿದರು. ಅದನ್ನೂ ಕಾಡಿನ ಮಧ್ಯದಲ್ಲಿ ಕಾದಿರುವಂತೆ ಹೇಳಿ ಬೆಳ್ತನನ್ನೂ ಜೋಮುವನ್ನೂ ಅಲ್ಲಿಯೇ ನಿಲ್ಲಿಸಿದರು. ನಾವು ಲಗುಬಗೆಯಿಂದ ಕಲೆಕ್ಟರರಿದ್ದಲ್ಲಿಗೆ ಬಂದು ನೋಡಿದೆವು. ಹತ್ತು ಜನರು ಎಳೆದರೂ ಜಗ್ಗದ ಒಂಟಿಗ ಹಂದಿ ನಾಲ್ಕು ಕಾಲನ್ನೂ ನೀಡಿ, ತನ್ನ ಹಿಡಿ ಗಾತ್ರದ ಕೋರೆಯನ್ನು ತೋರಿಸುತ್ತಾ ನೀಳವಾಗಿ ನಾಲಗೆಯನ್ನು ಹೊರ ಹಾಕಿ ಸತ್ತೇಹೋಗಿದೆ! ದೊರೆಗಳ ಚುರುಟನಿಂದ ಸುರುಳಿ ಸುರುಳಿಯಾಗಿ ಹೊಗೆ ಮೇಲೇರುತ್ತಿದೆ. ಪೇದೆಯೂ, ಬರ್ಚಿ ಸಮೇತನಾದ ಕುಂಞಿಮೋನುವೂ 'ನಾವು ಗೆದ್ದವರು; ನೀವು?' ಎಂಬ ಪ್ರಶ್ನಾರ್ಥಕ ದೃಷ್ಟಿಯನ್ನು ನಮ್ಮೆಡೆಗೆ ಬೀರುತ್ತಿದ್ದಾರೆ. ನಮ್ಮನ್ನು ಕಂಡ ದೊರೆಗಳು "ಗ್ರೇಂಡ್, ಗ್ರೇಂಡ್" ಎಂದರು. ಕಾಡಿನಿಂದ ಓಡಿಬಂದ ನಾಯಿಗಳು ಸತ್ತ ಹಂದಿಯ ಮೇಲೆ ಮುಗಿಬಿದ್ದು ಮೂಗು, ಕಿವಿ, ದವಡೆ, ಬಾಲ, ಕಾಲೆನ್ನದೆ ಕಚ್ಚಿ ಎಳೆಯಲು ಸುರುಮಾಡಿದುವು. ಕಲೆಕ್ಟರರು ನಾಯಿಗಳನ್ನು ಓಡಿಸುವಂತೆ ಆಳುಗಳಿಗೆ ಹೇಳಿ, ಅಜ್ಜಯ್ಯನವರತ್ತ ತಿರುಗಿ "ನೀವೂ ಹೊಡೆದಿರಾ?" ಎಂದು ಕೇಳಿದರು. ಅಜ್ಜ ಉತ್ತರಿಸಿದರು – "ಹೌದು. ಜಿಂಕೆಯೊಂದು ಮೊದಲ ದಸಿಗೆ ಎದ್ದುದು ನನ್ನತ್ತ ಬಂತು. ಬೋಣಿಯ

ಮಿಕವಾದುದರಿಂದ ಬಿಟ್ಟರೆ ಮತ್ತೆ ದಕ್ಕದೆಂದು ಹೊಡೆದೆ". "ಅದು ಹೆಣ್ಣೊ?" ಎಂದ ದೊರೆಗಳ ಸಂದೇಹ ನಿವಾರಿಸುತ್ತ ಅಜ್ಜಯ್ಯನೆಂದರು- "ಅಲ್ಲ, ಬಲಿತ ಕೋಡಿನ ಗಂಡು". ಸಂತೃಪ್ತಿಯ ಮುಗುಳ್ನಗು ಸೂಚಿಸಿದ ದೊರೆಗಳೂ ಉಳಿದ ಶಿಖಾರಿಗಳೂ ನಮ್ಮೆಡೆಗೆ ಬರತೊಡಗಿದರು. ದೊರೆಗಳ ಈಡಿಗೆ ಮೊದಲು ಸದ್ದು ಕೇಳಿದ ನಾಲ್ಕು ಈಡು ಯಾರದೆಂದು ಅಜ್ಜ ವಿಚಾರಿಸಿದರು; ಅಷ್ಟರಲ್ಲಿ ಏದುಸಿರು ಬಿಡುತ್ತ ಬರುತ್ತಿದ್ದ ದೊಳ್ಳಜ್ಜನನ್ನು ಕಂಡು ಏನೆಂದು, ಕೈ ಸನ್ನೆಯಿಂದ ಕೇಳಿದರು. ಆತನು 'ಭಾರೀ ಒಂಟಿಗನಿಗೆ ಹೊಡೆದೆನೆಂದೂ, ಅದು ಪೆಟ್ಟಾಗಿ ಓಡಿ ಕೆಲವೇ ಮಾರು ದೂರ ಹೋಗಿ ಬಿದ್ದಿರಬೇಕೆಂದೂ, ತಾನೂ ಹಿಂಬಾಲಿಸುವೆನೆಂದರೆ ತನ್ನ ಕೋವಿಯ ನಿಪ್ಪಲೇ ಈಡಿನ ಭರಕ್ಕೆ ಹಾರಿ ಹೋಗಿದೆಯೆಂದೂ' ಹೇಳಿದ್ದಲ್ಲದೆ ತನ್ನೊಡನೆ ಪಟೇಲರೇ ಬರಬೇಕೆಂದನು. ಅಜ್ಜಯ್ಯನವರು ತಾವೇ ಹೋಗದೆ ತಮ್ಮ ಕೋವಿಯನ್ನು ಆತನ ಕೈಗಿತ್ತು ಪೆಟ್ಟಾದ ಹಂದಿ ಬಿದ್ದಿರುವ ನೆಲೆಯನ್ನು ಜಾಗ್ರತೆಯಾಗಿ ಹುಡುಕುವಂತೆ ಅವನನ್ನು ಕಳುಹಿಸಿದರು. ಬೇರಾರು ಇತರ ಈಡುಗಳನ್ನು ಹೊಡೆದುದೆಂದು ವಿಚಾರಿಸುವಾಗ ನನ್ನ ತಂದೆಯವರ ಒಂದು ಈಡಿಗೆ ಮರ್ಮತಪ್ಪಿ ಪೆಟ್ಟುತಿಂದ ಹಂದಿ ಓಡಿತೆಂದೂ ಚಿಕ್ಕಪ್ಪ ಹೊಡೆದ ಒಬ್ಬನು ಹೊರುವ ಕಿರು ಹಂದಿಯೊಂದು ಬಿದ್ದಿದೆಯೆಂದೂ ಗೊತ್ತಾಯಿತು. ಮತ್ತೊಂದು ಈಡುಮಾಡಿದವರಾರೆಂದು ವಿಚಾರಿಸುವಾಗ ಉತ್ತರಿಸುವವರೇ ಇಲ್ಲ! ಕಳ್ಳಕೋವಿಯಿಂದ ಹೊಡೆದ ಈಡು ತನ್ನದೆಂದು ಕಲೆಕ್ಟರರ ಮುಂದೆ ಹೇಳಿಕೊಳ್ಳುವವರಾರು? ಹೋ, ಅದೇನು? "ಢಂ" ಎಂದಿತು ಈಡಿನ ಸದ್ದು! ದೊಳ್ಳ ಪೂಜಾರಿಯದೇ ಎಂದರಿತ ಕಲೆಕ್ಟರರೂ, ಹಿರಿಯರೂ ಮತ್ತೊಂದು ಒಂಟಿಗ ಹಂದಿಯು ದೊರೆಯಿತೆಂಬ ತೃಪ್ತಿಯ ಮುಖಭಾವವನ್ನು ಪ್ರದರ್ಶಿಸಿದರು. ಸೋವತರು ಬಿದ್ದ ಮೃಗಗಳನ್ನು ಪಳ್ಳಿಕಂಡದ ಪಲ್ಕೆಯಲ್ಲಿ ಒಟ್ಟುಗೂಡಿಸಿದರು. ಮುಂದಿನ ಕಾಡನ್ನು ಸೋವಲು ಹೋಗುವುದೆಂಬ ನಿರ್ಣಯವು ಆ ಮೊದಲೇ ಆಗಿದ್ದುದರಿಂದ ಎಲ್ಲರೂ ಓಡೋಡಿ ಅಜ್ಜಯ್ಯನವರ ನಿರ್ದೇಶನದಂತೆ ಕೆಲಸಕ್ಕೆ ಅಣಿಯಾದರು. ನಾಲ್ಕು ಜನರು ನಾವು ಹೊಡೆದ ಜಿಂಕೆಯನ್ನು ತರಲು ಹೋದರು. ಹತ್ತು ಜನರು ಕಲೆಕ್ಟರರು ಹೊಡೆದ ಹಂದಿಯ ಕೈಕಾಲನ್ನು ಕಾಡಬಳ್ಳಿಯಿಂದ

ಬಿಗಿಯಾಗಿ ಕಟ್ಟಿ ಅದರ ಸಂದಿಯಲ್ಲಿ ಬಡಿಗೆಯನ್ನು ತುರುಕಿಸಿದರು. ಅದರ ದಾಡೆಯ ಎಡೆಯಿಂದ ಪುಂಡಿನಾರ ಹಗ್ಗವನ್ನು ತುರುಕಿಸಿ ಮುಖವನ್ನು ಅಲ್ಲಾಡದಂತೆ ಬಡಿಗೆಗೆ ಬಿಗಿದು ಕಟ್ಟಿ ಐದೈದು ಜನರು ಕೂಡಿ ಎತ್ತಿದರು. ಆದರೆ ಅವರಿಂದ ಹಂದಿಯನ್ನು ಮೇಲೆತ್ತಲಾಗಲಿಲ್ಲ. ಬಳಿಯಲ್ಲಿ ನಿಂತಿದ್ದ ಕಲೆಕ್ಟರರು ಪೇದೆಯ ಕೈಯಿಂದ ರೈಫಲನ್ನು ಎಳೆದು ನನ್ನ ಕೈಗೆ ಕೊಟ್ಟು, ಪೇದೆಯನ್ನುದ್ದೇಶಿಸಿ, "ಹೂಂ, ನೋಡುವುದೇನು? ಕೊಡು ಹೆಗಲು" ಎಂದರು. ಹಾಗೆಂದ ಕಲೆಕ್ಟರರು ಅದೇ ಠೀವಿಯಲ್ಲಿ ಕುಂಞಿಮೋನುವಿನತ್ತ ನೋಡಿದಾಗ ಅವನ ಮುಖದ ಬಣ್ಣವೇ ಬದಲಾಗ ತೊಡಗಿ ಮೆಲ್ಲನೆ ಕಾಲ್ತೆಗೆಯಲು ಅನುವಾದ! ಅಚ್ಚರಿಗೊಂಡ ದೊರೆಗಳು ಕಾರಣವನ್ನು ಕೈಸನ್ನೆಯಿಂದಲೇ ವಿಚಾರಿಸಿದಾಗ ಅಜ್ಜನವರು, "ಮುಸಲ್ಮಾನರಿಗೆ ಹಂದಿಯು ಹರಾಂ. ಅವರು ಅದನ್ನು ಮುಟ್ಟುವವರಲ್ಲ" ಎಂದು ವಿವರಣೆ ನೀಡಿದರು. ''Is it so''? ಎಂದು ಉದ್ಗರಿಸಿದ ದೊರೆಗಳು ಕುಂಞಿಮೋನುವನ್ನು "ಬೇಡ, ಬೇಡ" ಎಂದು ತಡೆದು ಅವನನ್ನು ಸಂದಿಗ್ಧತೆಯಿಂದ ಪಾರುಗೊಳಿಸಿದರು. ಅಷ್ಟರಲ್ಲಿ ಆಳುಗಳು ದೂರದಿಂದ ಜಿಂಕೆಯನ್ನು ಹೊತ್ತು ತರುವುದನ್ನು ಕಂಡ ನಮ್ಮ ದೃಷ್ಟಿಯೆಲ್ಲ ಆ ಕಡೆಗಾಯಿತು. ಗಂಡುಬೀರಿಯಂತೆ ಜೋಮುವು ಬರಿಂಕವನ್ನೂ ಬೆಳ್ತನ ಬಿಲ್ಲನ್ನೂ ಹೆಗಲಲ್ಲಿ ಹಾಕಿಕೊಂಡು ಮುಂದಾಗಿ ಬರುತ್ತಿದ್ದಳು. ಹಿಂದಿನಿಂದ ನಾಲ್ಕು ಜನರೊಂದಿಗೆ ಸಹಾಯಕನಾಗಿ ಬರುವ ಬೆಳ್ತನ ನೇತೃತ್ವದಲ್ಲಿ - ಕೈಕಾಲುಗಳನ್ನು ಕಟ್ಟಿ ಜೋತಾಡಿಸಲ್ಪಟ್ಟ, ಕವಲು ಕವಲಾಗಿ ಬಾಗಿದ ನೀಳ ಕೊಂಬಿನ ಅಂದದ ಜಿಂಕೆಯನ್ನು ಕಂಡ ದೊರೆಗಳು ಅಜ್ಜಯ್ಯನವರ ಮುಖ ನೋಡಿ, 'ಚಿಂತಿಲ್ಲ; ನೀವು ಕುಶಲ ಈಡುಗಾರರಾಗಿರುವುದು ನಿಶ್ಚಯ' ಎಂಬಂಥ ಮೆಚ್ಚಿನ ಮುಖಭಾಗವನ್ನು ಪ್ರಕಟಿಸಿದರು. ಮೃಗವನ್ನು ಹೊತ್ತು ತಂದವರು ದೊರೆಗಳ ಮುಂದಿಳುಹಿದಾಗ ಆ ಮೊದಲೇ ತಂದ ಹಂದಿಯನ್ನು ಪಳ್ಳಿಗದ್ದೆಗೆ ಹೊರಲು ಆಜ್ಞಾಪಿಸಿದರು. ಪ್ರಯಾಸದಿಂದ, ಕೊರಕಲು ದಾರಿಯಲ್ಲಿ ಮುನ್ನಡೆಯಬೇಕಾಗಿದ್ದರೂ ಬೇಟೆಯ ಉತ್ಸಾಹಿಗಳು ಮಾಂಸದಾಸೆಯ ಉಲ್ಲಾಸದಿಂದ ಆ ಕಷ್ಟದ ಹೊರೆಯನ್ನೂ ಹೊತ್ತು ತಂದು ಪಳ್ಳಿಗದ್ದೆಯ ಪಲ್ಕೆಯಲ್ಲಿ ಮೂಡುಪಡುವಾಗಿಟ್ಟರು. ಜಿಂಕೆಯನ್ನು ತರಲು

ಪುನಃ ಹೊರಟುದಾಯಿತು. ಹಸನ್ಮುಖನಾಗಿ ಕೋವಿಯನ್ನು ಹೆಗಲಿಗೇರಿಸಿ ಕೊಂಡು ಬರುವ ದೊಳ್ಳ ಪೂಜಾರಿಯನ್ನು ವಿಚಾರಿಸಿದಾಗ ಆ ಹಂದಿ ಹದಿನಾರು ಜನರು ಹೊರುವ ಗಾತ್ರದ್ದೆಂದು ತಿಳಿಸಿದ. 'ಇಂದು ಅಮವಾಸ್ಯೆ ಯಾದುದರಿಂದ ಹಂದಿಯ ಮೈಮೇಲಿನ ಭೂತವು ಆವಾರ ತೆಗೆದುಕೊಳ್ಳಲು ಗುಡಿಯಲ್ಲಿ ನಿಂತಿದ್ದರಿಂವಲೇ ಮೊದಲ ಈಡಿಗೇ ಸೋತಿತೆಂದೂ, ಬಹು ತ್ರಾಣವುಳ್ಳದ್ದಾದುದರಿಂದ ಸ್ವಲ್ಪ ದೂರ ಪೆಟ್ಟಾದ ನಂತರವೂ ಹೋದು ದೆಂದೂ' ಸಾಹಸ, ಸಂತೋಷಗಳ ಸಮ್ಮಿಳನದ ನಗುಸೂಸಿ ನುಡಿದ. ಬೇಟೆಗೆ ಬಲಿಯಾದ ಮೂರು ಹಂದಿಗಳು, ಜಿಂಕೆ, ಬರಿಂಕಗಳನ್ನು ಕುತೂಹಲದ ದೃಷ್ಟಿಯಿಂದ ಅತಿಥಿಗಳೆಲ್ಲ ಆನಂದಭರಿತರಾಗಿ ಗಮನಿಸು ತ್ತಿದ್ದಾರೆ. ಆಗಿರುವ ಭರ್ಜರಿ ಬೇಟೆಯ ಕಾರಣದಿಂದ ಬೀಗಿ ಬೇಟೆಗಾರರೂ, ಸೋವತರೂ ಎಲೆಯಡಿಕೆ ಮೆಲ್ಲುವ ಸಂಭ್ರಮದಲ್ಲಿದ್ದಾರೆ. ಅತಿಥಿಗಳು ಮುಂದಿನ ಕಾಡು ಸೋವ ಸಿದ್ಧತೆ ಮಾಡುತ್ತಿದ್ದಾರೆ.

ಇದ್ದಕ್ಕಿದ್ದಂತೆ, ನಾಯಿಗಳು 'ವೌ, ವೌ' ಎಂದು ಎದ್ದೋಡತೊಡ ಗಿದವು. ಬಿಲ್ಲಿನಿಂದ ಒಗೆದ ಅಂಬಿನಂತೆ ಕಾಡುಮೇಕೆಯೊಂದು ದೊರೆಗಳೂ ಅಜ್ಜಯ್ಯನವರೂ ಕುಳಿತಲ್ಲಿಗೆ ಎದುರಾಗಿ ಹತ್ತಾರು ಮಾರು ನೆಗೆತವನ್ನು ಒಮ್ಮೆಲೇ ನೆಗೆಯಿತು! ಪುಟಿದು ಹಾರುವ ಕಾಲ್ಚೆಂಡಿನ ನೆಗೆತ ಆ ಜಿಂಕೆಯದು. ದೊಳ್ಳ ಪೂಜಾರಿಯು ತಂದುಕೊಟ್ಟ ತಮ್ಮ ಕೋವಿಯನ್ನು ಎದೆಗೇರಿಸುತ್ತಾ ಅಜ್ಜಯ್ಯನವರು ಒಡನೆ ದೊರೆಗಳನ್ನುದ್ದೇಶಿಸಿ, "ದೊರೆಗಳೇ ಅದೋ ಕಾಡು ಮೇಕೆ, ಹೊಡೆಯಿರಿ" ಎಂದರು. ದೊರೆಗಳು ಗುರಿ ನೋಡುತ್ತಿದ್ದಾರೆ. ಅಜ್ಜಯ್ಯನವರೂ ಸೆಟೆದು ನಿಂತು ಕೋವಿಯನ್ನು ಎದೆಗಾನಿಸಿ ಶಿಸ್ತು ನೋಡುವುದರಲ್ಲಿದ್ದರು. ದೊರೆಗಳೆಂದರು, "Sorry, that's out of reach!" ದೊರೆಗಳ ಬಾಯಿಯಿಂದ ಈ ನುಡಿಗಳು ಹೊರಡುತ್ತಿದ್ದಂತೆ ಅಜ್ಜಯ್ಯನವರ ಕೋವಿಯು ಸದ್ದುಮಾಡಿ ಹೊಗೆಯುಗುಳಿತು! ಕಲೆಕ್ಟರ ರೆಂದರು- "ಒಂದು ಈಡು ಹಾಳಾಯಿತು !" ಅಜ್ಜಯ್ಯನವರು ಹೆಮ್ಮೆಯ ದನಿ ಯಲ್ಲಿ "ದೊರೆಗಳೇ ನಮ್ಮ ಹೀಗೆ - ಹೀಗೆ ಮಾಡೋ ಕೋವಿಯ ಈಡು ಎಂದೂ ಹುಸಿಯಾಗಿ ಹೋಗಲಿಕ್ಕಿಲ್ಲ" ಎಂದೇಬಿಟ್ಟರು. ಉತ್ತರವಾಗಿ ದೊರೆಗಳು "Is it so? we shall see" ಎಂದವರೇ 'ಹೋಗಿ

 

ನೋಡಿರೆಂದು' ಬಳಿಯಲ್ಲಿದ್ದ ಆಳುಗಳಿಗೆ ಆಜ್ಞೆಮಾಡಿದರು. ಧನಿ, ದೊರೆಗಳೊಳಗಿನ ಪಂಥವಲ್ಲವೆ? ನೋಡಿಯೇ ಬಿಡಬೇಕೆಂಬ ಉತ್ಸುಕತೆಯಿಂದ ಓಡಿದ ಕುಂಞಿಮೋನು, ಬೆಳ್ತರಿಗೆ ಅಜ್ಜಯ್ಯನವರೆಂದರು– "ನೋಡಿ, ಆ ಬೀಟೆಯ ಮರದ ಹಿಂದು, ಮುಂದು ಅದು ಬಿದ್ದಿರಬೇಕು. ಅಲ್ಲಿ ಸಿಗಲಿಲ್ಲವಾದರೆ ಅದು ಓಡಿರಲೂ ಸಾಕು. ಹೆಚ್ಚು ಹುಡುಕಬೇಕಾಗಿಲ್ಲ" ಎಂದು.

ಓಡಿದ ಕುಂಞಿಮೋನುವಿನ ಕಿರುಚಾಟದ– 'ಧನೀ, ಈಡೆ ಪೆಡಕ್ಕ್ನ್ನ್ಸ್, ಬಿಸ್ಮಿಕೂಟ್ಟ್ನ್ನೇ' (ಧನೀ ಇಲ್ಲಿ ಹೊರಳಾಡುತ್ತಿದೆ; ಚೂರಿ ಹಾಕಲೆ?) ಎಂಬ ಧ್ವನಿಯನ್ನು ಕೇಳಿ ಅಧೈರ್ಯಸಿದ ದೊರೆಗಳು "ಹುರ್ರಾ, ಹುರ್ರಾ" ಎಂದು ಎದ್ದವರೇ ಅಜ್ಜಯ್ಯನವರನ್ನು ಬಿಗಿದಪ್ಪಿ ಆಲಿಂಗಿಸಿದರು! ಅಜ್ಜಯ್ಯನವರಿಗಾದ ಗಲಿಬಿಲಿ ಅವರ ಮುಖದಲ್ಲಿ ಸ್ಪಷ್ಟವಾಗಿ ಗೋಚರಿಸುತ್ತಿತ್ತು. ಕುಂಞಿಮೋನು ಬ್ಯಾರಿಯ ಬಿಸ್ಮಿಗೆ ಬಲಿಯಾದ ಮೇಕೆಯ ಕತ್ತಿನಿಂದ ರಕ್ತ ಸುರಿಯುತ್ತಿದೆ; ಬೆಳ್ತನೂ ಕುಂಞಿಮೋನುವೂ ಅದರ ಕೈ ಕಾಲುಗಳನ್ನು ಹಿಡಿದುಕೊಂಡು ಜೋತಾಡಿಸಿಕೊಂಡು ಬರುತ್ತಿದ್ದಾರೆ. ಅದರ ಕೋರೆಯು ಗೀರಿ ಗಾಯವಾಗದಂತೆ ತಮ್ಮ ಕಾಲುಗಳನ್ನು ದೂರ ಸರಿಸಿಕೊಂಡು ನಡೆದುಬರುತ್ತಿದ್ದ ಅವರನ್ನು ನೋಡುವುದು ಕಣ್ಣಿಗೆ ಹಬ್ಬವೆನಿಸಿತ್ತು. ಅಜ್ಜಯ್ಯನವರನ್ನು ಅಪ್ಪುಗೆಯ ಬಂಧನದಿಂದ ಮುಕ್ತಗೊಳಿಸಿದ ದೊರೆಗಳು ತಮ್ಮ ಜೋಡುನಳಿಗೆಯ ಕೋವಿಯನ್ನು ಅಜ್ಜನವರ ಕೈಗಿತ್ತು "ನಿಮ್ಮ ಈಡುಗಾರಿಕೆಗೆ ಇದು ಮೆಚ್ಚು – ಪರವಾನಿಗೆಯೊಂದಿಗೆ! ನಿಮ್ಮಂಥ ಈಡುಗಾರರನ್ನು ನಾನು ಕಂಡಿಲ್ಲ. Wish you every success" ಎಂದರು. ಅಷ್ಟಲ್ಲದೆ ಅಲ್ಲಿ ಸೇರಿದ್ದವರಲ್ಲಿ ಕಳವು, ಕೊಲೆಯ ಆಪಾದನೆಗೆ, ಒಳಗಾಗದವರು ಪಟೇಲರಿಂದ ಅರ್ಜಿ ಬರೆಯಿಸಿ ಕೊಟ್ಟರೆ ತೋಟೆಕೋವಿ, ತುಂಬಿಸುವ ಕೋವಿಗಳಲ್ಲಿ ಯಾರಿಗೆ ಯಾವುದು ಬೇಕೋ ಅದನ್ನು ಹೊಂದಲು ಅವಕಾಶವೀಯುವುದಾಗಿ ಘೋಷಿಸಿದರು! ಈ ನುಡಿಗಳನ್ನು ಆಲಿಸಿದವರಿಗಾದ ಆನಂದ ಅಷ್ಟಿಷ್ಟಲ್ಲ.

ಅಜ್ಜಯ್ಯನವರೆಂದರು "ದೊರೆಗಳ ಔದಾರ್ಯಕ್ಕೆ ನಾವು ಕೃತಜ್ಞರು. ಇನ್ನು ಇಂದಿನ ಬೇಟೆಯನ್ನು ನಿಲ್ಲಿಸಬಹುದೆಂದು ತೋರುತ್ತದೆ. ಈಗಾಗಲೇ ಭರ್ಜರಿ ಬೇಟೆಯಾಗಿದೆ. ಕಾಡಿನ ಭೂತಕ್ಕೆ ಬಡಿಸುವ ಬಹುಮುಖ್ಯ ಕೆಲಸ

ಈಗ ನಡೆಯಬೇಕು. ಅದನ್ನು ನೆರವೇರಿಸಿಯೆ ಮುಂದಿನ ಕೆಲಸಗಳಿಗೆ ತೊಡಗುವುದು ನಮ್ಮ ಸಂಪ್ರದಾಯ. ಅದಕ್ಕೆ ವ್ಯತಿರಿಕ್ತವಾಗಿ ನಡೆದರೆ ಕಾಡಿನ ದೈವಗಳ ಮುನಿಸಿಗೆ ಈಡಾಗಬೇಕಾದೀತು" ಎಂದು. ದೊರೆಗಳು ಈ ಮಾತನ್ನು ಕೇಳಿ "ಸಿಲ್ಲೀ" ಎಂದದ್ದು ನಮ್ಮವರಿಗೆ ಅರ್ಥವಾಗಲಿಲ್ಲ. ಬೇಟೆಗೆ ಬಂದವರ ಬಹುಮತವು ಕಾಡಿನ ಭೂತಕ್ಕೆ ಬಡಿಸುವುದೇ ಆಗಿದ್ದುದರಿಂದ ದೊರೆಗಳೂ ಸಮ್ಮತಿಸಿದರು. ಸತ್ತ ಮೃಗಗಳನ್ನು ಒತ್ತಟ್ಟಿಗೆ ತೆಂಕು ಬಡಗು ಮುಖಮಾಡಿ ನಿಯಮದಂತೆ ಇರಿಸಲಾಯಿತು. ಬೈನೆ ಮರದ ಸೊಪ್ಪನ್ನು ಹರಡಿ ಅದರ ಮೇಲೆ ವಾಸನೆ ರುಚಿ ಇಲ್ಲದ ಮರದ ದಿಮ್ಮಿಗಳನ್ನು ಮಾಂಸ ಅಜಕ್ಕಳ ಮಾಡಲು ಇರಿಸಿದರು. ಕಾಡಿನ ದೈವಗಳನ್ನು ಜೋಂಟ್ರ ದೊಳ್ಳಪೂಜಾರಿಯು ಪ್ರಾರ್ಥಿಸಿಕೊಂಡು, ಮೊದಲ ಅಜಕ್ಕಳಕ್ಕೆ ದೊರೆಗಳು ಹೊಡೆದ ಹಂದಿಯನ್ನು ಆಯ್ದು, ಸಜ್ಜಾಗಿರಿಸಿದ ಬೈನೆ ಸೊಪ್ಪನ್ನು ಹರಡಿದ ಹುಲ್ಲುಗಾವಲಿನಲ್ಲಿ ತಂದಿಟ್ಟರು. ಸಂಪ್ರದಾಯದಂತೆ, ದೊಳ್ಳ ಪೂಜಾರಿಯು ಪ್ರಾಣಿಯ ಕತ್ತಿನೆಡೆ ತನ್ನ ಕಿನ್ನಿ ಕತ್ತಿಯನ್ನು ಇಟ್ಟು ಒತ್ತಿ "ಮುಂದುವರಿಯಲಿ ಅಜಕ್ಕಳ" ಎಂದು ಹೇಳಿದೊಡನೆಯೇ ಇದಕ್ಕಾಗಿ ಸಜ್ಜಾಗಿ ನಿಂತಿದ್ದ ಬೆಳ್ತನು ತನ್ನ ನಾರೆಕತ್ತಿಯನ್ನು ತೆಗೆದು ಅದನ್ನು ಅಂಗೈಯಲ್ಲೊಮ್ಮೆ ಮಸೆದುಕೊಂಡು ಹಂದಿಯ ಹಿಂದಿನ ತೊಡೆಗಳನ್ನು ಸೀಳುವಾಗ ನುರಿತ ಶಸ್ತ್ರವೈದ್ಯನ ಕೈಯ ಚಾಕಚಕ್ಯ ನೆನಪಿಗೆ ಬರುವಂತಿತ್ತು. ಅಜಕ್ಕಳದಲ್ಲಿ ನುರಿತವನಾದುದರಿಂದ ಸರಸರವೆಂದು ಕೊಯ್ಯುತ್ತಾ ಹೋದ ಆವನ ಕತ್ತಿಗೆ ಎಲ್ಲಿಯೂ ಹಂದಿಯ ಎಲುಬು ತಾಗಲೇ ಇಲ್ಲ. ಇವನ ಕೈಚಳಕಕ್ಕೆ ಪಳಗಿದ ಹಿಡಿತಕ್ಕೆ ಸಿಲುಕಿದ ಕತ್ತಿ ಹಂದಿಯ ಗಂಟು ಗಂಟುಗಳಲ್ಲಿ ಹರಿದು ನಿಂತು, ಒಮ್ಮೆ ಅತ್ತಿತ್ತ ತಿರುಗಿದಾಗ, ತನ್ನಿಂದ ತಾನಾಗಿಯೇ ಹಂದಿಯ ಮಾಂಸ ಬಿಚ್ಚಿಕೊಳ್ಳುತ್ತಿತ್ತು. ಒಮ್ಮೊಮ್ಮೆ ಟಕ್, ಟಕ್ ಎಂಬ ಶಬ್ದ ಮಾತ್ರ ಕೇಳಿಸುತ್ತಿತ್ತು. ಬಲದ ತೊಡೆಯನ್ನು ಕಿತ್ತು ಒಂದು ಬದಿಗಿರಿಸಿದ ಬೆಳ್ತ ಎಡತೊಡೆ, ಬಲ ಹಾಗೂ ಎಡ ಕೈಕಾಲನ್ನು ಒಂದು ರಾಶಿ ಮಾಡಿದನು. ಉಳಿದ ರುಂಡದೊಂದಿಗಿನ ಮುಂಡವನ್ನು ಅಂಗಾತ ಮಲಗಿಸಿ ಹಂದಿಯ ಕಿವಿಯನ್ನೊಮ್ಮೆ ಅದರ ಕುತ್ತಿಗೆಗೆ ಎಳೆದು ಮುಟ್ಟಿಸಿ, ಗುರುತು ಸರಿಯಾಗಿದೆಯೆಂದು ನಿಶ್ಚಯಿಸಿ ಕುತ್ತಿಗೆಯನ್ನು ಒತ್ತಿ ರುಂಡ ಮುಂಡಗಳನ್ನು

ಬೇರ್ಪಡಿಸಿದ. ಅವನ ಶಕ್ತಿ, ಕುಶಲತೆಗಳನ್ನು ದೊರೆಗಳೂ, ಅತಿಥಿಗಳೂ ಬಿಟ್ಟ ಕಣ್ಣನ್ನು ಮುಚ್ಚದೆ ನೋಡುತ್ತಿದ್ದರು! ರುಂಡವನ್ನು ಬಲದ ತೊಡೆಯ ಪಾಲಿಗೆ ಇರಿಸಿದ ಬೆಳ್ತನು ಕುತ್ತಿಗೆಯಿಂದ ಬಾಲದ ತನಕ ಹಂದಿಯ ಬೆನ್ನೆಲುಬಿನ ಕೆಳಗೆ ಎರಡಂಗುಲ ಬಲಕ್ಕೆ ಕರಕರವೆಂದು ನೀಳಕ್ಕೆ ತನ್ನ ಸೊಂಟದಿಂದ ತೆಗೆದ ಮೇಸೆಕತ್ತಿಯಿಂದ ಎಳೆದನು. ಆಗ ಅಂಗೈ ದಪ್ಪದ ಹಂದಿಯ ಸೊಂಟಗೆಯು ಬಿಳಿದಾಗಿ ಬಿರಿದು ನಿಂತುದರ ಒಳಗಡೆ ಕೆಂಪಾದ ಮಾಂಸದ ಭಾಗವು ಕಾಣುತ್ತಿತ್ತು. ಅದೇ ರೀತಿ ಎಡಭಾಗಕ್ಕೂ ಉದ್ದಕ್ಕೆ ಕತ್ತಿ ಹಾಕಿ ಆ ನಾಲ್ಕಂಗುಲ ದಪ್ಪದ ಚರ್ಮದ ಕುತ್ತಿಗೆ ಭಾಗವನ್ನು ಬಿಡಿಸಿ ಎರಡು ಕೈಯಲ್ಲಿಯೂ ಅದರ ತುದಿಯನ್ನು ಮೇಲೆತ್ತಿ ಎಳೆದನು. ಆಗ ಅದು ಸರ್ರೆಂದು ಸಲೀಸಾಗಿ ಬರುತ್ತಿರುವುದನ್ನು ಅತಿಥಿಗಳು ನೋಡುತ್ತಲೇ ಇದ್ದಾರೆ. ಇದೇ ರೀತಿಯಲ್ಲಿ ನಾಲ್ಕಂಗುಲ ಅಗಲ, ಶರೀರದುದ್ದದ ಸೊಂಟಗೆ ಚರ್ಮವನ್ನು ಸುಲಿದನು! ಅನಂತರ ಹಂದಿಯ ಶರೀರವನ್ನು ಮೇಲ್ಮೊಗ ವಾಗಿ ಮಾಡಿ ಇಬ್ಬರು ಅತ್ತಿತ್ತ ಆಧರಿಸಿ ಹಿಡಿದರು. ಆಗ ಬೆಳ್ತನು ಹಂದಿಯ ಗಂಟಲಿಗೆ ಹಾಕಿದ ಚೂರಿಯಿಂದ, ಜವುಳಿ ಅಂಗಡಿಯಲ್ಲಿ ದಪ್ಪ ವಸ್ತ್ರವನ್ನು ಅಂಗಡಿಯವನು ಕತ್ತರಿಯಿಂದ ಕತ್ತರಿಸುವಂತೆ, ಒಂದೇ ಸೀಳಿಗೆ ಸೀಳಿ ಅದರ ಹೊಟ್ಟೆಯಲ್ಲಿನ ಕರುಳು ಕಿಂಚಿತ್ತೂ ಗಾಯಗೊಳ್ಳದಂತೆ ಕೊಯಿದ ರೀತಿ ಯನ್ನು ಕಂಡು ಅತಿಥಿಗಳು ಬೆಟ್ಟುಕಚ್ಚಿದರು! ಎಲ್ಲಿಯಾದರೂ ಕರುಳಿಗೆ ಪೆಟ್ಟಾಗಿ ಮಲ ಹೊರಗೆ ಬಂದರೆ ಮತ್ತೆ ಮಾಂಸವನ್ನು ತೊಳೆದು ಶುದ್ಧ ಗೊಳಿಸಲು ಒಂದು ಹಂದಿಯನ್ನು ಅಜಕ್ಕಳ ಮಾಡುವಷ್ಟೇ ಸಮಯ ಬೇಕು! ಪಕ್ಕೆಲುಬು ಬೆನ್ನೆಲುಬುಗಳನ್ನು ಎರಡೆರಡಾಗಿ ಕೊಯಿದು ಬೇರೆಯವರಿಗೆ ಅವನ್ನು ತುಂಡುತುಂಡಾಗಿ ಪ್ರತ್ಯೇಕಿಸಲು ಕೊಡಲಾಯಿತು. ನೀಳವಾಗಿರುವ ಬೆನ್ನು ಹುರಿಯನ್ನೊಮ್ಮೆ ಸರಿಯಾಗಿ ನೋಡಿ, ಅದನ್ನು ಸರಿಯಾಗಿ ಮೂರು ಭಾಗಗಳಲ್ಲಿ ಗುರ್ತಿಸಿದ ಬೆಳ್ತ ಬೆನ್ನೆಲುಬನ್ನು ಕಸಕ್ಕನೆ ತನ್ನ ನಾರೆಕತ್ತಿ ಯಿಂದ ತುಂಡು ಮಾಡಿದನು. ಬಲದ ತೊಡೆಯನ್ನು ತಲೆಯ ಪಾಲಿಗೆ ಸೇರಿಸಿ, ಕರುಳಿನಲ್ಲಿ ಅಡಗಿದ್ದ ಚರ್ಬಿಯನ್ನು ಬಿಡಿಸಿ ತೆಗೆದು ರಾಶಿಗೆ ಹಾಕಿದನು. ಒಳಗಿದ್ದ ಖಲಿಜ, ಕಲ್ಲುಗುಂಡು ಪುಪ್ಪುಸವನ್ನು ಮಾಂಸದ ರಾಶಿಗೆ ಇರಿಸಿದನು. ಅಷ್ಟು ಮಾಡಿ ಕೈಯನ್ನೊಮ್ಮೆ ಜಾಡಿಸಿ ಈ ಹಂದಿಯ

ಅಜಕ್ಕಳದ ತನ್ನ ಕೆಲಸವಾಯಿತೆಂದು ಸೂಚಿಸಿ ದೂರದಲ್ಲಿ ನಿಂತಿದ್ದ ಜೋಮುವನ್ನು ನೋಡಿದ. ಆಕೆ, ಬಂದವಳೇ, ಕರುಳಿನ ರಾಶಿಯ ಬದಿಯಲ್ಲಿ ಗುಡ್ಡೆಗುಡ್ಡೆಯಾಗಿ ಬಿದ್ದಿರುವ ರಕ್ತದ ಗಟ್ಟಿಯನ್ನು ವಸ್ತ್ರದಲ್ಲಿ ಗಂಟುಕಟ್ಟಿ ಬದಿಗಿಟ್ಟು, ಕರುಳನ್ನು ಎತ್ತಿಕೊಂಡು ಶುದ್ಧಮಾಡಲು ಬದಿಯ ಹೊಳೆಯತ್ತ ಹೋದಳು. ಹಾಗೆ ಕಟ್ಟರಿಸಿದ ರಕ್ತದ ಗಟ್ಟಿಯೂ, ಹಂದಿಯ ಕರುಳೂ ಬೆಳ್ತನಿಗೆ ಹಂದಿ ಮಾಂಸವನ್ನು ಅಜಕ್ಕಳ ಮಾಡಿದುದಕ್ಕೆ ದೊರೆವ ಪ್ರತಿಫಲ. ಬೆಳ್ತನು ಎಲೆಗೆ ಸುಣ್ಣ ಹಚ್ಚಿ ತೀಡುತ್ತಾ ಮುಂದಿನ ಅಜಕ್ಕಳಕ್ಕೆ ಸಜ್ಜಾದ.

ಅಜ್ಜಯ್ಯನವರು ಕಲೆಕ್ಟರರನ್ನು ಕುರಿತು "ದೊರೆಗಳೇ,ನೀವು ಮೊದಲು ಹೊಡೆದ ಹಂದಿಯ ದಾಯವನ್ನು ಕೈಗೊಳ್ಳಬೇಕು" ಎಂದರು. ಇದರ ಅರ್ಥವಾಗದ ದೊರೆಗಳು ತನ್ನವರತ್ತ ನೋಡಿದರು. ಆಗ ವಿಠಲ ಪೂಂಜರು, "ಮೊದಲು ಹಂದಿ ಹೊಡೆದವನ ಪಾಲನ್ನು ಸಂಪ್ರದಾಯ ಪ್ರಕಾರ ತೆಗೆದು ಕೊಳ್ಳಬೇಕೆಂದು ನಿಮ್ಮೊಡನೆ ಕೇಳಿಕೊಳ್ಳುವುದು" ಎಂದು ಸ್ಪಷ್ಟೀಕರಿಸಿದಾಗ "ಯಾವ ಪಾಲು?" ಎಂದು ಅವರು ಕೇಳಿದರು. "ಹಂದಿಯ ಬಲ ಭಾಗದ ಅಂಗಗಳೂ, ನಡುಬೆನ್ನ ಹುರಿಯೂ, ತಲೆಯೂ ನಿಮ್ಮ ಪಾಲಿಗೆ ಬರುತ್ತವಲ್ಲದೆ ಇನ್ನು ಇದರಲ್ಲಿ ಬೀಳುವ ಕೊಟ್ಟ ಎಂಬ ಪಾಲೂ, ಕೋವಿಯ ಪಾಲೂ ನಿಮಗಿದೆ" ಎಂದು ಉತ್ತರಿಸಿದರು. ದೊರೆಗಳು ಸ್ವಲ್ಪ ಅಸಮಾಧಾನ, ಅಚ್ಚರಿಯ ಮುಖ ಮುದ್ರೆಯಿಂದ "ಇಷ್ಟೆಲ್ಲವೂ ಹಂದಿ ಹೊಡೆದ ಒಬ್ಬನಿಗಾ ದರೆ ಕಾಡಿನಲ್ಲಿ ನಿರಾಯುಧರಾಗಿ ಕಲ್ಲು ಮುಳ್ಳುಗಳನ್ನು ತುಳಿದು ಬೇಟೆ ಯನ್ನು ಕೋವಿಯ ಬಳಿಗೆ ಓಡಿಸಿ ತಂದ ಸೋವತನಿಗೆ ಏನು ಉಳಿಯುತ್ತದೆ? ಇದು ತಪ್ಪು. ಹೀಗೆ ಮಾಡುವುದರಿಂದಲೇ ನಿಮ್ಮೊಂದಿಗೆ ಬಡವರಾರೂ ಬೇಟೆಗೆ ಬರುವುದಿಲ್ಲ. ಇದು ಹೀಗಾಗಬಾರದು. ನಾನು ನಿಮ್ಮ ಅತಿಥಿ. ನಿಮ್ಮ ಒಪ್ಪಿಗೆಯಿಂದ ಮಂಗಳೂರಿಗೆ ಕೊಂಡುಹೋಗಲು ಸಿರ್ಕಾದಲ್ಲಿ ಹಾಕಿ ಇಡಲು ಸ್ವಲ್ಪ ಮಾಂಸವನ್ನು ಮಾತ್ರ ತೆಗೆದುಕೊಳ್ಳುತ್ತೇನೆ. ನಿಮ್ಮೆಲ್ಲರ ಪ್ರಯತ್ನದಿಂದ ನಾನು ಗಳಿಸಿದ ಈ ಬೇಟೆಯ ಭಾರೀ ಪಾಲನ್ನು ನಾನೇ ತೆಗೆದುಕೊಳ್ಳುವುದಿಲ್ಲ. ಇದು ಎಲ್ಲರಿಗೂ ಸೇರಬೇಕು. ಎಲ್ಲವೂ ಹೀಗೆಯೇ ಆಗಬೇಕು" ಎಂದು ಖಚಿತವಾದ ಮಾತುಗಳನ್ನಾಡಿದರು. ಇದನ್ನು ಕೇಳಿದ

ಸೋವತರು ಒಮ್ಮೆ ಸಂತೋಷದಿಂದ ಮುಖವರಳಿಸಿ, ಅಂದಿನ ತನಕ ತಮಗೆ ಮೋಸ ಮಾಡುತ್ತಿದ್ದ ಗುರಿಕಾರರತ್ತ ಗೆಲುವಿನ ನೋಟವನ್ನು ಬೀರಿದರು.

ಬೋಂಟ್ರ ದೊಳ್ಳ ಪೂಜಾರಿಯು ಹಾಗೆಯೇ ಆಗಲೆಂದು ಸಮ್ಮತಿಸಿದರೂ, ರೀತಿಯಂತೆ ತಾವು ತಮ್ಮ ಪಾಲನ್ನು ಸ್ವೀಕರಿಸುವುದಾಗಿ ಹೇಳಬೇಕೆಂದು ವಿನಂತಿ ಮಾಡಿಕೊಂಡನು. ದೊರೆಗಳು ಎದ್ದು ಗಂಭೀರವಾಗಿ ದಾಯದ ರಾಶಿಯ ಬಳಿಗೆ ಹೋಗಿ ಅದು ತಮಗೆ ಬಂತೆಂಬಂತೆ ಹಂದಿಯ ತೊಡೆಯನ್ನು ಮುಟ್ಟಿದರು. ಈ ರೀತಿ, ಮೂರು ಹಂದಿಗಳ ಮಾಂಸದ ರಾಶಿಯ ದಾಯ ತೆಗೆಯುದುದರಿಂದ ಕಿರು ಗುಡ್ಡೆಯಾಗಿ ಕಾಣುತ್ತಿತ್ತು. ಜಿಂಕೆಯ ಮಾಂಸದ ರಾಶಿಯು ಇದರ ಒತ್ತಿಗಿದ್ದುದು ಕಾಣುತ್ತಲೇ ಇರಲಿಲ್ಲ. ಬರಿಂಕವು ಚೋಮುವಿನ ಕಾಲಬುಡದಲ್ಲಿ ಬಾಯಿ ತೆರೆದು ಬಿದ್ದಿತ್ತು. ನಾಯಿಗಳು ಅಲ್ಲಲ್ಲಿ, ನಾಲಗೆ ಚಾಚಿ, ನಿಂತುಕೊಂಡು ನೆಕ್ಕುವ ಆಸೆಯಿಂದ ಅಜಕ್ಕಳವು ತೆರವಾಗುವುದನ್ನೇ ಕಾಯುತ್ತಿದ್ದವು.

ಮೇಕೆಯನ್ನು ಹದಮಾಡಲು ಹೋದ ಕುಂಞಿಮೋನುವು ತಿರುಗಿ ಬಂದು ಈ ಗೋಜಲಿಗೆ ಸೇರಿದರೆ ಆ ಮಾಂಸವೂ 'ಹರಾಂ' ಆಗುವುದೋ ಎಂಬ ಭೀತಿಯಿಂದ ಅದನ್ನು ಹೊತ್ತುಕೊಂಡು ಇನ್ನು ಈ ದಿನ ಬೇರೆ ಬೇಟೆಯ ಏರ್ಪಾಡು ಇಲ್ಲವೆಂದರಿತಾಗ ನಡೆದು ಮನೆ ಸೇರಿದ. ಕಾಡುಮೇಕೆ ಆತನ ಪಾಲಿಗೆ ದಕ್ಕಿದುದಕ್ಕೆ ಯಾರೂ ಆಕ್ಷೇಪಿಸಲಾರರು. ಕೋಳಿಯಿರುವಾಗ ಕೊಕ್ಕರೆಯನ್ನು ಬಯಸುವವರಾರು? ಬೇಕಷ್ಟು ಕಾಡುಹಂದಿಯ ಮಾಂಸವಿರುವಾಗ ಆ ಚಿಕ್ಕ ಮೇಕೆ ಯಾರಿಗೆ ಬೇಕು? ಬೆಳ್ತನು ಬರಿಂಕವನ್ನು ನಮ್ಮ ಮನೆಗೆ ಮುಟ್ಟಿಸಿ ಅಜ್ಜಿ, ತಾಯಿಯವರಿಂದ ಇಲ್ಲಿ ಅವನ ಪಾಲಿಗೆ ಬಂದ ಮಾಂಸ, ಚರ್ಬಿ ಬೋಟೆಗೆ ಬೇಕಾದ ಪದಾರ್ಥದ ಸಂಬಾರವನ್ನು ಪುಸಲಾಯಿಸಿ ಪಡೆಯುವನೆಂದು ನಾನು ಅರಿತಿದ್ದೆ. ಮನೆಯಲ್ಲಿ ಹೆಂಗಸರು ಹೆಣ್ಣು ಹಂದಿಯ ಮಾಂಸವನ್ನು ತಿನ್ನುತ್ತಿರಲಿಲ್ಲ.

ಕಾಡಿನ ಭೂತಕ್ಕೆ ಅಗೆಲು ಹಾಕಲು ಮಾಡುವ, ಹಂದಿಯ ಮಾಂಸದ ಅಡುಗೆಗೆ ಬೇಕಾದ ಪಾತ್ರೆಯನ್ನು ನೆರೆಯ ಗೌಡರ ಮನೆಯಿಂದ ಕಾಡು ಹೊಡೆಯುವವರಲ್ಲೊಬ್ಬ ಹೊತ್ತು ತಂದನು. ಮೂರು ಕಲ್ಲುಗಳನ್ನು

ಆಯ್ದು, ಮೂಡು ಪಡು ಮೊಗವಾಗಿಟ್ಟು ಒಲೆಯನ್ನು ಸಿದ್ಧಗೊಳಿಸಿ ದ್ದಾಯಿತು. ಅದೇ ಮನೆಯಿಂದ ತಂದ ಒಂದು ಮುಟ್ಟಾಳೆಯಷ್ಟು ಮೆಣಸಿಗೆ ಹುಳಿಯನ್ನು ಸೇರಿಸಿ, ಬಳಿಯಲ್ಲಿ ಹರಿಯುತ್ತಿದ್ದ ಹೊಳೆಯಲ್ಲಿದ್ದ ನಯವಾದ ಗುಂಡುಕಲ್ಲೊಂದನ್ನು ಆಯ್ದು ಚಪ್ಪಟೆ, ಅಗಲದ ಕಲ್ಲೊಂದರಲ್ಲಿ ನಜ್ಜುಗುಜ್ಜಾಗುವಂತೆ ಜಜ್ಜಿ ಅರೆದ ಶಾಸ್ತ್ರವನ್ನು ಮಾಡಿ ಒಲೆ ಹೊತ್ತಿಸಿದರು. ಮಡಿಕೆಗೆ ಗೋರಿಗೋರಿ ಮಾಂಸವನ್ನು ತುಂಬಿಸಿ, ಆ ಸುಲಿದ ತೆಂಗಿನಕಾಯಿ ಗಾತ್ರದ ಮೆಣಸಿನ ಉಂಡೆಯಿಂದ ಸ್ವಲ್ಪ, ಸ್ವಲ್ಪವನ್ನು ಮಾಂಸದೊಂದಿಗೆ ಬೆರೆಸಿದುದನ್ನು ಕಂಡ ಪೂಂಜರೂ, ದೊರೆಗಳೂ – "ಸರಿಯಾಗಿ ಉಪ್ಪು, ಹುಳಿ, ಮೆಣಸು ಬೆರೆಯದ ಇದನ್ನು ತಿಂದವರು ಕಾರಲಿಕ್ಕಿಲ್ಲವೆ?" ಎಂದಾಗ ದೊಳ್ಳ ಪೂಜಾರಿ "ಅಡುಗೆಯಾಗಿ ಭೂತಕ್ಕೆ ಬಡಿಸಿಯಾಗಲಿ. ಭೂತವು ಸಂತೋಷವಾಗಿ ಇದನ್ನು ಕೈಕೊಂಡಿದ್ದರೆ ಮತ್ತೆ ಇದರ ರುಚಿ ನೋಡಿ. ನೀವು ಖಂಡಿತವಾಗಿಯೂ ಯಾವಾಗಲೂ ಭೂತಕ್ಕೆ ಅಗೆಲು ಹಾಕಿಯೇ ತೀರಬೇಕೆನ್ನುತ್ತೀರಿ, ನೋಡಿ" ಎಂದ. ಅತಿಥಿಗಳು 'ಅಯ್ಯೋ ಭ್ರಾಂತೇ' ಎಂಬಂತೆ ತಲೆಯಲ್ಲಾಡಿಸಿ ಮುಗುಳ್ನಕ್ಕರು.

ಕಾಡಿನ ಭೂತದ ಪೂಜಾರಿ ಚೆನ್ನಗೌಡನು ಆ ಮಣಗಟ್ಟಲೆ ಮಾಂಸಕ್ಕೆ ಬೇಕಾದ ಉಪ್ಪನ್ನು ಗೋರಿಗೋರಿ ಹಾಕಿ, ಒಂದು ಕೋಲಿನಿಂದ ಚೆನ್ನಾಗಿ ತಿರುವಿದನು. ಇಬ್ಬರು ಸೇರಿ ಆ ಪಾತ್ರೆಯನ್ನು ಉರಿಯುತ್ತಿದ್ದ ಒಲೆಯ ಮೇಲೆ ಎತ್ತಿ ಇರಿಸಿದರು. ಚೆನ್ನ ಗೌಡ ಉರಿಯುತ್ತಿದ್ದ ಕೊಳ್ಳಿಗಳನ್ನು ಮುಂದೂಡಿ, ತನ್ನ ಕೈಯನ್ನು ಜೊಗಸೆ ಮಾಡಿ, 'ಇದು ನೀರು' ಇದು ಇದಕ್ಕೆ ಹದವಾಗುವಷ್ಟು ಕೊತ್ತಂಬರಿ, ಜೀರಿಗೆ' ಎಂದು ಹಲವು ಸಂಬಾರ ಗಳ ಹೆಸರುಗಳನ್ನು ಹೇಳಿ ಮೂರು ಮೂರು ಜೊಗಸೆಯಂತೆ ಇಕ್ಕಿದ ನಟನೆ ಮಾಡಿದ್ದನ್ನು ಕಂಡ ಅತಿಥಿಗಳು ಅರ್ಥವಾಗದೆ ನಗುತ್ತಿದ್ದರು. ಮಾಂಸದ ಪಾತ್ರೆಯ ತಳದಿಂದ 'ಕೊಚ ಕೊಚ' ಎಂದು ಪದಾರ್ಥವು ಕುದಿ ಬರುವ ಸದ್ದು ಕೇಳುತ್ತಿದೆ. ಚೆನ್ನ ಗೌಡನು ತಳ ಹಿಡಿಯದಂತೆ ಸೌಟಿನಂತಹ ಕೋಲಿನಿಂದ ಮಗುಚುತ್ತಲೇ ಇದ್ದಾನೆ. ಗಂಟೆ ನಾಲ್ಕಾಗಿದೆ. ಮಧ್ಯಾಹ್ನದ ಊಟ, ಕಾಫಿ ಇಲ್ಲದೆ ಎಲ್ಲರಿಗೂ ಹೊಟ್ಟೆ ಚುರುಗುಟ್ಟುತ್ತಿದೆ. ಕೂಡಿದವರಲ್ಲಿ ಕೆಲವರು ನೆರೆಯ ಸುಂಕದಕಟ್ಟೆ ಪಟೇಲರ ತೋಟದಿಂದ

ಬಾಳೆಯೆಲೆ ತಂದು ಅಗೆಲು ಹಾಕಲು ತಯಾರು ಮಾಡುವಾಗ ಬೆಂದ ಪರಿಮಳದಿಂದಲೇ ಪಾತ್ರೆಯನ್ನು ಕೆಳಗಿಳಿಸಲು ಸಮಯವಾಯಿತೆಂದು ಈ ತೆರನಾದ ಅಡುಗೆಯಲ್ಲಿ ಪಳಗಿದ್ದ ಚೆನ್ನಗೌಡನು ಅರಿತನು. ಅವನು ಸೌಟನ್ನು ಒಮ್ಮೆ ಹಾಕಿ ತಿರುವಿ ಅದನ್ನು ಮೇಲೆತ್ತುವಾಗ ಅದರಲ್ಲಿ ಕಚಕಚನೆ ಕುದಿ ಬರುತ್ತಿದ್ದ ಸಾರನ್ನು ಕಂಡು, ಬರಿ ಮಾಂಸವನ್ನು ಒಲೆಗಿಟ್ಟು ಇಷ್ಟು ನೀರುಸಾರು ಹೇಗಾಯಿತು ಎಂದು ದೊರೆಗಳು ಅಚ್ಚರಿಪಟ್ಟರು. ನಾವು ನಂಬಿದ ಭೂತದ ಸತ್ಯಕ್ಕೆ ಇವರೆಲ್ಲ ಶರಣಾಗುವಂತಾಯಿತೆಂದು ನಮಗೆಲ್ಲ ಸಮಾಧಾನ. ಮಾಂಸದ ನೀರು, ಉಪ್ಪು ಸೇರಿ ಹದಪಾಕವಾಗಿದ್ದುದು ಆರಿದಾಗ ಮಾಂಸವು ಕಡಿಕಡಿಯಾಗಿ ದೊರೆಯುವುದೆಂದು ಅರಿತ ಹಳ್ಳಿಗರಿಗೆ ಇದೇನು ಹೊಸ ಅನುಭವವಾಗಿರಲಿಲ್ಲ. ದೊಳ್ಳ ಪೂಜಾರಿ ಮಾಂಸದ ಪಾತ್ರೆಯನ್ನು ಒಲೆಯಿಂದ ಕೆಳಗಿಳಿಸಿ ಹದಿನಾರು ಎಲೆಗಳನ್ನು ಶುದ್ಧಿಗೊಳಿಸಿ ಚಕ್ರಾಕಾರವಾಗಿ ಹಾಸಿದನು. ಅವುಗಳಿಗೆ ಮೂರು ಮೂರು ಸಟ್ಟುಗದಂತೆ ಗೋರಿ ಗೋರಿ ಬಡಿಸಿ ಉಳಿದ ಪದಾರ್ಥಕ್ಕೆ ಮುಚ್ಚಳವಿಟ್ಟು, ನಾಲ್ಕೈದು ಬೊಗಸೆಯಷ್ಟು ಕಿಸ್ಕಾರ ಹೂವನ್ನು ಆರಿಸಿ ತಂದ ಬೋಂಟ್ರನು ಪಟೇಲರಿಗಿತ್ತು ಎಲ್ಲರೂ ಎದ್ದು ನಿಂತು ಪ್ರಾರ್ಥನೆ ಮಾಡಬೇಕೆಂದು ಅರಿಕೆ ಮಾಡಿಕೊಂಡನು.

ಅಜ್ಜಯ್ಯನವರು ಸಜ್ಜಾಗಿ ಬಂದ ಅತಿಥಿಗಳ ಕೈಗೆ ಹೂವನ್ನು ಹಾಕಿ ದೊರೆಗಳೂ ಏಳಬೇಕೆಂದೂ ವಿನಂತಿಸಿದರು. ದೊಳ್ಳ ಪೂಜಾರಿಯು ಮಾಡುವ ಪ್ರಾರ್ಥನೆಯು ದೈವ ಒಪ್ಪುವಂಥದ್ದು. "ಹೊಡೆದ ಹಂದಿಯು ಮೊದಲೇ ಗಾಯಗೊಂಡದ್ದಾಗಿ ಕೊಳೆತಿರಲೂಬಹುದು. ಇಲ್ಲವೆ ಕತ್ತರಿಸಿದ ಮಾಂಸದಲ್ಲಿ ಕೊಳೆ ಇರಬಹುದು. ಹಾಕಿದ ಅಗೆಲಿನಲ್ಲಿ ತಪ್ಪಿರಬಹುದು. ಆದರೆ ನಾವಿದನ್ನು ಹೃತ್ಪೂರ್ವಕ ಭಯ, ಭಕ್ತಿಯಿಂದ ಬಡಿಸಿದ್ದೇವೆ. ಇದರಲ್ಲಿ ಬಂದ ತಪ್ಪುಗಳನ್ನು ಮನ್ನಿಸಿ, ಒಪ್ಪುಗಳನ್ನು ಸ್ವೀಕರಿಸಿ ಮುಂದಕ್ಕೆ ನಿನ್ನ ದಯೆಯ ಮದಿಪ್ಪನ್ನು ನಮಗಿತ್ತು ಯಾವೊಂದು ಸಿರ್ಕ್ - ಸಂಕಟವೂ ಕಾಡಿನಲ್ಲಿ ನಡೆಯದಂತೆ ನಮ್ಮನ್ನು ಕಾಪಾಡುವುದು ನಿನ್ನ ಮದಿಪ್ಪಿಗೆ ಸೇರಿದ್ದು" ಎಂದು ಕೈಯಲ್ಲಿದ್ದ ಹೂವನ್ನು ಅಗೆಲಿನತ್ತ ಎಸೆದು ಸಾಷ್ಟಾಂಗ ಎರಗಿದನು. ಇತರರೂ ತಮ್ಮ ಕೈಯಲ್ಲಿದ್ದ ಹೂವನ್ನು ಅಗೆಲಿನತ್ತ ಬೀರಿ

ಕೈ ಮುಗಿದು ಹಿಮ್ಮೊಗವಾಗಿ ನಿಂತರು. ಒಬ್ಬನು 'ಅದೋ, ನೋಡಿ ಆನೆಯೊಂದನ್ನು ನುಸಿಯು ಕಚ್ಚಿಕೊಂಡು ಹೋಗುತ್ತದೆ' ಎಂದು ಎಲ್ಲರ ಗಮನವನ್ನೂ ಬೇರೆಡೆಗೆ ಸೆಳೆದನು. ಇದು ಬಟ್ಟ ಬಯಲಿನಲ್ಲಿ ಅರಣ್ಯದ ದೈವಗಳು ಬಂದು ತಮಗಾಗಿ ಸಮರ್ಪಿಸಲಾಗಿದ್ದ ಆಹಾರವನ್ನು ನೆರೆದವರು ಕಾಣದಂತೆ ಸ್ವೀಕರಿಸಲೆಂದು ಮಾಡುವ ಉಪಾಯ! ದೊನ್ನೆಯಲ್ಲಿದ್ದ ನೀರನ್ನು ಅಗೆಲಿನತ್ತ ಚಿಮುಕಿಸಿ ಮೊದಲ ಎಲೆಯನ್ನು ಎಳೆದು ಪ್ರಥಮ ಈಡು ಹೊಡೆದ ಪಟೇಲರಿಗೆ 'ಅಗ್ರ ಸಮ್ಮಾನ'ವನ್ನು ಒಪ್ಪಿಸಲಾಯಿತು. ದೈನ್ಯ ದಿಂದ ಎರಡೂ ಕೈಗಳನ್ನು ನೀಡಿ ಅವರು ತೆಗೆದುಕೊಂಡ ನೋಟವು ಅವರೆಷ್ಟು ದೈವಭೀರು ಎಂಬುದನ್ನು ಸ್ಪಷ್ಟಗೊಳಿಸುತ್ತಿತ್ತು. ಎರಡನೆಯ ಪಾಲು ಕಲೆಕ್ಟರರಿಗೆ. ಅದನ್ನು ಅವರ ಬಳಿಯಲ್ಲಿ ಚೆನ್ನಗೌಡನು ತಂದಿರಿಸಿದನು. ಬಂದ ಅತಿಥಿಗಳಿಗೆ, ದೊಳ್ಳ ಪೂಜಾರಿಗೆ ಪಾಲು ಕೊಟ್ಟ ಬಳಿಕ ಅಲ್ಲಿ ಉಳಿದುದು ಎರಡೇ ಪಾಲು. ಇದಕ್ಕೆ ಹಾಕಿದ ಉಪ್ಪು, ಹುಳಿ, ಮೆಣಸು ಸಾಲದೆಂದೂ, ನೀರಿಲ್ಲದೆ ಸರಿಯಾಗಿ ಬೆಂದಿರಲಿಕ್ಕಿಲ್ಲವೆಂದೂ ಅಭಿಪ್ರಾಯ ವಲ್ಲಿದ್ದ ಅತಿಥಿಗಳು ಆ ಮಾಂಸದ ತುಂಡುಗಳನ್ನು ತಿನ್ನಲು ಹಿಂದು ಮುಂದು ನೋಡುತ್ತಿದ್ದರು. ಇದನ್ನು ಕಂಡ ಪಟೇಲರು, "ಖಾವಂದರು ಇದರ ರುಚಿ ನೋಡಬೇಕು" ಎಂದರು. ಕೂಡಿದವರೆಲ್ಲ ಕೈಗೆ ಸಿಕ್ಕ ತೇಗ, ಬಣ್ಪು ಮರದ ಎಲೆಗಳನ್ನು ಕಿಳ್ಳಿ, ಕಟ್ಟಿ ಹಿಡಿದುಕೊಂಡು, ಬಡಿಸುವ ಚೆನ್ನಗೌಡನ ಬಳಿಗೆ ತಾನು ಮುಂದು ತಾನು ಮುಂದೆಂಬಂತೆ ಮುಗಿ ಬೀಳುತ್ತಿದ್ದರು. ನಾನು ಬರಿಗೈಯಿಂದ ಬದಿಯಲ್ಲಿ ನಿಂತಿದ್ದುದನ್ನು ಗಮನಿಸಿದ ದೊರೆಗಳು ಒಂದೆಲೆಯನ್ನು ನನಗೆ ಕೊಡುವಂತೆ ನಿರ್ದೇಶಿಸಿದರು. ಅತಿಥಿಗಳು ತಿನ್ನು ವುದೋ ಬೇಡವೋ ಎಂದು ಮೀನ ಮೇಷ ಮಾಡುವುದನ್ನು ಕಂಡ ಹಿರಿಯರೂ ಅವರೆಡೆಗೇ ನೋಡುತ್ತಿದ್ದರು. ಸೋವತರು ತಮ್ಮ ಪಾಲಿಗೆ ಬಂದುದನ್ನು ಕಬಳಿಸುವುದರಲ್ಲೇ ತಲ್ಲೀನರಾಗಿದ್ದಾರೆ. ನನ್ನ ಕೈಗೆ ಎಲೆ ಬಂದುದೇ ತಡ, ನಾನೊಂದು ತುಂಡು ಬಾಯಿಗೆಸೆದೆ. ಹದ ಉಪ್ಪು, ಹುಳಿ; ಖಾರ ಕಡಿಮೆ ಯಾಗಿ ಸರಿಯಾಗಿ ಬೆಂದಿದೆ! ಹಸಿವೆಯ ಪ್ರಭಾವದಿಂದಲೋ ಕಾಡ ಭೂತ ಗಳ ಕಾರಣಿಕದಿಂದಲೋ, ಚೆನ್ನಗೌಡನ ಕೈಗುಣದಿಂದಲೋ ಅಷ್ಟು ರುಚಿ ಯೆನಿಸಿ ಒಂದು ತುಂಡನ್ನು ಮುಗಿಸಿದ ಅನಂತರ ಮತ್ತೊಂದು ತುಂಡಿಗೆ

ಕೈ ತನ್ನಿಂತಾನೇ ಮುಂದುವರಿಯುತ್ತಿತ್ತು. ಸಂಶಯಚಿತ್ತರಾಗಿದ್ದ ದೊರೆಗಳೂ ನಮ್ಮನ್ನೆ ಅನುಸರಿಸಿ ಬಾಯಿ ಚಪ್ಪರಿಸಿ ಎಲೆ ಖಾಲಿ ಮಾಡತೊಡಗಿದರು. 'ಹಸಿವೆಯಾದರೆ ಹುರಿ ಹಗ್ಗದ ಪದಾರ್ಥ' ಎಂಬ ಗಾದೆಗೆ ಅನುಗುಣವಾಗಿ ಎಲ್ಲರ ವರ್ತನೆಯಿತ್ತು! ಎಲೆಗಳು ಬರಿದಾಗಿ ತೃಪ್ತಿಯ ತೇಗನ್ನು ತೇಗಿದೆವು. ದೈವ ದೇವರಿಗೆ ತೃಪ್ತಿಯಾಯಿತೆಂದು ಹಿರಿಯರು ನಿರಾಳವಾಗಿ ಉಸಿರೆಳೆದರು. ಸೋವತರು ಮಾಂಸವನ್ನು ಕೊಟ್ಟ ಕಟ್ಟಿ ಒಂದೊಂದು ಪಾಲನ್ನು ಕಟ್ಟಿ ಇಟ್ಟಿದ್ದರು. ಕೋವಿಗೆ ಒಂದು ಕೊಟ್ಟ, ನಾಯಿಗೊಂದು, ಈಡುಗಾರನಿಗೊಂದು, ಕಾಡು ಹೊಡೆಯುವವರಿಗೆ ತಲೆಗೊಂದರಂತೆ ಎಂಬ ತೆರದಲ್ಲಿ ಪಾಲು ಸಿದ್ಧಮಾಡಿ ಒಂದೆಡೆ ಒಟ್ಟಿದ್ದರು. ನಾಯಿಗಳು ಬರಿದಾದ ಅಜಕ್ಕಳವನ್ನು ನುಗ್ಗಿ ರಕ್ತವನ್ನು ನೆಕ್ಕುತ್ತಿವೆ. ಎಲುಬು ಸಿಕ್ಕಿದವುಗಳು ಕಟ ಕಟ ಎಂದು ಕಡಿಯುತ್ತಿವೆ. ಅವರವರ ಪಾಲನ್ನು ತೆಗೆದುಕೊಳ್ಳಲು ಬಂದ ಬೇಟೆಗಾರರು ಮುಗಿಬೀಳುತ್ತಿದ್ದಾರೆ. ದೊರೆಗಳೂ, ಅತಿಥಿಗಳೂ ಈ ನೋಟದಿಂದ ಆನಂದದ ನಗು ಬೀರುತ್ತಿದ್ದಾರೆ.

ದೊರೆಗಳೆಂದರು– "ಕತ್ತಲಾಗುತ್ತಾ ಬರುತ್ತಿದೆ. ನಾವಿನ್ನು ಬಂಗಲೆಗೆ ಹೋಗಿ ನಾಳೆಯ ಬೇಟೆಯ ವಿಚಾರವನ್ನು ಅಲ್ಲಿ ವಿಮರ್ಶಿಸೋಣ". ಒಡನೆ ಹಿರಿಯರೆಲ್ಲರೂ ಹೊರಡಲು ಸಿದ್ಧರಾದರು. ಊರವರು ಮಾತ್ರ ಕೊಟ್ಟ ಹಂಚಲು ಅಲ್ಲಿ ಉಳಿದರು. ಎಲ್ಲರೂ ಅವರವರ ಕೋವಿಗಳನ್ನು ಕೈಗೆತ್ತಿಕೊಂಡರು. ಆಗ ದೊರೆಗಳು ತಮ್ಮ ಜೋಡುನಳಿಗೆಯ ಕೋವಿಯನ್ನು ಎತ್ತಿ, "ಕೊರಗಪ್ಪ ರೈಗಳೇ ಇತ್ತ ಬನ್ನಿ. ನನ್ನ ಕಾಣಿಕೆಯನ್ನು ಸ್ವೀಕರಿಸುವುದಿಲ್ಲವೇನು? ಇದು ಇಂದಿನಿಂದಲೇ ನಿಮ್ಮದು" ಎಂದು ತೋಟೆಯ ಬೆಲ್ಟನ್ನು ಅವರ ಕತ್ತಿಗೆ ಹಾಕಿ ಕೋವಿಯನ್ನು ಕೊಟ್ಟು ಕೈಕುಲುಕಿದ ಆ ದೃಶ್ಯವು ಇಂದಿಗೂ ನನ್ನ ಕಣ್ಣ ಮುಂದೆ ನಿಲ್ಲುತ್ತದೆ. ನಮ್ಮವರೆಲ್ಲರ ಕೈಯಲ್ಲೂ ಕೋವಿಯಿದೆ. ಅಜ್ಜಯ್ಯನವರ ಆಳುಗಾತ್ರದ ಕೋವಿಯನ್ನು ಕುಂಞಿ ಮೋನುವಿನ ಕೈಯಲ್ಲಿ ಕೊಡೋಣವೆಂದು ನೋಡಿದರೆ ಆತ ನಾಪತ್ತೆ! ಅತ್ತಿತ್ತ ನೋಡಿದ ಅಜ್ಜಯ್ಯನವರು ಆಗಷ್ಟೇ ಸಿಕ್ಕಿದ್ದ ಹಗುರವಾದ ಜೋಡು ನಳಿಗೆಯ ಕೋವಿಯನ್ನು ನನ್ನ ಕೈಗಿತ್ತು 'ಜಾಗ್ರತೆ, ಕಲ್ಲು ತಡವಿ ಬಿದ್ದು ಬಿಟ್ಟೀಯಾ, ಜೋಕೆ' ಎಂದು ಎಚ್ಚರಿಸಿದರು. ಆ ಮುಹೂರ್ತವು

ಅದೆಂತಹಪದೊ! ಅಜ್ಜಯ್ಯನವರು ತಮ್ಮ ಬೇಟೆಗಾರಿಕೆಯ ಜಾಣ್ಮೆಯನ್ನು ನನಗೆ ಧಾರೆಯೆರೆದು ಕೊಟ್ಟರೆ? ಆ ಕ್ಷಣದಲ್ಲೇ ನನಗೂ ಅವರಂತೆ ನುರಿತ ಬೇಟೆಗಾರ ಬಂಟನಾಗಬೇಕೆಂಬ ಆಸೆ ಮೂಡಿತು. ಅದು ಅಂತರಾಳದಲ್ಲಿ ಬೇರೂರಿ, ಚಿಗುರಿಟ್ಟು ಬಲಿತು ಹೆಮ್ಮರವಾದುದು ಅಚ್ಚರಿಯಲ್ಲ.

ಅಜ್ಜಯ್ಯನವರಿಗೆ ದೊರಕಿದ ಸನ್ಮಾನ, ಬಹುಮಾನದಿಂದ ಪ್ರಭಾವಿತ ನಾದ ನನ್ನಲ್ಲಿ ಬೇಟೆಗಾರನಾಗಬೇಕೆಂಬ ಹಂಬಲವುದಿಸಿ ಬೆಳೆಯುತ್ತಲೇ ನಾನು ಅಜ್ಜಯ್ಯನವರನ್ನೂ ಮೀರಿಸಿದ ಬೇಟೆಗಾರನಾಗುವ ಕನಸು ಕಾಣುತ್ತ ಮರುದಿನದಿಂದಲೇ ಅಭ್ಯಾಸಕ್ಕೆ ತೊಡಗುವ ಧ್ಯಾನದಿಂದ ಇಡೀ ದಿನ ಊಟ ವಿಲ್ಲದ್ದೂ ಮರೆತೆ. ನನಗೆ ತಕ್ಕುದಾದ ಕೋವಿಯೆಲ್ಲಿದೆ? ಮದ್ದುಗುಂಡು ಗಳೆಲ್ಲಿಂದ? ಈ ಪ್ರಶ್ನೆಗಳು ಭೂತಾಕಾರವಾಗಿ ಮನದೆದುರು ನಿಲ್ಲುತ್ತವೆ. ಗಾಡಿಯಲ್ಲಿ ಕುಳಿತಿದ್ದ ಹಿರಿಯರು ಗಾಡಿ ಸಾಗುತ್ತಿದ್ದಂತೆ, ದೊರೆಗಳ ಔದಾರ್ಯ, ಅಜ್ಜಯ್ಯನವರ ಬಲ್ಮೆಗಳನ್ನು ಹೊಗಳುತ್ತ ಮಾತಾಡಿಕೊಳ್ಳು ತ್ತಿದ್ದರು. ನಾನು ಮಾತ್ರ ನನ್ನ ಆವಶ್ಯಕತೆಗಳನ್ನು ಪೂರೈಸುವುದು ಹೇಗೆಂಬ ಒಗಟನ್ನು ಬಿಡಿಸುವುದರಲ್ಲಿ ಮಗ್ನನಾಗಿದ್ದೆ. ದೊರೆಗಳಿಂದ ಇನಾಮಾಗಿ ದೊರೆತ ಕೋವಿಯನ್ನೂ ತಮ್ಮ ತಮ್ಮ ಕೋವಿಗಳನ್ನೂ ಒಂದಿಗಿರಿಸಿ ಹಿರಿಯರು ಪರಿಶೀಲಿಸುತ್ತಿದ್ದಾರೆ. ನನ್ನತ್ತ ಒಮ್ಮೆ ದೃಷ್ಟಿ ಬೀರಿದ ನನ್ನ ಹಿರಿಯರು ನಾನು ಆಲೋಚನಾಮಗ್ನನಾಗಿ ಮಂಪರುಗಣ್ಣಿ ನಿಂದ ಇರುವುದನ್ನು ಕಂಡು 'ಹುಡುಗನು ಹಸಿವೆಯಿಂದ ಬಳಲಿ ಕಣ್ಣು ಕೂರುತ್ತಿದ್ದಾನೆ' ಎಂದರು. ನನ್ನ ನಿಜವಾದ ಹಸಿವೆಯ ಗುಟ್ಟು ಅವರಿ ಗೇನು ಗೊತ್ತು? ಅಷ್ಟರಲ್ಲಿ ಒಂದು ಯೋಚನೆ ಹೊಳೆಯಿತು! ನಮ್ಮ ಗಾಡಿ ಹೋರಿಗಳನ್ನು ಕಟ್ಟುವ ಕೊಟ್ಟಿಗೆಯಲ್ಲಿ ನಮ್ಮದೊಂದು ಎತ್ತಿ ಕಟ್ಟುವ ಕಿರು ನಳಿಗೆಯ, ಮದ್ದು ತುಂಬಿಸುವ ಕೋವಿಯಿದೆ. ಇದನ್ನು ಯಾರಿಗೂ ಗೊತ್ತಾಗದಂತೆ ತೆಗೆದು ಕೆಲಸ ಮುಗಿಸಿ ಇದ್ದಲ್ಲಿಯೇ ಇಡುವುದೇನೂ ಮಹತ್ತರ ಕೆಲಸವಲ್ಲ. ಆದರೂ ತಂದೆಯವರು ತಿಳಿದರೆ ನನ್ನ ಬೆನ್ನು ಹುಡಿಯಾದಂತೆಯೇ ಎಂಬುದನ್ನು ನಾನು ಅರಿಯದವನೂ ಆಗಿರಲಿಲ್ಲ. ಅಜ್ಜಯ್ಯನವರ ಮದ್ದಿನ ಚೀಲವು ನನ್ನಲ್ಲಿದೆ. ಅವರು ಮಾತಿನ ಸಂಭ್ರಮ ದಲ್ಲಿರುವಾಗ ಸದ್ದಾಗದಂತೆ ಸೀಸದ ಹುಡಿಯ ಕಡ್ಡಿ ತುಂಡುಗಳನ್ನು ತೆಗೆದು 15,

20 ಕೇಪುಗಳನ್ನು ಚಡ್ಡಿಯ ಕಿಸೆಗೆ ಇಳಿಬಿಟ್ಟಾಯಿತು. ಗಾಡಿ ಗಡಗಡನೆ ಮುಂದುವರಿಯುತ್ತಿದೆ. ರಂಜಕದ ಡಬ್ಬವೂ ಮೇಲಕ್ಕೆ ಬಂತು. ಕತ್ತಿನ ಸ್ಕಾರ್ಫನ್ನು ಮಗ್ಗುಲಲ್ಲಿ ಹಾಸಿ ಹತ್ತಿಪ್ಪತ್ತು ಬೂಚಿ ಮದ್ದನ್ನು ಸುರುವಿ ಮೆಲ್ಲನೆ ಮಡಚಿ ಕಿಸೆಗೆ ತೂರಿಸಿಯಾಯಿತು. ಅದೇ ರೀತಿಯಲ್ಲಿ ಚೀಲದ ಅರೆಗಳಿಗೆ ಕೈ ತುರುಕಿಸಿ ನಮೂನೆವಾರು ಚರೆ ಗುಂಡುಗಳನ್ನೂ ಲಪಟಾಯಿಸಿದೆ. ಪಿಲಿಮಜಲಿನಲ್ಲಿ ಗಾಡಿಯ ಮೂತಿ ನೆಲಮುಟ್ಟಿತು. ಕೂಡಲೇ ನಾನು ಅಜ್ಜಯ್ಯನವರಿಗೆ ದೊರೆತ ಸಂಭಾವನೆಯನ್ನು ಮನೆಯಲ್ಲಿ ಉಸುರುವ ಉದ್ವೇಗದಿಂದೆಂಬಂತೆ ಗಾಡಿಯಲ್ಲಿ ಹಿರಿಯರನ್ನು ಹಿಂದೆ ಬಿಟ್ಟು ಕಂಬಿಕಿತ್ತೂ ಆಯಿತು. ನನ್ನ ಉಬ್ಬಿದ ಚಡ್ಡಿ ಕಿಸೆಯನ್ನು ಕಂಡು ವಿಚಾರಿಸುವುದಕ್ಕೆ ಮೊದಲು ಅದಕ್ಕೆ ಸೂಕ್ತ ತಾಣವನ್ನು ಕಾಣಿಸಬೇಕಲ್ಲ? ಎರಡು ಮಾತಿನಲ್ಲಿ ಮನೆಯವರಿಗೆ ಅಂದಿನ ವರದಿಯೊಪ್ಪಿಸಿ,ಬಹಿರ್ದೆಸೆಗೆ ಆತುರಾತುರವಾಗಿ ಹೋಗುವವನಂತೆ, ಮನೆಯಲ್ಲಿರುವವರನ್ನು ಗಮನಿಸದೆ ಚಡ್ಡಿ ಇಳಿಸಲು ನೋಡುವಾಗ ಅಮ್ಮ "ಥೂ ನಾಚಿಕೆ ಕೆಟ್ಟವನೇ, ಚಡ್ಡಿ ಬಿಚ್ಚಲು ಮರೆಗೆ ಹೋಗು" ಎಂದರು. ಮರೆಗೆ ಸರಿದು ಕಿಸೆಯಿಂದ ಮದ್ದು ಗುಂಡುಗಳನ್ನು ತೆಗೆದು ನನ್ನ ಪುಸ್ತಕದ ಚೀಲಕ್ಕೆ ಸೇರಿಸಿ ಜೋಪಾನವಾಗಿಟ್ಟೆ. ಮನೆಯವರ ಹರ್ಷಚಿತ್ತದ ಮಾತುಕತೆಯನ್ನು ಆಲಿಸುತ್ತಾ ರಾತ್ರಿಯ ಊಟ ಮುಗಿಸಿ ಹಾಸಿಗೆಗೆ ತಲೆಕೊಟ್ಟದ್ದು ಮಾತ್ರ ಜ್ಞಾಪಕ; ಗಡದ್ದು ನಿದ್ರೆ. ಸೂರ್ಯಕಿರಣಗಳು ಅಂಗಳಕ್ಕೆ ಬಿದ್ದುದನ್ನು ಕಂಡ ತಾಯಿಯವರು ತಂಗಳುಣ್ಣಲು ಬಾರದ ನನ್ನನ್ನು ಎಚ್ಚರಿಸಲು ಬಂದು ಬೆನ್ನಿಗೆ ತಟ್ಟಿ "ಸೋಮಾರಿ, ಏಳು ಅದೋ ಬೇಟೆಗೆ ಹೋಗುವವರು ಬಂದು ಹೊತ್ತೆಷ್ಟಾಯಿತು!" ಎನ್ನುವಾಗಲೇ ಎಚ್ಚರ.

ಮನೆಯಲ್ಲಿ ಸೇರಿದ್ದವರೆಲ್ಲ ಹಿಂದಿನ ದಿನದಂತೆ ಬೇಟೆಗೆ ಸಜ್ಜಾಗಿ ಹೊರಟರು. ಉತ್ಸಾಹಹೀನನಾಗಿ ಮೂಲೆ ಹಿಡಿದಿರುವ ನನ್ನನ್ನು ಕಂಡು ಅಜ್ಜಯ್ಯನವರು 'ಮಗು, ಹೊರಡುವುದಿಲ್ಲವೆ?' ಎಂದರು. ತಂದೆಯವರು ದುರುಗುಟ್ಟಿ ನನ್ನತ್ತ ನೋಡುತ್ತಿದ್ದರು. ನಾನು ಕಾಲುನೋವೆಂದು ನೆವ ಹೇಳಿ ಅಜ್ಜಯ್ಯನವರ ಚೀಲ ಹೊರುವವನಾಗಿ ಹೋಗುವ ಕೆಲಸದಿಂದ ತಪ್ಪಿಸಿಕೊಂಡೆ. ನನ್ನ ಆಲೋಚನೆಯೇ ಬೇರೆ. ಗಾಡಿಯು ಹೊರಟ ಸದ್ದು

ಮಜಲಿನತ್ತಣಿಂದ ಕೇಳಿದುದೇ ತಡ; ನಾನು ಕಾರ್ಯೋನ್ಮುಖನಾದೆ! ಮನೆಯಲ್ಲಿ ಹಿರಿಯರಾರೂ ಇಲ್ಲ. ಹೆಂಗಸರು ಹಂದಿಯ ಮಾಂಸವನ್ನು ಉಪ್ಪು ಹುಳಿ ಹಾಕಿ ಬೇಯಿಸಿ ಇಟ್ಟಿದ್ದರು. ರೊಟ್ಟಿ ಕಡುಬಿನ ಕೂಟಕ್ಕೆ ಬೇಕಾದ ಸಂಬಾರ ಹಾಕಿ ಸಜ್ಜುಗೊಳಿಸಲು ಅಡುಗೆ ಕೋಣೆಗೆ ನುಗ್ಗಿದ ಅವರಿಗೆ ಹೊರಬರಲು ಅವಕಾಶವಿಲ್ಲದಷ್ಟು ಕೆಲಸ. ನನ್ನ ಇರವನ್ನು ಅವರಾರೂ ಗಮನಿಸುವಂತಿಲ್ಲ. ಹೊಟ್ಟೆ ತುಂಬ ತಂಗಳುಂಡು ಮೆಲ್ಲನೆ ಹಿಂಬಾಗಿಲಿನಿಂದಲೇ ಗಾಡಿ ಕೊಟ್ಟಿಗೆಗೆ ಬಂದು ಹೋರಿಗಳು ಇಲ್ಲದಿದ್ದುದರಿಂದ ನಿರ್ಭೀತನಾಗಿ ಅಟ್ಟವೇರಿ ಬೈಹುಲ್ಲಿನೆಡೆಯಲ್ಲಿ ಇಟ್ಟಿದ್ದ ಕೋವಿಯನ್ನು ಹೊರಗೆಳೆದು ನೋಡಿದೆ. ಅಜ್ಜನ ಕೋವಿಯ ಅರ್ಧದಷ್ಟು ಭಾರವೂ ಇಲ್ಲ. ನಳಿಗೆಯೂ ಅದರ ಭಾಗಗಳೂ ಮನೆಯವರ ಕೋವಿಗಿಂತಲೂ ಗಟ್ಟಿಮುಟ್ಟಾಗಿದೆ. ಅದರ ಈಡಿನ ಭರವನ್ನು ಕೇಳಿಬಲ್ಲೆ. ಅದರ ಪೆಟ್ಟು ತಿಂದ ಮೃಗವು, ಎಷ್ಟೇ ದೊಡ್ಡದಿರಲಿ, ಇಪ್ಪತ್ತು ಮಾರು ಓಡಿಲ್ಲವಂತೆ! ತುಂಬು ಸಂತೋಷದಿಂದ ಕೋವಿಯನ್ನು ಹೊರತೆಗೆದು, ಯಾರಾದರೂ ಗಮನಿಸುವರೋ ಎಂದು ಒಮ್ಮೆ ಹೊರಗಿಣಿಕಿ ನೋಡಿ, ಧೈರ್ಯತಾಳಿ ಕೋವಿ ಹೆಗಲಿಗೇರಿಸಿ ಓಡಿದೆ. ಬಂದು ನಿಂತದ್ದೇ ಗಾಡಿಮಜಲಿನಲ್ಲಿ. ರಾಶಿ ಹಾಕಿದ್ದ ಹುಲ್ಲಿನಡಿಗೆ ಕೋವಿಯನ್ನು ತುರುಕಿಸಿ ಇಟ್ಟು, ಏನೂ ಅರಿಯದವನಂತೆ, ಮನೆಗೆ ಬಂದು ಪುಸ್ತಕದ ಚೀಲವನ್ನು ತೆಗೆದು ಪುಸ್ತಕಗಳನ್ನು ಬದಿಗಿರಿಸಿ, ಚೀಲವನ್ನು ಹಾಗೆಯೇ ಹಿಡಕೊಂಡು ಪುನಃ ಮಜಲಿಗೆ ಓಡಿದೆ. ಬೇಟೆಯ ಘನ ಕಾರ್ಯದಲ್ಲಿ ತೊಡಗಲಿರುವ ನನಗೊಬ್ಬ ಶೈನಾತಿ ಬೇಡವೆ? ದನಕಾಯುವ ಹೊಲೆಯರ ಹುಡುಗ ಮಲ್ಲು ನನ್ನ ಓರಗೆಯವ. ತನ್ನ ಕಲ್ಲ ಬಿಲ್ಲಿನಲ್ಲಿ ಸಣ್ಣ ಹಕ್ಕಿಗಳನ್ನು ಹೊಡೆದುರುಳಿಸುವುದರಲ್ಲಿ ನಿಪುಣ. ಆತನಿಗೆ ಬೇಟೆಯೆಂದರೆ ತುಂಬಾ ಇಷ್ಟ. ಬೆಳ್ತನಂತೆಯೆ ತಾನೂ ಆಗಬೇಕೆಂಬ ಚಪಲ. ನನ್ನದೂ ಅವನದೂ ಒಳ್ಳೆಯ ಜೋಡಿ; 'ಆ ಕಾಡು ಕೆಸುವಿಗೆ ಈ ಕಾರ ಅಂಬಟೆ' ಎಂಬ ಗಾದೆಯಂತೆ! ಬೆಳಗ್ಗೆ ದನಗಳನ್ನು ಗುಡ್ಡೆಗೆ ಹೊಡೆಯಲು ಬಂದ ಅವನೊಡನೆ ನನ್ನ ಯೋಜನೆಯನ್ನೆಲ್ಲ ಹೇಳಿದೆ. ಅವನು ಒಮ್ಮೆ ಹೆದರಿ, "ಬೇಡ, ನಾನು ನಿಮ್ಮೊಂದಿಗೆ ಸೇರುವುದಿಲ್ಲ" ಎಂದು ಹಿಂದೇಟು ಹೊಡೆಯುವುದನ್ನು ಕಂಡು ತಂತ್ರದಿಂದ ನಾನೆಂದೆ, "ಹ್ಞೂ, ನೀನು

ಬರಬೇಕಾಗಿಲ್ಲ. ನಿನ್ನೆ ಗದ್ದೆಯ ಬಳಿಯಲ್ಲಿ ಬಿದ್ದಿದ್ದ ತೆಂಗಿನಕಾಯಿಯನ್ನು ನೀನು ಗೊರಬೆಯಲ್ಲಿ ಮುಚ್ಚಿಟ್ಟುಕೊಂಡು ಕಾಡಿಗೆ ಹೋಗಿ ತಿಂದದ್ದನ್ನು ಮನೆಯಲ್ಲಿ ಹೇಳುತ್ತೇನೆ ಅಷ್ಟೆ!" ಈ ಉಪಾಯ ಫಲಿಸಿತು. ಆತನು ವಿಧಿ ಯಿಲ್ಲದೆ ನನ್ನೊಡನೆ ಬರಲು ಒಪ್ಪಲೇ ಬೇಕಾಯಿತು. ಬೇಕಾದಷ್ಟು ತೆಂಗಿನ ನಾರನ್ನು ಸಂಗ್ರಹಿಸಿ ದನಗಳನ್ನು ಮೇಯಿಸಲು ಹೊರಟ ಮಲ್ಲುವಿನೊಂದಿಗೆ ಮನೆಯಿಂದ ಸುಮಾರು ಮುಕ್ಕಾಲು ಮೈಲು ದೂರವಿರುವ ಚಾಕೊಟಿ ಕೆರೆಗೆ ಕೋವಿಯೊಂದಿಗೆ ದನಗಳ ಹಿಂದಿನಿಂದ ಬಂದುದಾಯಿತು. ನಮ್ಮ ದನಗಳನ್ನು ಊರ ದನಗಳ ಮಧ್ಯೆ ಮೈದಾನಿನಲ್ಲಿ ಮೇಯಲು ಬಿಟ್ಟು, ಕೋವಿಯನ್ನು ಕ್ರಮವಾಗಿ ತುಂಬಿಸಿ, ಮೃಗದ ಅನ್ವೇಷಣೆ ಮಾಡುತ್ತಾ ಬಲ್ಲೆ, ಬಲ್ಲೆ ಅಲೆದೆವು. ಕಾಡುಪಾರಿವಾಳ ಕೂಡಾ ಇಲ್ಲ! ಹ್ಞಾ, ಅದೇನು, ಪೊದೆಯೆಡೆಯಿಂದ ಕಿವಿಯಾಡಿಸುತ್ತಿದೆ? ಕತ್ತೆಮೊಲ! ಮಲ್ಲುವು ಸಂತೋಷದಿಂದ ನನ್ನನ್ನು ತಿವಿದು ಸನ್ನೆ ಮಾಡುತ್ತಿದ್ದಾನೆ. ನಾನು ಕುದುರೆ ಯನ್ನು ಎಳೆದು, ಬಿಟ್ಟ ಕಣ್ಣನ್ನು ಮುಚ್ಚದೆ ಮೊಲವನ್ನೇ ನೋಡುತ್ತಾ ನಿಂತೆ. ಕೋವಿಯ ಟ್ರಿಗರಿಗೆ ಕೈಹೋಯಿತು. 'ಢಂ' ಎಂದಿತು ಕೋವಿ! ಹೊಗೆಯುಗುಳಿತು ನಳಿಗೆ. ಏನಾಯಿತೆಂದು ನೋಡುತ್ತೇನೆ; ಮೊಲವು ಮಾರೆತ್ತರಕ್ಕೆ ನೆಗೆದು ಓಡಿ ಚೆಂಡೆಬಲ್ಲೆಯೊಂದಕ್ಕೆ ನುಗ್ಗಿತು. ಈಡು ಎಲ್ಲಿಗಾಗಿದೆ ಎಂದು ನೋಡಿದೆ. ನನ್ನ ಈಡು ನಮ್ಮಿಂದ ಮಾರು ಮುಂದೆ ನೆಲಕ್ಕೆ ತಾಗಿ ಮಣ್ಣಿನ ಹುಡಿಯು ಮೇಲೇಳುತ್ತಿದೆ. ನಾನು ಎವೆಯಿಕ್ಕದೆ ನೋಡಿದುದು ಮಲಗಿದ ಮೊಲವನ್ನಲ್ಲದೆ, ಕೋವಿಯ ಶಿಸ್ತು ನೋಡಿರಲಿಲ್ಲ! ಮಲ್ಲುವಿನ ಮನಸ್ಸಿನಲ್ಲಿ 'ಕಿನ್ನಿ ಬಾಣಾರು' ಕೂಡಾ ದೊಡ್ಡ ಬಾಣಾರು ಗಳಂತೆ ಕುಶಲ ಈಡುಗಾರರೆಂದು ಭ್ರಮೆ! "ಏನು ಮಾಡಿದಿರಿ? ಇನ್ನು ಅಷ್ಟು ಸುಲಭದಲ್ಲಿ ನಮಗೆ ಮೊಲ ಸಿಗದು" ಎಂದನು. ನನಗೆ ಅಭ್ಯಾಸದ ಹುಚ್ಚು ಹುರುಪು! "ನೋಡು, ನಾಳೆ ನಾಡಿದ್ದರಲ್ಲಿ ನಾನು ಮೊಲ ಹೊಡೆಯುತ್ತೇನೊ, ಇಲ್ಲವೊ" ಎಂದವನೇ ಕೋವಿಗೆ ಈಡು ತುಂಬಿಸಿದೆ.

ಮತ್ತೆ ಅನ್ವೇಷಣೆಗೆ ಪ್ರಾರಂಭ. ಚಾಕೊಟಿಕೆರೆಯ ಗೇರುಬೀಜದ ಕಾಡಿಗೆ ಬಂದು ಕಿವಿಗೊಟ್ಟಾಗ ಎರಡು ಕೇಂಕಣ ಹಕ್ಕಿಗಳು 'ಕುರ‍್ರೊ, ಕುರ‍್ರೊ' ಎನ್ನುವ ಶಬ್ದ ಕೇಳಿಸಿತು ಇಬ್ಬರೂ ಅಗಳಿನ ಮರೆಯಿಂದ ಮೆಲ್ಲಗೆ

ಇಣಿಕಿ ನೋಡಿದೆವು. ಆ ಕೇಂಕಣಗಳೆರಡೂ ನೆಲವನ್ನು ಕಾಲುಗಳಿಂದ ಕೆದಕಿ ಗೆದ್ದಲು ಹುಡುಕಿ ತಿನ್ನುತ್ತಿದ್ದವು. ಅಗಳ ಮೇಲೆ ಕೋವಿಯನ್ನು ಇರಿಸಿ ಕೋವಿಯ ಮುಖಬಾಯಿ ಸರಿಯಾಗಿ ಹಕ್ಕಿಗಳಿಗೆ ಅಣೆಯುವಂತೆ ಮಾಡಿ ಹಕ್ಕಿಯ ಎದೆಭಾಗವನ್ನು ಕೋವಿಯ ಕಿಲೆಂಜಿಗೆ ಅಣೆಗೊಳಿಸಿ ಟ್ರಿಗರಿಗೆ ಕೈಹಾಕಿದೆ. ಕೋವಿಯು ಢಮ್ಮೆಂದಿತು. ಹಕ್ಕಿ ಬುರ್ರೆಂದು ಹಾರಿದ ಸದ್ದು ಕೇಳಿ 'ಅಯ್ಯೋ, ಇದೂ ತಪ್ಪಿದರೆ ಮಲ್ಲು ನನ್ನೊಂದಿಗೆ ಇನ್ನು ಬರಲಾರನು' ಎಂದು ನನ್ನಲ್ಲೇ ಭಾವಿಸಿಕೊಂಡೆ. ನೋಡಿದರೆ ಒಂದು ಹಕ್ಕಿ ಹಾರಿ ತಪ್ಪಿಸಿಕೊಂಡಿದೆ; ನಾನು ಗುರಿಯಿರಿಸಿದ್ದ ಹಕ್ಕಿ ಸದ್ದಿಲ್ಲದೆ ಮಲಗಿದೆ. ಅದಕ್ಕೆ ಜೀವವಿದ್ದರೂ ಓಡಲು ಬಿಡೆನೆನ್ನುವ ಹುಮ್ಮಸ್ಸಿನಲ್ಲಿ ಮಲ್ಲು ಒಂದೇ ನೆಗೆ ತಕ್ಕೆ ಓಡಿ ಅದನ್ನು ಬಿಗಿಹಿಡಿದು ಎತ್ತಿ ಗೆಲುವಿನ ದೃಷ್ಟಿಯಿಂದ ನನ್ನೆಡೆಗೆ ನೋಡಿದ. ನನ್ನ ಹೆಮ್ಮೆಗೆ ಪಾರವಿಲ್ಲ. ಕೇಂಕಣವೆಂದರೆ ಕೋಳಿಗಿಂತ ಕಿರಿದು. ಅದರ ಕಾಲಿಗೆ ಬಾಳು ಕಟ್ಟಿದಂತೆ ಎರಡೆರಡು ಮುಳ್ಳು, ಬಣ್ಣ ಕೆಂಜು, ಕೋಳಿಯ ಜಾತಿಯ ಹಕ್ಕಿ; ಅದರ ಮಾಂಸ ಬಹಳ ರುಚಿ. ನನ್ನ ಪ್ರಥಮ ಬೇಟೆಯಂತೂ ಆಯಿತು. ಆದರೆ ಬಿದ್ದ ಹಕ್ಕಿಯನ್ನೇನು ಮಾಡುವುದು? ಮನೆಗೆ ಕೊಂಡುಹೋದರೆ ನನ್ನ ಗುಟ್ಟು ಬಯಲಾಗಿ ಪೆಟ್ಟಿನ ಸುರಿಮಳೆಯಾಗದಿರದು! 'ಕೊಂದ ಪಾಪ ತಿಂದು ಪರಿಹಾರ' ಎಂಬುದಷ್ಟೆ ನನ್ನ ಅಂದಿನ ಪ್ರಜ್ಞೆ. ನನ್ನ ಮೊದಲ ಬೇಟೆಗೆ ಬಲಿಯಾದ ಅದನ್ನು ತಿಂದೇ ತೀರಬೇಕು. ಏನು ಮಾಡೋಣ? ಹೀಗೆ ಯೋಚಿಸುವಾಗ ಮಲ್ಲುವೇ ಸೂಚಿಸಿದ ಉಪಾಯ ನೆರವಿಗೆ ಬಂತು! ಅದರಂತೆ ನಾನು ಸಮೀಪದ ಅಬ್ಬೋಕರೆ ಬ್ಯಾರಿಯ ಮನೆಗೆ ಹೋಗಿ 'ಮಲ್ಲುವಿಗೆ ಕೊದಿ ತಾಗಿ ಹೊಟ್ಟೆ ಉಬ್ಬರಿಸಿದ್ದಕ್ಕಾಗಿ ಕೊದಿಗೆ ಮಂತ್ರಿಸಲು ಅಗತ್ಯವಾಗಿ ಬೇಕೆಂದು' ಒಂದು ಹಿಡಿ ಉಪ್ಪು, ಸ್ವಲ್ಪ ಹುಳಿ, ನಾಲ್ಕು ಮೆಣಸು ಕೇಳಿದೆ. ನಿಜವೆಂದೇ ಭಾವಿಸಿದ ಅಬ್ಬೋಕರೆಯ ಹೆಂಡತಿ ಬೀಬಿ ಬ್ಯಾರ್ತಿಯು ಧನಿಗಳ ಮಗನೆಂಬ ಗೌರವದಿಂದ ಸ್ವಲ್ಪ ಹೆಚ್ಚೇ ಇರಲೆಂದು 6, 7 ಮೆಣಸು, ಉಪ್ಪು, ಹುಳಿ ಕೊಟ್ಟುದನ್ನು ತೆಗೆದುಕೊಂಡು ಬಂದೆ. ಅಷ್ಟರಲ್ಲಿ, ಮಲ್ಲು ಕೆರೆಯ ಬಳಿಯಲ್ಲಿ ಹಕ್ಕಿಯ ಗರಿಗಳನ್ನು ಕಿತ್ತು ಸಮಮಾಡಿ, ಹದ ತುಂಡುಗಳನ್ನು ಏರ್ಪಡಿಸಿ ದೊಡ್ಡ ಬಂದನಾರು ಮರದ ತೊಗಟೆ ತೆಗೆದು ಅದರ ಆರೇಳು

ಬೆರಳು ಅಗಲದ ಮಾರುದ್ದದ ನಾರನ್ನು ಅಣಿಗೊಳಿಸಿ, ನಾಲ್ಕೈದು ದಡ್ಡಾಲದ ಎಲೆಗಳನ್ನು ಆರಿಸಿ ಸಿದ್ಧಮಾಡಿದ್ದ. ನಾನು ತಂದ ಉಪ್ಪು, ಹುಳಿ, ಮೆಣಸನ್ನು ಕೆರೆಯ ಬಳಿಯಿದ್ದ, ಊರವರು ಬಟ್ಟೆ ಒಗೆಯುವ ಕಲ್ಲಿನಲ್ಲಿ ಹಾಕಿ ಅರೆದು, ಸರಿಗೊಳಿಸಿಟ್ಟ ಮಾಂಸಕ್ಕೆ ಲೇಪಿಸಿ ಎಲೆಯಲ್ಲಿ ಸುತ್ತಿ ಬಂದನಾರಿನಿಂದ ಚೆಂಡನ್ನು ಬಿಗಿಯುವಂತೆ ಬಿಗಿದು, ಕಾಲ್ಚೆಂಡು ಗಾತ್ರದ ಉಂಡೆಯನ್ನು ಮಾಡಿದ. ನೆಲವನ್ನು ದೋಣಿಯಾಕಾರದಲ್ಲಿ ಒಂದಡಿ ಅಗಲ - ಆಳದ ಗುಂಡಿ ತೋಡಿದ. ಬಳಿಯಿದ್ದ ಹದನಾದ ಗಾತ್ರದ ಕಟ್ಟಿಗೆಯನ್ನು ಆಯ್ದು ಅವನ ಬಳಿಯಿದ್ದ ಬೆಂಕಿಪೊಟ್ಟಣವನ್ನು ಗೀರಿ ಒಲೆಗೆ ಬೆಂಕಿ ಹೊತ್ತಿಸಿದ. ಅದು ಉರಿಯಲು ಆರಂಭಿಸುವಾಗ ಒಲೆಗೆ ಅಡ್ಡ ಕಟ್ಟಿಗೆಯೊಟ್ಟಿ ಈ ಮಾಂಸದ ಚೆಂಡನ್ನು ಅದರ ಮೇಲಿಟ್ಟ. ಚೆಂಡಿನ ನಾಲ್ಕು ಬದಿಗೂ ಗೋರಿ ಯಂತೆ ಕಟ್ಟಿಗೆಯನ್ನು ಇಟ್ಟು "ಇದು ಉರಿಯುತ್ತಲೇ ಇರಬೇಕು. ಎಲ್ಲಿಯಾ ದರೂ ಬೆಂಕಿ ಸಂದಿ ಹೊಗೆವಾಸನೆ ಬಂದರೆ ಮಾಂಸವು ತಿನ್ನಲಿಕ್ಕೆ ಸಾಧ್ಯ ವಿಲ್ಲದಂತಾಗುತ್ತದೆ. ಜಾಗ್ರತೆಯಿಂದ ನೋಡಿಕೊಳ್ಳಿ. ನಾನು ಮೇಯಲು ಬಿಟ್ಟ ದನಗಳೆಲ್ಲಿವೆಯೆಂದು ನೋಡಿಬರುತ್ತೇನೆ. ಇದು ಬೇಯುವಷ್ಟರಲ್ಲಿ ನಾನು ನೋಡಿ ಬರುತ್ತೇನೆ" ಎಂದ. ನನ್ನ ಉತ್ತರಕ್ಕೂ ಕಾಯದೆ ಓಡಿಯೇ ಬಿಟ್ಟ.

ನಾನು ಜಾಗರೂಕತೆಯಿಂದ ಬೆಂಕಿಯಿಂದ ಹೊಗೆ ಏಳದಂತೆ ಮಾಡಲು ಪ್ರಯತ್ನಿಸುತ್ತಿರುವಾಗ ಅಡ್ಡಲಾಗಿಟ್ಟ ಕಟ್ಟಿಗೆಯು ಉರಿದು ಮಾಂಸದ ಚೆಂಡಿನ ಭಾರಕ್ಕೆ ಕುಸಿದು ಚೆಂಡು ಒಲೆಗೆ ಬಿತ್ತು. ಏನು ಮಾಡುವು ದೆಂದು ಆಲೋಚಿಸುವಾಗ ಮಲ್ಲು ದನಗಳನ್ನು ಮುಂದೆಗೆ ಸೇರಿಸಿ ಓಡೋ ಡುತ್ತಾ ಬಂದವನೇ ಕೇಳಿದ-"ಕಟ್ಟು ಒಲೆಗೆ ಬಿತ್ತೆ ?" ಎಂದು. "ಹೌದು" ಎಂದೆ ನಾನು. ಅವನು ಒಡನೆ ಕೋಲಿನಿಂದ ಅದನ್ನು ಒಲೆಯಿಂದ ನೂಕಿ ಮೇಲಕ್ಕೆ ತೆಗೆದು ಅತ್ತಿತ್ತ ಹೊರಳಾಡಿಸುವಂತೆ ಹೇಳಿದ. ಬೇಯತೊಡ ಗಿದ ಮೇಲೆ ಅದನ್ನು ಅವನು ಮುಟ್ಟಿದರೆ ಮೈಲಿಗೆಯಾಗುವುದಲ್ಲ! ಅವನು ಹೊಲೆಯ, ಆದರೂ ನನಗಸಾಧ್ಯವಾದ ಕಷ್ಟದ ಕೆಲಸವೆಂದರೆ "ನೀನೇ ಮಾಡು" ಎನ್ನುತ್ತಿದ್ದೆ. ಅಲ್ಲದೆ ಬೆಂದ ಮೇಲೆ ಪಾಲು ಮಾಡಿಕೊಡುವ ಹಕ್ಕು ಕೂಡಾ ನನ್ನದಲ್ಲವೇ? ಹಾಗಾಗಿ ಅವನ ಸೂಚನೆಗೆ ಒಪ್ಪಿಕೊಂಡು

10,15 ನಿಮಿಷ ಅದನ್ನು ಆರಲು ಬಿಟ್ಟು ಹಗ್ಗವನ್ನು ಬಿಚ್ಚಿ ಒಳಗೆ ನೋಡು ವಾಗ ಸುತ್ತಿದ್ದ ಎರಡು ಮೂರು ಎಲೆಗಳೂ ಕರಿದು ಹೋಗಿವೆ. ಇದನ್ನು ನೋಡಿದ ಮಲ್ಲುವು "ಎಲ್ಲಾ ಎಲೆಗಳೂ ಹೀಗೆ ಬೆಂಕಿಗೆ ಸುಟ್ಟಿದ್ದರೆ ಒಳಗಿನ ಮಾಂಸವೂ ಸುಟ್ಟಿರಬೇಕು. ಅದು ಸುಟ್ಟಿದ್ದರೆ ತಿನ್ನಲು ಅಷ್ಟು ಸೊಗಸಾಗದು" ಎಂದ. ಹಬೆಯೊಡುತ್ತಿದ್ದ ಮಾಂಸದ ಚೆಂಡನ್ನು ಬಿಡಿಸಿಯಾಯಿತು. ಒಳಗಿನ ಎಲೆಯು ಸುಟ್ಟಿಲ್ಲ! ಎಲ್ಲ ಬಿಡಿಸಿದಾಗ ಮಾಂಸದಿಂದ ಏಳುವ ಹಬೆಗೆ ನಾಲಿಗೆಯಿಂದ ನೀರೊಸರಿತು.

ಮಲ್ಲು ಓಡಿದವನೇ ಎಲೆಯೊಂದನ್ನು ತಂದು ನನ್ನ ಮುಂದಿಟ್ಟು ಎರಡು ತುಂಡನ್ನು ಅದರಲ್ಲಿ ಇಡುವಂತೆ ಹೇಳಿದ. ಇದನ್ನು ಕೇಳಿ ಎರಡು ತುಂಡು ಏಕೆಂದು ಪ್ರಶ್ನಾರ್ಥಕ ದೃಷ್ಟಿ ಬೀರಿದೆ. "ಕಾಡು ಕೊಲೆಗಳಿಗೆ ತಿನ್ನುವ ತಿನಿಸನ್ನು ಇಟ್ಟು ಪ್ರಾರ್ಥಿಸದಿದ್ದರೆ ಅವುಗಳ ದೃಷ್ಟಿ ಬಿದ್ದು ಹೊಟ್ಟೆ ಉಬ್ಬರಿಸಿ ನಾಳೆ ಸತ್ತೇ ಹೋಗಬಹುದೆಂದು" ಹೇಳಿದವನೇ ನಾನು ಇಕ್ಕಿದ ಎಲೆಯನ್ನು ಭಯ ಭಕ್ತಿಯಿಂದ ಎತ್ತಿ ಒಂದು ಕಾಸರಕನ ಮರದ ಬುಡದಲ್ಲಿ ಕಲ್ಲಿನಲ್ಲಿ ಮರೆಯಾಗಿಟ್ಟು ಬಂದ. ಅವನ ಪಾಲನ್ನು ಅವನಿಗೆ ಕೊಟ್ಟೆ; ತಿನ್ನಲು ಪ್ರಾರಂಭಿಸಿದೆವು. ಉಪ್ಪು ಸ್ವಲ್ಪ ಜಾಸ್ತಿಯೇ ಆಗಿ ಕಂಡರೂ ಹುರಿದ ಮಾಂಸದಂತೆ ಕುರು ಕುರು ಎನ್ನುತ್ತಿತ್ತು. ನನ್ನ ಮೊದಲ ಬೇಟೆಯ ರುಚಿಯನ್ನು ಮರೆಯುವುದುಂಟೇ? ನೆನೆದುಕೊಂಡರೆ ಇಂದೂ ನಾಲಗೆಯಲ್ಲಿ ನೀರೂರುತ್ತದೆ! ಕೆರೆಯಲ್ಲಿ ಕೈತೊಳೆದು, ಎರಡು ಬೊಗಸೆ ನೀರು ಕುಡಿದು ದಡಕ್ಕೆ ಬಂದು ವಿಶ್ರಮಿಸಿದಾಗ ನನ್ನ ಹೆಮ್ಮೆಗೆ ಪಾರವಿಲ್ಲ. ಮಲ್ಲುವನ್ನು ಹುಲ್ಲುಗಾವಲಿಗೆ ಕಳುಹಿಸಿದೆ. ಕೋವಿ, ಚೀಲಗಳನ್ನು ಹೆಗಲಿಗೇರಿಸಿ ಹೊರಗಿನಿಂದಲೇ ಬಂದು ಹಿಂದಿನಂತೆ ಗಾಡಿಯ ಕೊಟ್ಟಿಗೆಯಲ್ಲಿ ಕೋವಿಯನ್ನಿರಿಸಿ ಮನೆ ಸೇರುವಾಗ ಗೋಡೆಯ ಗಡಿಯಾರವು ಡಣ್, ಡಣ್ ಎಂದು ಎರಡು ಬಾರಿಸಿತು. ಹೊಟ್ಟೆಯು ಹಸಿವಿನಿಂದ ಚುರುಗುಟ್ಟುತ್ತಿತ್ತು. ಕಾಡಿನಲ್ಲಿ ತಿಂದದ್ದು "ಭೀಮನ ಹೊಟ್ಟೆಗೆ ಕಾಸಿನ ಮಜ್ಜಿಗೆ" ಎಂಬಂತಾಗಿತ್ತು. ಬಂದವನೇ ಅಡುಗೆ ಕೋಣೆಗೆ ಹೋಗಿ ಮಣೆಯೆಳೆದುಕೊಂಡು ಕುಳಿತೆ. ಬಟ್ಟಲು ತೆಗೆದುಕೊಂಡು ಬಡಿಸಿ ತರಲು ಹೋದ ತಾಯಿಯವರು ಅದೇಕೆ ಬಾಗಿಲ ಮೂಲೆಗೆ ಕೈಹಾಕಿ ಹಿಡಿಸೂಡಿಯನ್ನು ತಡಕುತ್ತಿದ್ದಾರೆ?

ಓ.... ನೆನಪಾಯಿತು! ಊಟಕ್ಕೆ ಕೂರುವ ಅವಸರದಲ್ಲಿ ಕೈಕಾಲು ತೊಳೆಯದೆ ಬಂದಿದ್ದೆ! ಎದ್ದು ಬಚ್ಚಲು ಮನೆಯ ಕಡೆ ಹೆಜ್ಜೆಯಿರಿಸಿದಾಗ ನೋಡಿ ನಗುತ್ತಾ ತಾಯಿಯವರು "ಬೇಗ ಕೈ ಕಾಲು, ತೊಳೆದು ಬಾ; ರೊಟ್ಟಿ ಪದಾರ್ಥ ಬಡಿಸಿ ಇಟ್ಟಿದ್ದೇನೆ ಬೆಕ್ಕು ತಿಂದೀತು" ಎಂದರು.

ಕೈ ಕಾಲು, ಮುಖಗಳನ್ನು ತೊಳೆದು ತ್ವರಿತಗತಿಯಿಂದ ಬಂದು ಮಣೆಯಲ್ಲಿ ಕುಕ್ಕರಿಸಿದವನೇ ಬೇಕಾದಷ್ಟು ರೊಟ್ಟಿ, ಮಾಂಸ ಹೊಟ್ಟೆಗಿಳಿಸಿ ಮೇಲೆದ್ದು ಕೈತೊಳೆದು ಹೊರಜಗಲಿಗೆ ಬರುತ್ತಿದ್ದಾಗ ಮತ್ತೆ ತಾಯಿ ಎದುರಾದರು. "ಸ್ವಲ್ಪ ಆ ಪುಸ್ತಕಗಳನ್ನು ಬಿಡಿಸಿ ನೋಡಬಾರದೇನೊ? ನಾಳೆಯೋ ನಾಡಿದ್ದೋ ಶಾಲೆ ಸುರುವಾಗುತ್ತದೆಂದು ಹೇಳಿದ್ದೆ. ನೀನು ಓದುವುದೇ ಕಾಣೆಸುವುದಿಲ್ಲ" ಎಂದರು! ಬೇಟೆಯ ಹುಮ್ಮಸ್ಸಿನಲ್ಲಿದ್ದ ನನಗೆ 'ಶಾಲೆ'ಯೆಂಬ ಪದವೇ ಕಿವಿಗೆ 'ಶೂಲೆ'ಯಾಗಿ ಸುಪ್ಪತ್ತಿಗೆಯಲ್ಲಿದ್ದವನನ್ನು ತಿಪ್ಪೆಗೆ ದೂಡಿದಂತಾಯಿತು! ನನ್ನಷ್ಟಕ್ಕೆ ಗೊಣಗುತ್ತ ಕೋಣೆಗೆ ಬಂದು ಪುಸ್ತಕ ಬಿಡಿಸಿ ಹಿಡಿದು ಮಡಚಿಟ್ಟಿದ್ದ ಹಾಸಿಗೆಗೆ ಮೈಯೊರಗಿಸಿ ಓದಲು ಹವಣಿಸಿದೆ. ಅಲ್ಲಿಯೇ ಗಡದ್ದು ನಿದ್ರೆ ಬಂದದ್ದು ತಿಳಿಯಲೇ ಇಲ್ಲ. ಸೂರ್ಯನು ಮುಳುಗಿದನೆಂದು ತಿಳಿದ ಮಲ್ಲುವು ಮೇವಿಗೆ ಬಿಟ್ಟ ದನಗಳ ಹಿಂಡನ್ನು ಹಟ್ಟಿಗೆ ಹಿಂದಿರುಗಿಸುವಾಗ ಕೊಟ್ಟ ಉರಾಲು, ಬೀಜದ ಹೋರಿಯ ಕಿವಿಯಿರಿಯುವ ಗುಟುರುಗಳನ್ನು ಕೇಳಿ ಎಚ್ಚರಗೊಂಡೆ.

ಬೇಟೆಗೆ, ಬೆಳಗ್ಗೆಯೇ ಹೋಗಿದ್ದ ಹಿರಿಯರ ಸವಾರಿಯು ಗಾಡಿಯಲ್ಲಿ ಬಂದುದು ರಾತ್ರಿ ಸಾಧಾರಣ ಒಂಬತ್ತು ಗಂಟೆಗೆ. ಅಂದು ಕಾಡಿನಲ್ಲಿ ಇಪ್ಪತ್ತು ಇಪ್ಪತ್ತೈದು ಈಡು ಹೊಡೆದಿದ್ದರೂ ಸಿಕ್ಕಿದ್ದು ಒಂದೇ ಹಂದಿ, ಒಂಟಿಗ! ಅದನ್ನೂ ಕಲೆಕ್ಟರರೇ ಹೊಡೆದದ್ದು. ವಿಠಲ ಪೂಂಜರು ಹೊಡೆದ ಕಾಡುಕೋಣವು ಹತ್ತಿಪ್ಪತ್ತು ಜನರು ಹೊರುವಂಥ ಗಾತ್ರದ್ದು! ಹೀಗೆಲ್ಲ ಬೇಟೆಯಿಂದ ಬಂದವರ ಮಾತುಕತೆಯಾಗುತ್ತಿದ್ದಾಗ ಅರಿತುಕೊಂಡೆ. ಆ ಕಾಡುಕೋಣವನ್ನು ಮಾಂಸ ಮಾಡಿ ಕೆಡದಂತೆ ಅರಿಸಿನ, ಉಪ್ಪು, ಹುಳಿ ಹಾಕಿ ಡಬ್ಬಿಯಲ್ಲಿ ತುಂಬಿಸಿ ದೊರೆಗಳಿಗೆ ಕೊಂಡುಹೋಗಲು ಕೊಟ್ಟರಂತೆ. ಹಂದಿಯನ್ನು ಹಿಂದಿನ ದಿನದಂತೆ ಪಾಲು ಮಾಡಿದುದೆಂಬುದೂ ಗೊತ್ತಾಯಿತು.

ಮರುದಿನ ಬೆಳಗ್ಗೆ ಕಾಫಿ ಮುಗಿಸಿ ದೊರೆಗಳು ಮಂಗಳೂರಿಗೆ ಹೊರಡುವರೆಂದೂ, ಮಂಗಳೂರಿನಲ್ಲಿ ಕಾಂಗ್ರೆಸಿಗರು ಗಲಾಟೆಗೆ ತೊಡಗಿದ ವರ್ತಮಾನ ಬಂದದ್ದರಿಂದ ಬೇಟೆಯ ದಿನಗಳನ್ನು ಮೊಟಕುಗೊಳಿಸಿ ಕೂಡಲೇ ಹೊರಡಬೇಕಾಯಿತೆಂದೂ ಹೇಳಿದರು. "ಅಯ್ಯೋ, ಮತ್ತೊಮ್ಮೆ ದೊರೆಗಳನ್ನು ನೋಡುವ ಸಂದರ್ಭ ತಪ್ಪಿ ಹೋಯಿತಲ್ಲಾ" ಎಂದು ಬೇಗುದಿಗೊಂಡೆ. ಆಗ ಅಜ್ಜಯ್ಯನವರೆಂದರು "ಮಗೂ, ನಿನ್ನನ್ನು ಇಂದೂ ದೊರೆಗಳು ಜ್ಞಾಪಿಸಿಕೊಂಡರು. ನಾಳೆ ಅವರು ಮಂಗಳೂರಿಗೆ ಹೋಗುವಾಗ ಮರ್ದಾಳದಲ್ಲಿ ಅವರನ್ನು ಬೀಳ್ಕೊಡುವಲ್ಲಿ ಬಾ." ಇದನ್ನು ಕೇಳಿ ಮನಸ್ಸಿಗೆ ನೆಮ್ಮದಿಯಾಯಿತು. ನಾನು ಮಲಗಲೆಂದು ಕೋಣೆಗೆ ಹೋದೆ. ಮಲಗಿದ್ದಲ್ಲಿ ನಾನು ಕನಸಿನಲ್ಲೆ ಹೊಡೆದ ಜಿಂಕೆ, ಕಡವೆಗಳ ಬೇಟೆ ಭರ್ಜರಿಯದೆ! ಅಷ್ಟರಲ್ಲಿ ಹುಲಿಯ ಆರ್ಭಟೆಯನ್ನು ಕೇಳಿ ಬೆಚ್ಚಿ ಥರಥರನೆ ನಡುಗುತ್ತಾ ನೋಡುತ್ತೇನೆ – ಬೆಳಗಾಗಿದೆ!

ಮರುದಿನ ಮುಂಜಾನೆ ಎಂಟು ಗಂಟೆಗೆ ಹಿರಿಯರೊಡನೆ ಹೊರಟು ಮರ್ದಾಳ ಶಾಲಾ ವಠಾರಕ್ಕೆ ಬಂದೆ. ಸುಂಕದಕಟ್ಟೆಯ ಕಡೆಯಿಂದ ನಮ್ಮ ಅಬ್ಬೋಕರೆ ಬ್ಯಾರಿಗಳ ಚಿರಪರಿಚಿತವೂ, ಸುಶ್ರಾವ್ಯವೂ ಆದ ಉರಾಲು ಕೇಳಿ ಎಲ್ಲರೂ ಗಾಡಿ ಬಂತೆಂದು ಅರಿತು ದೊರೆಗಳ ಸ್ವಾಗತಕ್ಕೆ ಲಗುಬಗೆಯಿಂದ ಸಿದ್ಧರಾದರು. ಅಜ್ಜಯ್ಯನವರೊಡನೆ ನಾನೂ ನಿಂತಿದ್ದೆ. ನಮ್ಮನ್ನು ಕಂಡ ದೊರೆಗಳು ಮುಗುಳ್ನಕ್ಕರು; ಹಿರಿಯರು ನೀಡಿದ ನಿಂಬೆ ಹಣ್ಣಿನ ಕಾಣಿಕೆಯನ್ನು ಆದರದಿಂದ ಸ್ವೀಕರಿಸಿದರು. ಗಾಡಿಯಿಂದ ಇಳಿದರೆ ತಡವಾಗುವುದೆಂದೂ ಅತಿ ತ್ವರೆಯಾಗಿ ಮಂಗಳೂರಿಗೆ ಮುಟ್ಟಬೇಕಾದುದರಿಂದ ತಾವು ಹೋಗುವುದಾಗಿಯೂ ತಿಳಿಸಿದರು. ನಮ್ಮ ಗುಂಪಿನಲ್ಲಿ ಹೊಸ ಕೋವಿಗೆ ಪರವಾನಿಗೆ ಬೇಕಾದವರು ಅಜ್ಜಯ್ಯನವರಲ್ಲಿ ಅರ್ಜಿ ಕೊಡಬೇಕೆಂದು ಹೇಳಿದರು. ಅಜ್ಜಯ್ಯನವರಿಗೆ ಪಾರಿತೋಷಕವಾಗಿ ನೀಡಿದ್ದ ಜೋಡು ನಳಿಗೆಯ ಕೋವಿಗೆ ಅಲ್ಲಿಯೇ ತಾತ್ಕಾಲಿಕ ಪರವಾನಿಗೆಯನ್ನು ಕೊಟ್ಟರು. ನನ್ನನ್ನು ಕುರಿತು ಮುಂದಿನ ತಿಂಗಳು ಮಂಗಳೂರಲ್ಲಿ ನಡೆಯಲಿರುವ ಸ್ಕೌಟ್ ರ್‍ಯಾಲಿಗೆ ಬಂದಾಗ ತಮ್ಮನ್ನು ಕಾಣಬೇಕೆಂದರು. ಬಳಿಕ ಮಂಗಳೂರು ದಾರಿಯಾಗಿ ಹೊರಟರು. ಹಿರಿಯರೆಲ್ಲರೂ ಬಾಗಿ ನಮಸ್ಕರಿಸಿದರು. ನಾನು

ಸೆಟೆದು ನಿಂತು ಸೆಲ್ಯೂಟ್ ಹೊಡೆದೆ. ಮೂಗುದಾರ ಸಡಿಲಿಸಲ್ಪಟ್ಟ ಎತ್ತುಗಳು ಓಡಲು ತೊಡಗಿದವು; ಗಾಡಿ ಚಲಿಸಿತು. ಹಿರಿಯರು ದೊರೆಗಳನ್ನು ಬೀಳ್ಕೊಡಲು ಹೊಸಮುತಕ್ಕೆಂದು ಹಿಂದಿನ ಗಾಡಿಯಲ್ಲಿ ಹೊರಟರು. ನಾನು ನನ್ನ ಬೇಟೆಯ ಅಭ್ಯಾಸಕ್ಕೆಂದು ಮಲ್ಲುವನ್ನು ಕೂಡಿಕೊಳ್ಳಲು ಆತುರಾತುರವಾಗಿ ಮನೆಯನ್ನು ಸೇರಿದೆ.

ರಜೆಯಲ್ಲಿ ಓದಲೆಂದು ಊರಿಗೆ ಬಂದಿದ್ದವನು ಓದನ್ನು ಮರೆತು ಬೇಟೆಯ ಗುಂಗಿನಲ್ಲಿಯೇ ಸಮಯ ಕಳೆದೆ. ಪ್ರಥಮ ದಿನದ ಶಿಕಾರಿ ಅಭ್ಯಾಸದಲ್ಲಿ - ಗುಂಡು ಹೋದಲ್ಲಿ ಕೇಂಕಣವಿದ್ದೋ ಕೇಂಕಣವಿದ್ದಲ್ಲಿ ಗುಂಡು ಹೋಗಿಯೋ - ಹೇಗೋ ನನ್ನ ಕೋವಿಗೆ ಈಡಾಗಿತ್ತು. ಅದು ನನ್ನ ಪಾಲಿಗೆ 'ಕಣ್ಣು ಕಾಣದ ಕುಕ್ಕುರನು ತಿಂಡಿಯ ಬುಟ್ಟಿಯನ್ನು ಎಡವಿತು' ಎಂಬ ಗಾದೆಯಂತಾಗಿತ್ತು. ಹಿರಿಯರು ಹೊಸಮುತದತ್ತ ದೊರೆಗಳನ್ನು ಬೀಳ್ಕೊಡಲು ಹೋದುದರಿಂದ ನನ್ನ ಉದ್ದೇಶ ಸಾಧನೆಗೆ ಯಾವ ತೊಡಕೂ ಇಲ್ಲದಂತಾಯಿತು. ಹಿಂದಿನ ದಿನದಂತೆ ಗಾಡಿ ಕೊಟ್ಟಿಗೆಯ ಅಟ್ಟದಿಂದ ಕೋವಿಯನ್ನು ತೆಗೆದುಕೊಂಡು ಮಲ್ಲುವಿನೊಡನೆ ಚಾಕೊಟಿಕೆರೆಗೆ ಬಂದೆ. ಈಡು ತುಂಬಿಸಿ, ಪಾರಿವಾಳ, ಇಣಚಿ, ಬಜಕ್ಕುರೆಹಕ್ಕಿ, ಕೇಂಕಣವೆನ್ನದೆ 10, 15 ಈಡು ಹೊಡೆದರೂ ಒಂದೂ ದಕ್ಕಲಿಲ್ಲ; ಮದ್ದುಗುಂಡು ಮುಗಿದುದೇ ಬಂತು. ಆದರೆ ಕೋವಿಯೆತ್ತಿ ಗುರಿ ಹೊಡೆಯುವ ಅಭ್ಯಾಸವಾಯಿತು. ಹೀಗೆ ಮೂರು, ನಾಲ್ಕು ದಿನ ಓದಿನ ತಳ್ಳಿಯಿಲ್ಲದೆ, ಹಿರಿಯರ ಕಣ್ಣು ತಪ್ಪಿಸಿ ಬೇಟೆಯ ಅಭ್ಯಾಸದಲ್ಲಿ ತಲ್ಲೀನನಾಗಿ ಕೊಂಚ ಮಟ್ಟಿನ ಬೇಟೆಯ ಅನುಭವವನ್ನು ಪಡೆದೆ. ರಜೆ ಮುಗಿದು ಪುತ್ತೂರಿಗೆ ಹೋಗುವ ಸಮಯ ಸನ್ನಿಹಿತವಾಯಿತು. "ಅಯ್ಯೋ, ಏನು ಮಾಡುವುದು ? ಶಾಲೆಗೆ ಹೋಗದೆ ನಿರ್ವಾಹವಿಲ್ಲ. ಹೋದರೆ ನನ್ನ ಶಿಕಾರಿಯ ಹವ್ಯಾಸಕ್ಕೆ ಗತಿಯಿಲ್ಲ" - ಹೀಗೆ ದುಃಖದಲ್ಲಿದ್ದೆ. ನನ್ನನ್ನು ಕಂಡ ಹಿರಿಯರು ಮನೆಯವರನ್ನು ಬಿಟ್ಟು ಹೋಗಬೇಕಾಗಿ ಬಂದುದಕ್ಕೆ ನನಗೀ ಬೇಸರವೆಂದು ಭಾವಿಸಿದರೇ ಹೊರತು ನನ್ನ ನಿಜ ಬಣ್ಣವನ್ನು ಅರಿಯಲಿಲ್ಲ. ಇದರೆಡೆಯಲ್ಲೂ ಅಜ್ಜಯ್ಯನವರ, ತಂದೆಯವರ, ಚಿಕ್ಕತಂದೆಯವರ ಚೀಲದಿಂದ ಸಮಯ ಸಿಕ್ಕಾಗಲೆಲ್ಲ ಮದ್ದುಗುಂಡುಗಳನ್ನು ಎಗರಿಸುತ್ತಿದ್ದೆ, ಮುಂದಿನ ರಜಾ ಸಮಯದಲ್ಲಿ ಇಲ್ಲಿಗೆ ಬರುವಾಗ ಮದ್ದು - ಗುಂಡಿಲ್ಲದಿದ್ದರೆ ಹೇಗೆ ?

ಇಂಥ ದಿನ ಗಾಡಿಯಲ್ಲಿ ಪುತ್ತೂರಿಗೆ ಹೋಗುವುದೆಂದು ನಿಶ್ಚಯ ವಾಯಿತು. ತಂದೆಯವರು ಖರ್ಚಿಗೆ ಬೇಕಾದ ಹಣವನ್ನು ಲೆಕ್ಕಮಾಡಿ ಕೊಡುವವರು. ತಾಯಿಗೆ ಕೈ ಗಂಟು ಮಾಡಿ ಇಡುವ ಅಭ್ಯಾಸವಿಲ್ಲ. ಕೊಟ್ಟರೆ ಒಂದು ರೂಪಾಯಿ ಕೊಟ್ಟಾರು. ನನಗೆ ಈಡುಗಾರಿಕೆಯ ಅಭ್ಯಾಸವನ್ನು ಪುತ್ತೂರಿನಲ್ಲಿಯೂ ಮುಂದುವರಿಸಬೇಕೆಂಬ ಮಹತ್ತಾದ ಆಸೆ. ಕೋವಿಯನ್ನು ನನ್ನ ತರಗತಿಯ ಮಿತ್ರ ಜೋನ್ ಬೃಗಾಂಜನ ಮನೆಯಲ್ಲಿ ನೋಡಿದ್ದೆ. ಅದು 410ನೇ ಬೋರಿನ ತೋಟೆ ಕೋವಿ. ಆ ಕಾಲದಲ್ಲಿ ಜೋನಿಯ ತಂದೆ ಹಿರಿಯ ಬೃಗಾಂಜರು ಪುತ್ತೂರಲ್ಲೇ ಗಣ್ಯ ಕ್ರೈಸ್ತ ಧನಿಕ; ಪ್ರಸಿದ್ಧ ತಾಮ್ರದ ವ್ಯಾಪಾರಿ. ಜೋನಿಯೂ ನಾನೂ ಸಮಾನ ಗುಣದ ಮಿತ್ರರು. ಅವನು ಮನೆಯ ಮುಂದಿನ ಮಾವಿನ ಮರಕ್ಕೆ ದಾಳಿ ಇಡುತ್ತಿದ್ದ ಬಾವಲಿಗಳನ್ನೂ, ಕೆಲವೊಮ್ಮೆ ಕೊಕ್ಕರೆಗಳನ್ನೂ ತನ್ನ ಕೋವಿಯಿಂದ ಹೊಡೆಯುತ್ತಿದ್ದ. ಪರ್ಲಡ್ಕ ಬಿರುಮಲೆ ಗುಡ್ಡೆಯಲ್ಲಿ ಕಾಣ ಸಿಕ್ಕಿದ ಕೇಂಕಣ, ಪಾರಿವಾಳ, ಮುಂಗುಸಿಗಳನ್ನೂ ಹೊಡೆ ಯುತ್ತಿದ್ದುದುಂಟು. ನಾನು ಆತನ ಸ್ನೇಹವನ್ನು ಇನ್ನಷ್ಟು ಬೆಳೆಸಿದೆ. ಈ ತೋಟೆಯ ಕೋವಿಯಿಂದ ಅಭ್ಯಾಸ ಮಾಡಿದರೆ ಮುಂದಕ್ಕೆ ನಮ್ಮ ಮನೆಯವರಿಗೆ ಕಲೆಕ್ಟರರು ಪರವಾನಿಗೆ ಕೊಡಲಿರುವ ತೋಟೆಯ ಕೋವಿ ಯಲ್ಲಿ ಸರಾಗವಾಗಿ ಬೇಟೆಯಾಡಬಹುದೆಂದು ನಿಶ್ಚಯಿಸಿದೆ. ಜೋನ್ ಕೋವಿಯನ್ನೇನೋ ಕೊಟ್ಟಾನು. ಆದರೆ ನನಗೆ ಅಭ್ಯಾಸ ಮಾಡಲು ತೋಟೆಯನ್ನು ನಾನೇ ಸಂಪಾದಿಸಬೇಕಷ್ಟೆ?

ಉಪಾಯವೊಂದು ಹೊಳೆಯಿತು. ಅಳೇರಿಯ ನಮ್ಮಜ್ಜಿ ಲಕ್ಷ್ಮಮ್ಮ ನವರು ಮಕ್ಕಳೆಂದರೆ ತುಂಬಾ ಅಕ್ಕರೆಯವರು. ಮೊಮ್ಮಕ್ಕಳು ಮುಖ ಚಿಕ್ಕದು ಮಾಡಿಕೊಂಡು ಮುಂದೆ ನಿಂತಾಗೆಲ್ಲ ಅವರ ಆವಶ್ಯಕತೆಗೆ ತಕ್ಕಂತೆ ಕೊಡುಗೈಯವರಾಗಿದ್ದರು. ಶುಭಕಾರ್ಯಕ್ಕೆ ನಮ್ಮ ಇಡಿಯ ಕುಟುಂಬವೇ ಇವರ ವರದ ಹಸ್ತದ ಸಹಾಯವನ್ನು ಯಾಚಿಸುತ್ತಿತ್ತು. ಲಕ್ಷ್ಮಿ ಎಂದರೆ ಇವರು ನಮ್ಮ ಕುಟುಂಬದ ಲಕ್ಷ್ಮಿ ಎಂದು ಎಲ್ಲರಿಂದಲೂ ಮನ್ನಣೆ ಪಡೆದಿ ದ್ದರು. ನಮ್ಮಜ್ಜಿ ಸಪುರ ಶರೀರದ, ಅರಸಿನ ಬಣ್ಣದ, ಹೊಳಪಿನ ಕಣ್ಣಿನ, ಹಸನ್ಮುಖದ ಸುಂದರಿ ಮುತ್ತೈದೆ. ಅಜ್ಜನನ್ನೂ ಇವರನ್ನೂ ನೋಡಿದಾಗ

ಕೆಲವರು "ಮಗಳೇ?" ಎಂದು ಕೇಳಿದ್ದಿತ್ತು ! ಇವರು 'ಒಳ್ಳೆಯದಾಗು' ಎಂದು ಕೈಯೆತ್ತಿ ಕೊಟ್ಟು ಆಶೀರ್ವದಿಸಿದ ಯಾವ ವಿಷಯವೂ ವಿಫಲವಾಗಿಲ್ಲ. ಮೊಮ್ಮಕ್ಕಳಾದ ನಮಗೆ ಅವರ ಕೊಡುಗೈ ಧಾರಾಳತನ ಆತ್ಮೀಯ ಆಸ್ತಿಯಾಗಿತ್ತು. ಅಂತೆಯೇ ಅಜ್ಜಿಯನ್ನು ಕಂಡು ಬರೆಯಲು ಪೆನ್ನನ್ನು ಕೊಂಡುಕೊಳ್ಳಬೇಕಾಗಿದೆಯೆಂದು ಹೇಳಿ ಹಣ ಗಿಟ್ಟಿಸಿಕೊಳ್ಳುವ ಹವಣಿಕೆಯಿಂದ ಅಳೇರಿಗೆ ಹೋದೆ. ಮುಖ ಮುದುಡಿಸಿ ನಿಂತ ನನ್ನನ್ನು ಕಂಡ ಅಜ್ಜಿ ಅಕ್ಕರೆಯಿಂದ "ಎಂದು ಪುತ್ತೂರಿಗೆ ಹೋಗುವುದು?" ಎಂದು ಕೇಳಿದರು. "ನಾಳೆ ಹೋಗಬೇಕು. ಪರೀಕ್ಷೆ ಹತ್ತಿರವಾಯಿತು. ಬರೆಯಲು ನನ್ನಲ್ಲಿ ಪೆನ್ ಇಲ್ಲ. ಹೇಂಡಲಿನಲ್ಲಿಯೇ ಬರೆಯೆಂದು ತಾಯಿಯೂ, ತಂದೆಯವರೂ ಹೇಳುತ್ತಾರೆ. ಶಾಯಿ ಕುಪ್ಪಿಗೆ ಆ ಪೇನಾ ಮುಳುಗಿಸಿ ಬರೆಯುವಾಗ ತುಂಬಾ ಹೊತ್ತಾಗುತ್ತದೆ. ಕೈಯಲ್ಲಿನ ಶಾಯಿಯು ಕಾಗದಕ್ಕೆ ತಾಗಿ ಕೊಳೆಯಾದರೆ ಮಾರ್ಕು ಕಳೆಯುತ್ತಾರೆ. ಬರೆಯಲು ತುಂಬ ಸಮಯ ಹಿಡಿಯುವುದರಿಂದ ಎಣಿಸಿದಷ್ಟು ಬರೆಯಲು ಸಾಧ್ಯವಾಗುವುದಿಲ್ಲ" ಎಂದು ಅವರ ಮುಂದೆ - ನಿಜವಾದ ಆಸಕ್ತಿಯುಳ್ಳ ವಿದ್ಯಾರ್ಥಿಯಂತೆ - ಗೋಗರೆದೆ. ಇದನ್ನು ಕೇಳಿದ ಅವರು "ಒಂದು ಪೆನ್ನಿಗಾಗಿ ಚಿಂತಿಸುವುದೇ? ಸುಮ್ಮನೇಕೆ ಮರುಗುತ್ತಿ? ಪೆನ್ನಿಗೆ ಎಷ್ಟು ದುಡ್ಡು ಬೇಕೋ ನಾನು ಕೊಡುತ್ತೇನೆ. ಈಗ ಬಾ, ತಿಂಡಿ ತಿನ್ನು" ಎಂದು ಸಮಜಾಯಿಸಿದರು. ನಾನು ತಿಂಡಿ ತಿನ್ನುತ್ತಿದ್ದಾಗ ಬೆಳ್ಳಿಯ ಐದು ರೂಪಾಯಿಗಳನ್ನು ತಂದು ನನ್ನ ಕಿಸೆಗೆ ತುರುಕಿ, "ನನ್ನ ಮೊಮ್ಮಗ ಗಟ್ಟಿಗ, ಇದರಿಂದ ಕೀರ್ತಿಯನ್ನು ತರಬೇಕು; ಮರೆಯಬೇಡ. ನಿನ್ನ ಅಭ್ಯಾಸವನ್ನು ಚೆನ್ನಾಗಿ ಮಾಡು. ದೇವರು ನಿನ್ನನ್ನು ಉತ್ತಮ ಶ್ರೇಣಿಯಲ್ಲಿ ಉತ್ತೀರ್ಣಗೊಳಿಸುತ್ತಾನೆ" ಎಂದು ಹೃತ್ಪೂರ್ವಕ ಹರಸಿದರು. ಆ ನುಡಿಗಳನ್ನು ಕೇಳುತ್ತ, ಹಣ ದೊರೆತದ್ದರಿಂದ ಸಂತೋಷವಾಗಿದ್ದ ನನ್ನ ಮನಸ್ಸು ಶಿಕಾರಿ ಅಭ್ಯಾಸದ ಕನಸು ಕಾಣುತ್ತಿತ್ತು!

ಪುತ್ತೂರಿಗೆ ಬಂದ ಮೇಲೆ ಜೋನ್ ಬ್ರಗಾಂಜನ ಒಡನಾಟ ತೊಡಗಿತು. ಪರೀಕ್ಷೆಯ ಕಡೆಗೆ ಗೊಡವೆಯಿಲ್ಲದೆ, ಶಾಲೆಗೂ ಹೋಗದೆ ಪುತ್ತೂರಿನ ಸಂದು ಗೊಂದುಗಳಲ್ಲಿ ಕೋವಿ ಹಿಡಿದುಕೊಂಡು ನಾವಿಬ್ಬರೂ ತಿರುಗಿದ್ದೇ ತಿರುಗಿದ್ದು. ಓದದೆ ಪರೀಕ್ಷೆಗೆ ಹೋಗುವುದು ಹೇಗೆ? ಏಕೆ?

ಫಲಿತಾಂಶವೇನಾದೀತೆಂಬುದು ನಿಶ್ಚಯ! ಮತ್ತೆ ಆ ಪರೀಕ್ಷೆಗೆ ಹಣಕಟ್ಟುವುದೇಕೆ? ಅದಕ್ಕಾಗಿ ಮನೆಯಿಂದ ತರಿಸಲಾಗಿದ್ದ ಹಣವನ್ನು ತೋಟಾಗಳಿಗೆ, ಕಾಫಿಗೆ ವಿನಿಯೋಗಿಸಿ,ಶಿಕಾರಿ ಹವ್ಯಾಸದಲ್ಲಿ ಪಳಗಿ ವಿದ್ಯಾಭ್ಯಾಸದಲ್ಲಿಗೋತಾ ಹೊಡೆದೆ. ಜೋಸಿಯು ಗೋವೆಗೆ ಓಡಿದ! ನಾನೇನು ಮಾಡುವುದು? ಅಳೇರಿಯಲ್ಲಿ ಅಜ್ಜಿಯು ರಕ್ಷಣೆ ಕೊಡಬಹುದು. ಆದರೆ ಹೆಣ್ಣು -ಹೆಂಗಸು; ಅಜ್ಜಯ್ಯನವರ ಮಾತು ಮೀರುವಂತಿಲ್ಲ. ನಾನು ಪುನಃ ಶಾಲೆಗೆ ಹೋಗಲೇಬೇಕೆಂದು ಹಿರಿಯರು ಹೇಳಿದರೆ ಅಜ್ಜಿ ಬೇಡವೆಂದು ತಡೆಯಲಿಕ್ಕಿಲ್ಲ. ನಾನು ಪುನಃ ಶಾಲೆಗೆ ಹೋಗುವಂತಿಲ್ಲ; ಏಕೆಂದರೆ ನಾನು ಕಲಿತ ಪಠ್ಯ ಪುಸ್ತಕಗಳನ್ನೂ ಮಾರಿಯಾಗಿತ್ತು. ಇದನ್ನು ತಿಳಿದರೆ ಬೆನ್ನು ಹುಡಿಯಾಗುವುದರಲ್ಲಿ ಸಂದೇಹವಿಲ್ಲ. ಈ ದುರ್ಬುದ್ಧಿಗೆ ಅಜ್ಜಿಯ ಪ್ರೋತ್ಸಾಹವೂ ಇರಲಿಕ್ಕಿಲ್ಲ. ಇಷ್ಟೆಲ್ಲ ಎಣಿಸಿಕೊಂಡು ನಮ್ಮ ತಾಯಿಯ ತಂದೆ ಮನೆಯಿದ್ದ ಬೆಳ್ಮಾರೆಗೆ ಕಂಬಿಕಿತ್ತೆ. ಅಲ್ಲಿಯೂ 'ಸೆಟ್ಟಿಯೇನು ಮಾಡುತ್ತಾನೆ? ಅಳೆಯುತ್ತಾನೆ, ಸುರಿಯುತ್ತಾನೆ' ಎಂಬಂತೆ ನನ್ನ ಮಾಮೂಲು ಕಸುಬು ಬೇಟೆ. ಚಿಕ್ಕತಂದೆ ತ್ಯಾಂಪಣ್ಣ ಶೇಕರ ಕೋವಿಯು ಉಪಯೋಗಿಸುವವರಿಲ್ಲದೆ ಮೂಲೆ ಸೇರಿತ್ತು. ಅದಕ್ಕೆ 'ತ್ರೀ ಇನ್ ವನ್' ಎಣ್ಣೆ ಹಚ್ಚಿ ಶುದ್ಧಿಗೊಳಿಸಿ; ಪೆಟ್ಟಿಗೆಗಳಲ್ಲಿ ತುಂಬಿದ್ದ ತೋಟೆಯನ್ನು ಬೇಕಾದಷ್ಟು ಕಿಸೆಗೆ ತುಂಬಿಸಿ ರಜಾ ಸಮಯವನ್ನು ಬೇಟೆಯಲ್ಲೇ ಕಳೆದೆ. ಬೆಳ್ಮಾರೆಯಿಂದ ಐವರ್ನಾಡು ತನಕ ರಾತ್ರಿ ಹಗಲು ಬೇಟೆಯೇ ಕಸುಬಾಗಿ, ಹಗಲು ಶಿಕಾರಿಯೊಂದರಲ್ಲಿ ಹಂದಿಯೊಂದನ್ನು ಕೊಂದು ಮನೆಯವರಿಂದ 'ಸೈ' ಎನಿಸಿಕೊಂಡೆ. ಹೀಗೆ ರಜಾ ದಿನಗಳು ಸವೆದುವು. ತಾಯಿಯವರ ಒತ್ತಾಯದಿಂದ ನಾನು ಪಿಲಿಮಜಲಿಗೆ ಹೋಗಲೇಬೇಕಾಯಿತು. ಅಷ್ಟರಲ್ಲಿ, ನನ್ನ ಗೆಳೆಯ ಜೋನ್ ಗೋವೆಗೆ ಓಡಿದ್ದ ವಿಷಯ ಮನೆಯವರಿಗೆ ಗೊತ್ತಾಗಿತ್ತು. ನಾನೂ ಅವನ ದಾರಿಯನ್ನೇ ಹಿಡಿಯಲು ಹೇಸುವವನಲ್ಲವೆಂದು ಭಾವಿಸಿದ ಹಿರಿಯರು ನನಗೆ ಹೊಡೆದು, ಬಡಿದು ಶಿಕ್ಷೆ ಕೊಡದಿದ್ದರೂ ನನ್ನಲ್ಲಿ ಯಾರಿಗೂ ವಿಶ್ವಾಸ ಉಳಿದಿಲ್ಲವೆಂದು ತಿಳಿಯಲು ನನಗೆ ಹೆಚ್ಚು ಸಮಯ ಬೇಕಾಗಲಿಲ್ಲ!

ತಂದೆಯವರು ಆಗ ನನ್ನಲ್ಲಿ ಮಾತಾಡುವುದನ್ನೇ ಬಿಟ್ಟಿದ್ದರು. ತಾಯಿಯಾದರೋ ಪ್ರಾಯಕ್ಕೆ ಬಂದ ಮಗನನ್ನು ಎದುರು ಹಾಕಿಕೊಳ್ಳುವುದೇಕೆಂದು ಬೇಕೋ ಬೇಡವೋ ಎಂಬಂತಿದ್ದರೆ ಅಳೇರಿಯಲ್ಲಿ ಅಜ್ಜಿಯೊಬ್ಬರೆ ನನ್ನನ್ನು ಮುದ್ದು ಮಾಡುವವರು! ಅಜ್ಜಯ್ಯನವರಿಗೆ, ತಂದೆ ತಾಯಿ-ಮನೆಯ ಹಿರಿಯರಿಗೆಲ್ಲ ನಾನು ನನ್ನ ಹಿರಿಯರಂತೆ ವಿದ್ಯಾವಂತನಾಗಿ ದೊಡ್ಡ ಹುದ್ದೆಯನ್ನು ಅಲಂಕರಿಸಬೇಕೆಂಬ ಆಸೆಯಿತ್ತು. ಅಂಥದರಲ್ಲಿ ನಾನು ಕೋವಿ ಹಿಡಿದು ತಿರುಗುವ ಅಪಾಪೋಲಿಯಾದರೆ ಅವರು ಸಹಿಸಿಯಾರೆ? ನಾನೇನೂ ಫಡಪೋಶಿ ವಿದ್ಯಾರ್ಥಿಯಾಗಿರಲಿಲ್ಲ. ಆದರೆ ಈ ಬೇಟೆಯ ಗೀಳು ನನ್ನ ಜೀವನದ ತಿರುವನ್ನೇ ಬದಲಿಸಿತು. ●

# ಮೊದಲ ಹುಲಿ ಶಿಕಾರಿ

'ಮೆಟ್ರಿಕ್ಯುಲೇಶನ್' ತೇರ್ಗಡೆಯಾಗದೆಯೇ ನನ್ನ ಶಾಲಾದಿನಗಳು ಮುಗಿದುವು. ಹಿಂದೆ, ಮಲ್ಲು ಮಾತ್ರ ನನ್ನ ತೈನಾತಿಯಾಗಿದ್ದರೆ ಸ್ಕೂಲು ಬಿಟ್ಟ ಬಳಿಕ ಊರಿನ ತುಂಡು ಜವ್ವನಿಗರು ನನಗೆ ನೆರವು ನೀಡಲು ಮುಂದೆ ಬಂದರು. ಬೇಟೆಯ ಎಡೆಯಲ್ಲಿ ಊರ ಪಂಚಾಯತಿಕೆಯ ಕೆಲಸ! ಇದಕ್ಕೆ ಕುಂಞಿಮೋನುವಿನ ತುಂಬು ಸಹಕಾರ. ಪಂಚಾಯತಿಕೆಯಲ್ಲಿ ಆತ ಸೂಚಿಸಿದಂತೆ ತೀರ್ಪು! ಇದರಿಂದ ವಾದಿ ಪ್ರತಿವಾದಿಯವರಿಂದ ಕುಂಞಿಮೋನು ಏನನ್ನಾದರೂ ಗಿಟ್ಟಿಸುತ್ತಿದುದ್ದಲ್ಲದೆ ನನಗೂ ಕೈಗಡವಾಗಿ ಬೇಕಾದಾಗ ಕೊಂಚ ಹಣ ಬರುತ್ತಿತ್ತು. ಪಂಚಾಯತಿಕೆ ಮಾಡಿ ನೀಡಿದ ತೀರ್ಪಿಗೆ ಸಮ್ಮತಿಸದಿದ್ದರೆ ಇದ್ದೇ ಇರುವರಲ್ಲ ನನ್ನ ಕೂಟದ ತುಂಡು ಜವ್ವನಿಗರು ? ಸೋಮಾರಿ ಸಂಘದ ಸರಪಂಚರು ? ಒಪ್ಪದವನಿಗೆ ಕಿರುಕುಳ ನೀಡಿ ಒಪ್ಪಿಸುತ್ತಿದ್ದರು. ಕುಂಞಿಮೋನು ಹೇಳಿದ ತೀರ್ಪು ನನ್ನ ಪಾಲಿಗೆ ನ್ಯಾಯ ಸಮ್ಮತ. ನಾನು ಹೇಳಿದ್ದನ್ನು ವಾದಿ-ಪ್ರತಿವಾದಿಗಳು ಒಪ್ಪಬೇಕು! ನಾನು ಗುತ್ತಿನವರ ಮಗ, ಊರ ಪಟೇಲರ ಮೊಮ್ಮಗ. ಅಂತೂ ಮನೆಯವರಿಗೆ ಬೇಡವಾದರೂ ನನ್ನ ಸುಲ್ತಾನ ದರ್ಬಾರು ಮುಂದುವರಿಯಿತು. ಈ ಸಮಯದಲ್ಲಿ ಮನೆಯವರಿಗೆ ಹನ್ನೆರಡು ಬೋರಿನ ತೋಟಿಕೋವಿಯೂ ಕಲೆಕ್ಟರರಿಂದ ಸಿಕ್ಕಿತ್ತು. ನಾನೂ ಶಿಕಾರಿಯಲ್ಲಿ ಪಳಗಿ ಹಲವು ಜಿಂಕೆ, ಕಡವೆ, ಹಂದಿಗಳನ್ನು ರಾತ್ರಿ, ಹಗಲು ಶಿಕಾರಿಯಲ್ಲಿ ಕೊಂದಾಗಿತ್ತು. ನನ್ನ ಒಡನಾಡಿ ಮಿತ್ರರಿಗೂ ನಾನು ಒಳ್ಳೆಯ ಈಡುಗಾರನೆಂಬ ವಿಶ್ವಾಸವುಂಟಾಗಿತ್ತು. ಅವರಿಗೆ ಮೈಮುರಿದು ದುಡಿಯದೆ ಕೇವಲ ನನ್ನ ಹಿಂಬಾಲಕರಾಗಿ ಹೋದಹೋದಲ್ಲಿ ಪುಕ್ಕಟೆಯಾಗಿ ಪುಷ್ಕಳ ಊಟ, ಕಾಫಿ, ಬೀಡಿ, ಎಲೆ ಅಡಿಕೆ ಸಿಕ್ಕುತ್ತಿತ್ತು. ಹೀಗೆ ಊರಲ್ಲಿ ನಾನೊಬ್ಬ 'ಜನ' ಆದೆ!

ಕೊಂಬಾರಿನಲ್ಲಿ ಹುಲಿಗಳ ಉಪದ್ರವ ಜಾಸ್ತಿ. ಮನೆಯ ಬಳಿಯ ಹಟ್ಟಿಯಿಂದಲೇ ದನಕರುಗಳನ್ನು ಹುಲಿ ಹಿಡಿಯುತ್ತಿತ್ತು. ಹುಲಿ ಬೇಟೆಗಾಗಿ ಒಮ್ಮೆ ಅಗತ್ಯವಾಗಿ ಬರಬೇಕೆಂದು ಕೊಂಬಾರಿನಿಂದ, ನನ್ನ ಗೆಳೆಯ,

ರಾಮು ಪೂಜಾರಿ ಹೇಳಿ ಕಳುಹಿಸಿದ. ನಾನು ಇದಕ್ಕೆ ಏನೆಂದು ಉತ್ತರ ಕೊಡಲಿ ? ಹುಲಿಗೆ ಹೊಡೆಯುವುದೆಂದರೆ ತಮಾಷೆಯೆ ? ಬಡ ಜೋರನನ್ನು ಪಂಚಾಯತಿಕೆಗೆ ಒಪ್ಪಿಸಿದಂತೆಯೇ? ಜೀವದ ಪ್ರಶ್ನೆ ! ಕರೆಗೆ ಓಗೊಡದಿದ್ದರೆ ನನ್ನ ಹಿರಿಮೆಗೆ ಕುಂದು. ಓಗೊಟ್ಟು ಹೋದರೆ ದಾರಿಯಲ್ಲಿ ಹೋಗುವ ಮಾರಿಯನ್ನು ಮನೆಗೆ ಆಹ್ವಾನಿಸಿದಂತೆ ! ಹುಲಿ ಹೊಡೆಯುವ ಮಾತಿರಲಿ, ಹುಲಿಯ ರೋಮವನ್ನೂ ಅಂದಿನ ತನಕ ಕಂಡವನು ನಾನಲ್ಲ. ಕೊಂಬಾರಿ ನವರ ಕೇಳಿಕೆಗೆ ಸಮ್ಮತಿಸದಿದ್ದರೆ ನನ್ನ ದೊಡ್ಡಸ್ತಿಕೆಯನ್ನು ದಡೆಗೆ ಇಟ್ಟು ತೂಗಿದಂತೆ. ಹೋಗಲು ಮನಸ್ಸು ಹಿಂದೇಟು ಹೊಡೆಯುತ್ತಿದೆ. ಏನು ಮಾಡುವುದು ? ನನ್ನ ಸಂಘದ ಸರಸಂಚರಲ್ಲಿ ಬುದ್ಧಿವಂತ, ಕೂಟದಲ್ಲಿ ಯೋಗ್ಯನೆನಿಸಿದ್ದ ರಾಮಣ್ಣನಲ್ಲಿ ಈ ಸಂಗತಿಯನ್ನು ತಿಳಿಸಿದೆ. ಅವನು ಯೋಚಿಸಿ, "ಹೋಗೋಣ; ಹುಲಿ ಎದುರಾದರೆ ಹೊಡೆಯಲೇಬೇಕೆಂದು ಏನು ಕಟ್ಟಳೆಯಿದೆಯೆ ? ಹುಲಿಯ ಕಣ್ಣು ಕಂಡೊಡನೆ ಲೈಟು ತಪ್ಪಿಸಿದ ರಾಯಿತು. ಹೋಗದಿದ್ದರೆ ನಮ್ಮ ಮರ್ಯಾದೆಗೆ ಕುಂದು" ಎಂದ. ಒಟ್ಟಿ ನಲ್ಲಿ ಕೊಂಬಾರಿಗೆ ಹೊರಡುವ ನಿರ್ಧಾರ ಮಾಡಿದೆವು.

ರಾತ್ರಿ ಸುಂಕದಕಟ್ಟೆಗೆ ಬಂದು ಅಲ್ಲಿನ ಹೋಟೆಲಲ್ಲಿ ಚಾ ಕುಡಿದು ಲೈಟು ಕಟ್ಟಿ ಒಬ್ಬೊಬ್ಬರೇ ಮಾರ್ಗಕ್ಕೆ ಬಂದೆವು. ಹೋಟೆಲಿನವನಿಗೆ ಹಣ ಕೊಡಲು ನಮ್ಮಲ್ಲಿ ಇದ್ದರಲ್ಲವೇ? ನಮ್ಮೊಡನೆ ಕುಂಞಿಮೋನುವಿ ನಂತಹ ಪೋಕರಿಗಳು ಇರುವಾಗ ಕರೆದು ಹಣ ಕೇಳುವ ಧೈರ್ಯ ಹೋಟೆಲಿನ ಯಜಮಾನನಿಗೆಲ್ಲಿ? ಮುಂದೊತ್ತಿ ದಾರಿಯಲ್ಲಿ ಪಳ್ಳಿಕಂಡದ ಪಲ್ಕೆಗೆ ಲೈಟು ಬೀರಿದಾಗ ಪಲ್ಕೆಯ ಕೊನೆಯಲ್ಲಿದ್ದ ಕಡವೆಯ ಹಿಂಡೋ ಜಿಂಕೆಯ ಹಿಂಡೋ ದಡಬಡವೆಂದು ಓಡಿದ ಸದ್ದು ಕೇಳಿಸಿತು. "ಸಿಕ್ಕಿದ ಕಡವೆಯೂ ದಕ್ಕಲಿಲ್ಲವಲ್ಲಾ" ಎಂದು ಕುಂಞಿಮೋನು ಕೈ ಹಿಸುಕಿಕೊಂಡ. ಪಳ್ಳಿಕಂಡ ದಾಟಿ ರಾಮು ಪೂಜಾರಿಯ ಮನೆಗೆ ಬಂದೆವು. ಆತ ನಮಗಾಗಿ ತಯಾರು ಮಾಡಿ ಇಟ್ಟಿದ್ದ ಕೋಳಿ ರೊಟ್ಟಿಯನ್ನು ಮುಗಿಸಿದೆವು. ಶಿಕಾರಿಗೆ ಹೊರಡು ವಾಗ ಕುಂಞಿಮೋನು ಗೊಣಗಿದ, "ನಿಮಗೆ ಗಡದ್ದಾಗಿ ಕೋಳಿ ಪದಾರ್ಥ ಸಿಕ್ಕಿದೆ. ನನಗೆ ಒಣಕಲು ರೊಟ್ಟಿ ! ಈಗ ಏನಾದರೂ ಹೊಡೆದೇ ತೀರ ಬೇಕು" ಎಂದು. ತಿನ್ನಲಾಗುವ ಮೃಗವು ಸಿಕ್ಕಿದರೆ ಬಿಡುವಷ್ಟು ದಯಾಪರರು

ಅಂದಿನ ನಮ್ಮ ಕೂಟದಲ್ಲಿ ಯಾರೂ ಇರಲಿಲ್ಲ. ನಾವು ಮುಂದೆ ಹೋಗುತ್ತ ಕೊಂಬಾರು ಹೊಳೆ ದಾಟಿ ಹಿಂದಿನ ದಿನ ಹಟ್ಟಿಗೆ ಹುಲಿನುಗ್ಗಿ ಕರುವನ್ನು ಎಳೆದುಕೊಂಡು ಹೋಗಿದ್ದ ಗೌಡನ ನೆರೆಮನೆಗೆ ಬಂದೆವು. ಆ ಹುಲಿಯ ಗಾತ್ರವನ್ನು ಅರಿತು ಅದನ್ನು ಹೊಡೆಯುವ ಬಗ್ಗೆ ನಿರ್ಧಾರಕ್ಕೆ ಬರುವುದೆಂದು ನಮ್ಮೊಳಗೆ ತೀರ್ಮಾನವಾಯಿತು. ಹುಲಿ ದೊಡ್ಡದೆಂದಾರೆ ಅದರ ತಳ್ಳಿಯೇ ನಮಗೆ ಬೇಡ ಎಂದುಕೊಂಡೆವು.

ನಮ್ಮ ಪರಿಚಯದವನಾದ ಸಾಂತ ಗೌಡನ ಮನೆಯ ತಡಿಕೆ ಯೆಡೆಯಿಂದ ಚಿಮಿಣಿಯ ಬೆಳಕು ಕಾಣುತ್ತಿತ್ತು. ನಾವು ಆ ಮನೆಯ ಬಾಗಿಲು ತಟ್ಟಿದೆವು. ಅವಸರದಿಂದ ಎದ್ದ ಸಾಂತ ಗೌಡ ಬಾಗಿಲನ್ನು ತೆರೆದು ಸಂಕೋಚದಿಂದ ನಮ್ಮನ್ನು ಬರಮಾಡಿಕೊಂಡ. ನಮ್ಮ ಆ ದೊಡ್ಡ ಗುಂಪಿಗೆ ಅವನ ಕಿರುಜಗಲಿಯಲ್ಲಿ ಸ್ಥಳವಿಲ್ಲದುದನ್ನು ಕಂಡು ಅಂಗಳದಲ್ಲೆ ನಿಂತೆವು. ನಾನೂ ಕುಂಞಿಮೋನುವೂ ಜಗಲಿಯೇರಿ ಸುತ್ತಲೂ ದಿಟ್ಟಿಸಿದೆವು. ನಮ್ಮ ಬರವನ್ನು ಅರಿತು ಮನೆಯಾಕೆ ಚಾಪೆಯಿಂದ ಎದ್ದು, ಅಲ್ಲೆ ಮುದುಡಿ ಕುಳಿತಿದ್ದಳು. ಬಳಿಯಲ್ಲಿದ್ದ ಮಗು ಇನ್ನೂ ನಿದ್ರಿಸುತ್ತಿತ್ತು. ಅದರ ಪಕ್ಕದಲ್ಲಿ ಕೊಳಕು ನಾಯಿಯೂ ಆಸರೆ ಪಡೆದಿದ್ದುದನ್ನು ಕಂಡ ಕುಂಞಿಮೋನು ಹೇಸಿದವನಂತೆ ಕ್ಯಾಕರಿಸಿ ಉಗುಳಿದ! ಬ್ಯಾರಿಗೆ ಅಸಮಾಧಾನವಾದುದನ್ನು ಕಂಡು ಸಾಂತ ಗೌಡನು ಮನೆಯ ಪರಿಸ್ಥಿತಿಯನ್ನು ವಿಶದೀಕರಿಸುವವನಂತೆ ನುಡಿದ - "ಸಾಹುಕಾರರೇ, ಏನು ಮಾಡಲಿ? ನಾಯಿಯನ್ನೂ ಬಳಿಯಲ್ಲಿ ಸೇರಿಸಿಕೊಳ್ಳದಿದ್ದರೆ ಅದೂ ಹುಲಿಯ ಪಾಲಾದಂತೆ! ಬೇರೆ ಉಪಾಯ ವಿಲ್ಲದಕ್ಕೆ ಹೀಗೆ ಮಾಡಿದೆವು. ನೋಡಿ, ನಿನ್ನೆ ತಾನೇ ನನ್ನ ತಮ್ಮನ ಮನೆ ಯಿಂದ, ರಾತ್ರಿ ಹೊತ್ತಿನಲ್ಲಿ ಕರುವೊಂದನ್ನು ಕೊಟ್ಟಿಗೆಯಿಂದಲೇ ಹುಲಿ ಎತ್ತಿಕೊಂಡು ಹೋಯಿತು" ಎಂದು. ಹಾಗೆ ಅವನು ವರ್ಣಿಸುತ್ತಾ ಮಾತಿನ ಮಧ್ಯೆ ಹುಲಿಯ ಹೆಜ್ಜೆಯು ಗೇಣು ಗಾತ್ರವಿದೆಯೆಂದುದ್ದನ್ನು ಕೇಳಿ ನನಗೆ ಒಳಗೊಳಗೆ ಎದೆ ಡವಗುಟ್ಟತೊಡಗಿತು. 'ಹೆದರಿದೆನೆಂದು ತೋರಿಸಿ ಕೊಳ್ಳಬಹುದೆ? ನನ್ನ ಬಂಟತನಕ್ಕೆ ಬೆಲೆಕಟ್ಟಲು ಅವಕಾಶ ಕೊಡುವು ದುಂಟೆ?' ಎಂದುಕೊಂಡು ಇಲ್ಲದ ನಗುವನ್ನು ಬರಿಸಿ ಮುಗುಳ್ನಗುವಿನ ಪ್ರದರ್ಶನದ ವ್ಯರ್ಥ ಸಾಹಸದಲ್ಲಿದ್ದೆ! ಅಲ್ಲಿಂದ ಒಮ್ಮೆ ಬೇಗ ಹೋದರೆ ಸಾಕೆಂಬಂತೆ ಕಾಲು ಕೀಳುವ ಆಸೆಯಿಂದ ಶಿಕಾರಿಗೆ ಹೊರಡಲು ಅಣಿಯಾದೆವು.

ಒಂದಿಗೆ ಸಾಂತ ಗೌಡನನ್ನೂ ಕರೆದೆವು. ಆತನು ಪತ್ನಿಯತ್ತ ನೋಡಿ ಜಾಗ್ರತೆಯಿಂದಿರುವಂತೆ ಹೇಳಿ ಕೈಗೆ ಸಿಕ್ಕ ಬಡಿಗೆಯನ್ನು ಹಿಡಿದು ಕೊಂಡು ನಮ್ಮೊಡನೆ ಹೆಜ್ಜೆ ಹಾಕಿದ. ಸಾಂತ ಗೌಡನ ಮನೆಯಿಂದ, ನಾವು ಲೈಟು ಹಾಕುತ್ತ, ಸುತ್ತಿ ಬಳಸಿ ಒಂದು ಫರ್ಲಾಂಗಿನಷ್ಟು ದೂರ ನಡೆದಿರಬಹುದು. "ಅಯ್ಯೋ" ಎಂಬ ಬೊಬ್ಬೆ ಕೇಳಿಸಿತು! "ಅಯ್ಯಯ್ಯೋ, ಹುಲಿ ಮನೆಗೆ ನುಗ್ಗಿತು, ಬನ್ನಿ, ಬಿಡಿಸಿ, ಸತ್ತೆವ್ರೋ ಸತ್ತೆವು! ಹೋ, ಹಿಡಿ, ಹಿಡಿ" ಎಂಬ ಕಿರುಚಾಟ ಕೇಳುವಾಗ ನಮ್ಮ ಕಾಲಿನ ಬಲವೇ ಉಡುಗಿದಂತಾ ಯಿತು. ಸಾಂತ ಗೌಡನ ಅಳಲುವಿಕೆಗಂತೂ ತಡೆಯೇ ಇಲ್ಲ- "ನಿಮ್ಮೊಂದಿಗೆ ನಾನು ಬಂದು ಮನೆಯಲ್ಲಿದ್ದ ಮಗುವನ್ನೇ ಹುಲಿಯ ಬಾಯಿಗೆ ಕೊಟ್ಟಂತಾ ಯಿತಲ್ಲಾ! ಅಯ್ಯೋ ದುರದೃಷ್ಟವೆ, ಅಲ್ಲದಿದ್ದರೆ ಅವಳು ಹೀಗೆ ಆರ್ಭಟಿ ಕೊಡುತ್ತಿರಲಿಲ್ಲ" ಎಂಬುದನ್ನು ಕೇಳಿ ನನ್ನ ಮೇಲೆ ತಣ್ಣೀರು ಸುರಿದಂತಾ ಯಿತು. ಚಲಿಸಲು ಕಾಲೇ ಬರುವುದಿಲ್ಲ. ಸಾಂತ ಗೌಡನ ಮನೆಯತ್ತಣಿಂದ ಕೂಗು ಕೇಳುತ್ತಲೇ ಇದೆ. "ಅಯ್ಯೋ ಕೈಯಿಂದ ತುತ್ತುಕೊಟ್ಟು ಸಾಕಿದೆನಲ್ಲಾ, ಅದು ಹುಲಿಯ ಪಾಲಾಯಿತಲ್ಲ; ಓ, ನಮ್ಮ ಹಣೆಬರಹವೇ" ಎಂದು ರೋದಿಸುತ್ತಿದ್ದ ಹೆಣ್ಣಿನ ಧ್ವನಿ ಸಾಂತ ಗೌಡನ ಸಂದೇಹವನ್ನು ನಮ್ಮಲ್ಲೂ ಬಲಪಡಿಸುವಂತಿತ್ತು. ಬೊಬ್ಬೆಯು ಸಾಂತನ ಮನೆಯಿಂದ ಇನ್ನೂ ಕೇಳಿಸುತ್ತಲೇ ಇದೆ. ತ್ವರಿತಗತಿಯಿಂದ ನಾವೆಲ್ಲ ಅಲ್ಲಿಗೆ ತಲುಪಿದೆವು. "ಅಯ್ಯೋ ಕುಟ್ಟಾ, ಬಾಯಿಯ ಅಗುಳನ್ನು ನಿನಗೆ ತಿನ್ನಿಸಿ ಸಾಕಿದೆನಲ್ಲಾ ನಿನ್ನನ್ನು ಹುಲಿ ಕೊಂಡುಹೋಯಿತಲ್ಲಾ" ಎಂದು ಮನೆಯಾಕೆಯ ಅಳುವಿನ ಧ್ವನಿ ಸ್ಪಷ್ಟವಾಗಿ ಕೇಳಿಸಿತು. ಆದಷ್ಟು ಧೈರ್ಯ ಮಾಡಿಕೊಂಡು ಅಂಗಳಕ್ಕೆ ಬಂದು ತಡಿಕೆಯತ್ತ ಲೈಟು ಹಾಕಿದಾಗ ಕಂಡದ್ದೇನು?

ತಡಿಕೆ ಬಿಚ್ಚಿ ಒಂದಾಳು ಗಾತ್ರದ ಬಿರುಕು ಕಾಣುತ್ತಿದೆ. ನಾವು ಹೊರಗಿನಿಂದ ಎಷ್ಟು ಒದರಿ ಕರೆದರೂ ಭಯಭೀತಳಾಗಿ ಅಳುತ್ತಿದ್ದ ಗೌಡತಿ ಒಳಗಿನಿಂದ ಚಿಲಕ ತೆಗೆಯುತ್ತಿಲ್ಲ. ಹೇಗಾದರೂ ಆಕೆಗೆ ಧೈರ್ಯನೀಡಿ ಬಾಗಿಲು ತೆಗೆಯಿಸಬೇಕಾದರೆ ನಾವು ಪಟ್ಟ ಶ್ರಮ ನಮಗೇ ವೇದ್ಯ! ಅಂತೂ, ಆಕೆ ಬಾಗಿಲು ತೆರೆದಾಗ ಆತುರಾತುರವಾಗಿ ಒಳನುಗ್ಗಿದ ನಾವು ಕಂಡುದೇನು? ಬೆಪ್ಪಾಗಿ ಗೋಡೆಗೆ ಅಂಟಿ ಕುಳಿತ ಮಗು ತೆರೆದ ಕಣ್ಣನ್ನು ಮುಚ್ಚದೇ

ಒಂದಿಗೆ ಸಾಂತ ಗೌಡನನ್ನೂ ಕರೆದೆವು. ಆತನು ಪತ್ನಿಯತ್ತ ನೋಡಿ ಜಾಗ್ರತೆಯಿಂದಿರುವಂತೆ ಹೇಳಿ ಕೈಗೆ ಸಿಕ್ಕ ಬಡಿಗೆಯನ್ನು ಹಿಡಿದು ಕೊಂಡು ನಮ್ಮೊಡನೆ ಹೆಜ್ಜೆ ಹಾಕಿದ. ಸಾಂತ ಗೌಡನ ಮನೆಯಿಂದ, ನಾವು ಲೈಟು ಹಾಕುತ್ತ, ಸುತ್ತಿ ಬಳಸಿ ಒಂದು ಫರ್ಲಾಂಗಿನಷ್ಟು ದೂರ ನಡೆದಿರಬಹುದು. "ಅಯ್ಯೋ" ಎಂಬ ಬೊಬ್ಬೆ ಕೇಳಿಸಿತು ! "ಅಯ್ಯಯ್ಯೋ, ಹುಲಿ ಮನೆಗೆ ನುಗ್ಗಿತು, ಬನ್ನಿ, ಬಿಡಿಸಿ, ಸತ್ತೆವೋ ಸತ್ತೆವು! ಹೋ, ಹಿಡಿ, ಹಿಡಿ" ಎಂಬ ಕಿರುಚಾಟ ಕೇಳುವಾಗ ನಮ್ಮ ಕಾಲಿನ ಬಲವೇ ಉಡುಗಿದಂತಾಯಿತು. ಸಾಂತ ಗೌಡನ ಅಳಲುವಿಕೆಗಂತೂ ತಡೆಯೇ ಇಲ್ಲ- "ನಿಮ್ಮೊಂದಿಗೆ ನಾನು ಬಂದು ಮನೆಯಲ್ಲಿದ್ದ ಮಗುವನ್ನೇ ಹುಲಿಯ ಬಾಯಿಗೆ ಕೊಟ್ಟಂತಾಯಿತಲ್ಲಾ! ಅಯ್ಯೋ ದುರದೃಷ್ಟವೆ, ಅಲ್ಲದಿದ್ದರೆ ಅವಳು ಹೀಗೆ ಆರ್ಭಟಿ ಕೊಡುತ್ತಿರಲಿಲ್ಲ" ಎಂಬುದನ್ನು ಕೇಳಿ ನನ್ನ ಮೇಲೆ ತಣ್ಣೀರು ಸುರಿದಂತಾಯಿತು. ಚಲಿಸಲು ಕಾಲೇ ಬರುವುದಿಲ್ಲ. ಸಾಂತ ಗೌಡನ ಮನೆಯತ್ತಣಿಂದ ಕೂಗು ಕೇಳುತ್ತಲೇ ಇದೆ. "ಅಯ್ಯೋ ಕೈಯಿಂದ ತುತ್ತುಕೊಟ್ಟು ಸಾಕಿದೆನಲ್ಲಾ, ಅದು ಹುಲಿಯ ಪಾಲಾಯಿತಲ್ಲ; ಓ, ನಮ್ಮ ಹಣೆಬರಹವೇ" ಎಂದು ರೋದಿಸುತ್ತಿದ್ದ ಹೆಣ್ಣಿನ ಧ್ವನಿ ಸಾಂತ ಗೌಡನ ಸಂದೇಹವನ್ನು ನಮ್ಮಲ್ಲೂ ಬಲಪಡಿಸುವಂತಿತ್ತು. ಬೊಬ್ಬೆಯು ಸಾಂತನ ಮನೆಯಿಂದ ಇನ್ನೂ ಕೇಳಿಸುತ್ತಲೇ ಇದೆ. ತ್ವರಿತಗತಿಯಿಂದ ನಾವೆಲ್ಲ ಅಲ್ಲಿಗೆ ತಲುಪಿದೆವು. "ಅಯ್ಯೋ ಕುಟ್ಟಾ, ಬಾಯಿಯ ಅಗುಳನ್ನು ನಿನಗೆ ತಿನ್ನಿಸಿ ಸಾಕಿದೆನಲ್ಲಾ ನಿನ್ನನ್ನು ಹುಲಿ ಕೊಂಡುಹೋಯಿತಲ್ಲಾ" ಎಂದು ಮನೆಯಾಕೆಯ ಅಳುವಿನ ಧ್ವನಿ ಸ್ಪಷ್ಟವಾಗಿ ಕೇಳಿಸಿತು. ಆದಷ್ಟು ಧೈರ್ಯ ಮಾಡಿಕೊಂಡು ಅಂಗಳಕ್ಕೆ ಬಂದು ತಡಿಕೆಯತ್ತ ಲೈಟು ಹಾಕಿದಾಗ ಕಂಡದ್ದೇನು ?

ತಡಿಕೆ ಬಿಚ್ಚಿ ಒಂದಾಳು ಗಾತ್ರದ ಬಿರುಕು ಕಾಣುತ್ತಿದೆ. ನಾವು ಹೊರಗಿನಿಂದ ಎಷ್ಟು ಒದರಿ ಕರೆದರೂ ಭಯಭೀತಳಾಗಿ ಅಳುತ್ತಿದ್ದ ಗೌಡತಿ ಒಳಗಿನಿಂದ ಚಿಲಕ ತೆಗೆಯುತ್ತಿಲ್ಲ. ಹೇಗಾದರೂ ಆಕೆಗೆ ಧೈರ್ಯನೀಡಿ ಬಾಗಿಲು ತೆಗೆಯಿಸಬೇಕಾದರೆ ನಾವು ಪಟ್ಟ ಶ್ರಮ ನಮಗೇ ವೇದ್ಯ! ಅಂತೂ, ಆಕೆ ಬಾಗಿಲು ತೆರೆದಾಗ ಆತುರಾತುರವಾಗಿ ಒಳನುಗ್ಗಿದ ನಾವು ಕಂಡುದೇನು? ಬೆಪ್ಪಾಗಿ, ಗೋಡೆಗೆ ಅಂಟಿ ಕುಳಿತ ಮಗು ತೆರದ ಕಣ್ಣನ್ನು ಮುಚ್ಚದೇ

ನಮ್ಮೆಡೆಗೇ ನೋಡುತ್ತಿದೆ! ಗೌಡತಿಯು ರಾವು ಬಡಿದವಳಂತೆ ತಲೆ ಕೆದರಿ ಹಣೆಗೆ ಬಡಿದುಕೊಂಡು ಅಳುತ್ತಿದ್ದಾಳೆ. ಇಷ್ಟು ಜನರು ಇರುವಾಗ ಇನ್ನೊಮ್ಮೆ ಹುಲಿ ಆಕ್ರಮಿಸಲಾರದೆಂದು ಧೈರ್ಯ ತಂದುಕೊಂಡು ಲೈಟಿನ ಬೆಳಕನ್ನು ಸುತ್ತ ಬೀರಿದಾಗ ಕಾಣಿಸಿದ ಬೀಭತ್ಸಕರ ದೃಶ್ಯವನ್ನು ಮರೆಯುವುದಂತೂ ಸಾಧ್ಯವಿಲ್ಲ. ಹುಲಿ ಹಾಗೂ ನಾಯಿಗಳ ಉರುಡಾಟ ನಡೆದಾಗ ನಾಯಿಯನ್ನು ಕಾಪಾಡಿಕೊಳ್ಳಬೇಕೆಂಬ ಆವೇಶದಿಂದ ನಾಯಿಯ ಹಿಂಗಾಲುಗಳನ್ನು ಹಿಡಿದು ಗೌಡತಿ ಜಗ್ಗಿರಬೇಕು. ಹಾಗೆ ಜಗ್ಗಿದ ಭರಕ್ಕೆ ಹೆದರಿದ ನಾಯಿ ವಿಸರ್ಜಿಸಿದ ಮಲಮೂತ್ರದಿಂದಾದ ರಂಪಾಟ ಇಡೀ ಜಗಲಿ ಹರಡಿ ಆ ಹೇಸಿಗೆಯಿಂದ ಬರುತ್ತಿದ್ದ ನಾತವು ಸಹಿಸಲು ಅಸಾಧ್ಯವಾಗಿತ್ತು. ಅಂತೂ, ಹುಲಿಯು ಹೊತ್ತುಕೊಂಡು ಹೋದುದು ನಾಯಿಯನ್ನೆಂದು ಖಚಿತವಾಯಿತು. ಆ ಹುಲಿಯನ್ನು ಹುಡುಕಲೆಂದು ಮನಸ್ಸಿಲ್ಲದ ಮನಸ್ಸಿನಿಂದ, ರಾತ್ರಿ ತಣ್ಣೀರಿನ ಸ್ನಾನಕ್ಕೆ ಹೋಗುವವರಂತೆ, ಹೊರಟು ಮನೆಯ ಸುತ್ತುಮುತ್ತು ಒಂದು ಗಂಟೆ ಹೊತ್ತು ಹುಡುಕಿದೆವು. ಯಾವ ಮೃಗದ ಸುಳಿವೂ ಇಲ್ಲ. ನಮ್ಮ ಇರವನ್ನು ಅರಿತ ಹುಲಿಯು ದೂರದ ಕಾಡಿಗೆ ನಾಯಿಯನ್ನು ಎತ್ತಿಕೊಂಡು ಓಡಿತೆ? ಹಾಗೊಂದು ವೇಳೆ ಹೋಗಿದ್ದರೆ ಮಾರಿ ಹೋದಂತಾಯಿತು ಎಂದೆಣಿಸಿಕೊಂಡು ಹುಡುಕಿದ್ದು ಸಾಕಾಗಿ ಗೌಡನ ಮನೆಯತ್ತ ಬರುವಾಗ ಬಾವಿಯತ್ತಣಿಂದ ನಾಯಿಯ 'ಕುಂಯ್', ಕುಂಯ್' ಕೂಗು ಕೇಳಿಸಿತು.

ಮನುಷ್ಯರ ಬೊಬ್ಬೆಗೆ ಹೆದರಿದ ಹುಲಿ ಓಡುವಾಗ ಅದರ ದವಡೆಯಿಂದ ತಪ್ಪಿಸಿದ ನಾಯಿ ಓಡಿ ಬಾವಿಗೆ ಬಿದ್ದು ಕುಂಯ್‌ಗುಡುವುದೇ? ಹೀಗೆಂದು ಪರಿಶೀಲಿಸಲು ಪಾಮರದ ಬಳಿ ಬಂದು ಲೈಟಿನ ಬೆಳಕನ್ನು ಬಾವಿಯ ಒಳಗೆ ಬೀರುವಾಗ ಪಿಳಿ, ಪಿಳಿ ಕಣ್ಣು ಬಿಟ್ಟು ನೋಡುತ್ತಿದ್ದ ನಾಯಿ ಕಾಣಿಸಿತು! "ಸಾಂತಾ, ನಿನ್ನ ನಾಯಿ ಈ ಬಾವಿಯಲ್ಲಿದೆ, ಬಾ ನೋಡು" ಎನ್ನುವಾಗ ಅದೇನು 'ಗುರ್‍ರೆಂಬ' ಸದ್ದು?! ಒಮ್ಮೆ ಬೆಚ್ಚಿಬಿದ್ದು, ಪುನಃ ಕಿವಿಗೊಟ್ಟು ಆಲಿಸಿದರೆ ನಾಯಿಯ ಸದ್ದಿಲ್ಲ; ಗುರ್ ಗುರ್‍ರೆಂಬ ಸದ್ದು ಮತ್ತೆ ಕೇಳುತ್ತಿದೆ. ಓಹೋ, ನಾಯಿಯೊಡನೆ ಹುಲಿಯೂ ಗಟ್ಟಣೆಯಿಲ್ಲದ ಬಾವಿಗೆ ಬಿದ್ದಿರಬೇಕೆಂದು ನಾವೆಲ್ಲ ನಿರ್ಧರಿಸಿಕೊಂಡೆವು. ಪುನಃ ಲೈಟ್ ಹಾಯಿಸಿ

ನೋಡಿದಾಗ ನಾಯಿ ಮಾತ್ರವಲ್ಲದೆ ಹುಲಿಯೂ ಬಾವಿಯ ಅಂಕಣಕ್ಕೆ ಕೈಯಿರಿಸಿ ಮುಳುಗದಂತೆ ತಡೆದುಕೊಂಡು ಮೇಲೆ ನೋಡುತ್ತಿದೆ! ನಾವೆಲ್ಲ ಈ ಅಪೂರ್ವ ದೃಶ್ಯವನ್ನು ಭಯಾಶ್ಚರ್ಯಭರಿತರಾಗಿ ನೋಡುತ್ತಿದ್ದೆವು. ಕುಂಞಿಮೋನು ಕೇಳಿದ -"ಸಾಂತಾ ಬಾವಿಯಲ್ಲಿ ಎಷ್ಟು ನೀರಿರಬಹುದು?" "ಸುಮಾರು ಎರಡಾಳು ಇದ್ದೀತು" - ಆತನೆಂದ. ಇದನ್ನು ಕೇಳಿ ಉತ್ಸಾಹಿತನಾದ ಕುಂಞಿಮೋನು "ಹಾಗಾದರೆ ಈಗ ಸುಮ್ಮನಿರುವುದು ತರವಲ್ಲ. ನಮ್ಮ ಮುಂದಿನ ಕೆಲಸಕ್ಕೆ ತೊಡಗುವ. ಹುಲಿಯು ಹಿಂಗಾಲನ್ನು ಊರದೆ ಮೇಲಕ್ಕೆ ನೆಗೆಯುವಂತಿಲ್ಲ; ನೆಗೆಯಲು ಯತ್ನಿಸಿದರೆ ಈ ಸ್ಥಿತಿಯಲ್ಲಿ ಮುಳುಗುವುದರಲ್ಲಿ ಸಂದೇಹವಿಲ್ಲ" ಎಂದು ನಮ್ಮೆಲ್ಲರನ್ನೂ ಹುರಿದುಂಬಿಸಿದ. ತನ್ನ ಕಂಚು ಕಟ್ಟಿದ ದೊಣ್ಣೆಯನ್ನೊಮ್ಮೆ ಎತ್ತಿ ಹಿಡಿದು ನನ್ನ ಹಿಂದಿನಿಂದ ಮೈಗಾವಲ ಭಟನಂತೆ ನಿಂತು "ಹುಂ, ಎಲ್ಲರೂ ಮುಂದುವರಿಯಿರಿ, ಹಿಂದಿನಿಂದ ಕತ್ತಿ, ದೊಣ್ಣೆಯವರೂ ಬನ್ನಿರಿ" ಎಂದು ಆದೇಶಿಸಿದ.

ನಾನು ಬಾವಿಯ ಒಳಗೆ ಮತ್ತೊಮ್ಮೆ ಬೆಳಕು ಬೀರಿದಾಗ ಕಂಡ ದೃಶ್ಯದಿಂದ ಮೈಯ ರೋಮಗಳೆಲ್ಲ ನಿಗುರಿ ನಿಂತವು. ಹಂಡೆ ಗಾತ್ರದ ತಲೆಯಲ್ಲಿ ಕೆಂಗಣ್ಣುಗಳು ರಕ್ತಸೂಸುವಂತೆ ಹೊಳೆಯುತ್ತಿವೆ. ಮೇಲಕ್ಕೆ ನೆಗೆಯಲು ಯತ್ನಿಸುವ ಹುಲಿಯ ಸಾಧನೆ ವಿಫಲವಾಗುತ್ತಿತ್ತು. ನಮ್ಮನ್ನು ಕಂಡು ಭೀತಿಗೊಂಡ ಹುಲಿಯ ಗುರುಗುಡುವಿಕೆ ತಾರಕಕ್ಕೇರಿತು. ಜೀವವುಳಿಸಿಕೊಳ್ಳುವ ಹಂಬಲದಿಂದ, ಬಾವಿಯಿಂದ ಮೇಲಕ್ಕೇರಿ ಪಾರಾಗಲು ಬಾವಿಯ ಬದಿಯನ್ನು ಒಂದು ಕೈಯಿಂದ ಬಿಗಿ ಹಿಡಿದು ಮತ್ತೊಂದು ಕೈಯಿಂದ ಮೇಲಕ್ಕೆ ಹತ್ತಲು ಯತ್ನಿಸುತ್ತಿತ್ತು. ಹುಲಿಯ ಉಗುರಿನ ಹಿಡಿತಕ್ಕೊಳಗಾದ ಹಸಿಮಣ್ಣು ಮುದ್ದೆ ಮುದ್ದೆಯಾಗಿ ಬಾವಿಗೆ ಬೀಳುತ್ತಿತ್ತಲ್ಲದೆ ಹುಲಿಗೆ ಭದ್ರವಾದ ಹಿಡಿತ ಸಿಕ್ಕುತ್ತಿರಲಿಲ್ಲ. ಆಗ ಕುಂಞಿಮೋನು "ಧನೀ, ನೋಡುವುದೇನು? ಹೊಡೆಯಿರಿ ಗುಂಡು! ಅದು ಮೇಲೆ ಹಾರಿದರೆ ನನ್ನ ಕಂಚುಕಟ್ಟಿದ ದೊಣ್ಣೆಯು ಸಿದ್ಧವಾಗಿಯೇ ಇದೆ" ಎಂದು ಹುರಿದುಂಬಿಸಿದ. ನಾನು ತುಂಬು ಧೈರ್ಯ ತಾಳಿ ಲೈಟಿನ ಬೆಳಕನ್ನು ಸರಿಯಾಗಿ ಹುಲಿಯ ತಲೆಯೆಡೆಗೆ ಹಾಯಿಸಿ, ಕೋವಿಯನ್ನು ಗಟ್ಟಿಯಾಗಿ ಎದೆಗವುಚಿ ಟ್ರಿಗರನ್ನು ಒತ್ತಿದೆ. ಕೋವಿ 'ಢಮಾಲ್' ಎಂದಿತು. ಹುಲಿಯು ಕೊನೆಯ

ಯತ್ನವೆಂದು ನೆಗೆದುದು ಹಿಡಿತವಿಲ್ಲದ್ದರಿಂದ ಊರೇ ನಡುಗುವಂತೆ ಒಮ್ಮೆ ಅಬ್ಬರಿಸಿ ನೆಗೆದು ಬಾವಿಯಲ್ಲಿ ಮುಳುಗಿತು! ಈಡಿನ ಸದ್ದಿಗೆ ಹೆದರಿದ ನಾಯಿಯು ಬಾವಿಗೆ ಬಿದ್ದು ಮುಳುಗಿ ಗಡಬಡಿಸಿ ಈಜಿ ಮೇಲೆದ್ದು ತನ್ನ ಮೊದಲಿನ ತಾವಿನಲ್ಲಿಯೇ ಕೈಯಿರಿಸಿ ಜೋತಾಡುವಂತೆ ನಿಂತಿತು. ಆದರೆ ಮುಳುಗಿದ ಹುಲಿಯ ಪತ್ತೆಯಿಲ್ಲ. ಬಾವಿಯ ತಳದಿಂದ ರಕ್ತಮಿಶ್ರಿತ ನೀರು ಮೇಲೆ ಬರುತ್ತಿದೆ. ಹುಲಿಯು ಸತ್ತಿತೆಂಬ ನಿರ್ಧಾರಕ್ಕೆ ಬಂದು ಉಲ್ಲಾಸ ತಾಳಿದ ನಾನು ಆಕಾಶಕ್ಕೆ ಹುಸಿಗುಂಡೊಂದನ್ನು ಎಸೆದು ಊರವರೆಲ್ಲರಿಗೂ ಹುಲಿ ಸತ್ತಿತೆಂಬ ಜಾಹೀರಾತನ್ನು ಮಾಡಿದೆ. ಎಲ್ಲರೂ ಬಾವಿಯ ಬಳಿಗೆ ತವಕದಿಂದ ಬಂದು ಇಣಿಕಿ ನೋಡಿದರು; ಹುಲಿಯ ಸುಳಿವಿಲ್ಲ.

ದೂರದೂರದಿಂದ ಎರಡು ಈಡನ್ನೂ, ಹುಲಿಯ ಕೊನೆಯ ಆರ್ಭಟೆಯನ್ನೂ ಕೇಳಿದ ನೆರೆಕರೆಯವರು ಲಾಟಾನು, ಸೂಟೆಗಳ ಬೆಳಕಿನೊಂದಿಗೆ ನಮ್ಮತ್ತ ಕಡೆಗೆ ಬರುತ್ತಿದ್ದರು. ಕುಂಞಿಮೋನುವು "ಹುಲಿಯು ಬಾವಿಯ ಬುಡಕ್ಕಿಳಿದು ಪ್ರಾಣ ಬಿಡುವಾಗ ಮಣ್ಣು ಕಚ್ಚಿರಬೇಕು. ಹಾಗೆ ಕಚ್ಚಿದುದು ಗಟ್ಟಿ ಹಿಡಿತವಾಗಿ ಹುಲಿ ಅಲ್ಲಿ ಸಿಲುಕಿದೆ. ಈಡಾಗಿ ಐದು ನಿಮಿಷದಷ್ಟಾಯಿತು. ಜೀವವಿರುತ್ತಿದ್ದರೆ ಈಗಾಗಲೇ ಮೇಲೆ ಬರಬೇಕಾಗಿತ್ತು"ಎಂದು ನುಡಿದ. ಬಾವಿಯೊಳಗೆ ಕುಂಯ್‌ಗುಡುತ್ತಿದ್ದ ನಾಯಿಯನ್ನು ಹಗ್ಗದ ಉರುಳು ಮಾಡಿ ಸಿಕ್ಕಿಸಿ ಸಾಂತ ಗೌಡನು ಮೇಲಕ್ಕೆಳೆದು ಹಾಕಿದ. ಮೇಲಕ್ಕೆ ಬಂದೊಡನೆ ತಪ್ಪಿಸಿಕೊಂಡು ಓಡಿದ ನಾಯಿಯು ನಿಂತುದು ಗೌಡನ ಅಡಿಗೆ ಕೋಣೆಯಲ್ಲಿ! ಇಷ್ಟು ಹೊತ್ತಿಗೆ ಹುಲಿಯ ಹಿಂಗಾಲುಗಳು ಮೇಲಕ್ಕೆ ಬರುತ್ತಿರುವುದನ್ನು ಕಂಡು ಕುಂಞಿಮೋನುವಿನ ಅಭಿಪ್ರಾಯ ಸರಿಯೆಂದು ನಾವೆಲ್ಲ ತೀರ್ಮಾನಿಸಿದೆವು.

ಸಾಂತನ ಮನೆಗೆ ಆಳುಗಳನ್ನು ಕಳುಹಿಸಿ, ಅಟ್ಟದಿಂದ ಮೂರು ನಾಲ್ಕು ಹಗ್ಗಗಳನ್ನು ತರಿಸಿದೆವು. ಹಗ್ಗಕ್ಕೆ ಉರುಳು ಮಾಡಿ ತಲೆ ಕೆಳಗಾಗಿ ಜೋತಾಡುತ್ತಿದ್ದ ಹುಲಿಯ ಕಾಲುಗಳಿಗೆ ಪ್ರಯಾಸದಿಂದ ಸಿಕ್ಕಿಸಿದೆವು. ಹಗ್ಗದ ಇನ್ನೊಂದು ತುದಿಯನ್ನು ಬಾವಿಯ ಪಾಮರಕ್ಕೆ ಕಟ್ಟಿ, ಹತ್ತು ಹನ್ನೆರಡು ಮಂದಿ ಎಳೆದರೂ ಹುಲಿಯ ದೇಹ ಬಾವಿಯ ಅರ್ಧ ಭಾಗವನ್ನೂ ಮೇಲೇರಲಿಲ್ಲ. ಉಳಿದೆಲ್ಲರೂ ಸೇರಿ ಎಳೆದರೂ ಅಷ್ಟೆ! ಕೈಯಲ್ಲಿದ್ದ ಹಗ್ಗವನ್ನು

ಹತ್ತಿರದ ಮರಕ್ಕೆ ಕಟ್ಟಿ ಮುಂದೇನೆಂದು ಯೋಚಿಸಿದೆವು. ಸಾಂತ ಗೌಡನ ಮನೆಯಲ್ಲಿದ್ದ ಬಿದಿರ ಏಣಿಯನ್ನು ತರಿಸಿದೆವು. ಇಬ್ಬರು ಏಣಿಯ ಸಹಾಯ ದಿಂದ ಬಾವಿಗಿಳಿದು ಹುಲಿಯ ದೇಹವನ್ನು ಮೇಲೆತ್ತಿ ಕೊಟ್ಟರು. ಮೇಲಿ ನಿಂದ ಎಲ್ಲರೂ ಕೂಡಿ ಎಳೆದ ರಭಸಕ್ಕೆ ಪಾಮರವನ್ನು ಮಗುಚಿ ಹುಲಿಯ ದೇಹವು ಮೇಲೆ ಬಂತು !

ಹನ್ನೆರಡು ಅಡಿ ಉದ್ದದ ಪಟ್ಟೆಹುಲಿ ! (ನಿಡಿದಾಗಿ ಚಾಚಿ ಮಲಗಿಸಿ ದಾಗ ಬಾಲದ ತುದಿಯಿಂದ, ತಲೆಯ ತನಕವೆಂದು ಹೀಗೆ, ಲೆಕ್ಕ) ರೋಮವು ಅರಸಿನ ವರ್ಣದಿಂದ ಕೆಂಬಣ್ಣಕ್ಕೆ ತಿರುಗಿದೆ. ಕರಿಬಣ್ಣದ ಪಟ್ಟೆಯ ಎಡೆಯಲ್ಲಿ ಬಿಳಿ ರೋಮಗಳು ಮೂಡಿ ನಿಂತಿವೆ. ಈ ಮೊದಲು ಅಜ್ಜಯ್ಯನವರು ಹೊಡೆದಿದ್ದ ಹಲವು ಹುಲಿಗಳನ್ನು ಕಂಡ ಕುಂಞಿಮೋನು "ಇದು ತುಂಬಾ ಪ್ರಾಯದ ಹುಲಿ" ಎಂದು, ಅದರ ಬಾಯಗಲಿಸಿ ನೋಡಿದ. ನೆತ್ತಿಗಾದ ಜಂಟಿ ಗುಂಡಿನ ಪೆಟ್ಟಿನಿಂದ ನಜ್ಜು ಗುಜ್ಜಾದ ತಲೆಯು ಗುಜು ಗುಜು ಎನ್ನುತ್ತಿತ್ತು. ಬಾಯಿ ಬಿಡಿಸಿ ನೋಡಿದ ಕುಂಞಿಮೋನು ಎದು ರಿನ ಹಲ್ಲುಗಳಿಲ್ಲದ ಬೊಚ್ಚು ಬಾಯಿಯ ಆ ಹುಲಿಯನ್ನು ಕಂಡವನೇ "ಹೊ....ಹೋ ! ಪ್ರಾಯವಾಗಿರುವುದೇನು ? ಇದಕ್ಕೆ ನನ್ನಂತೆ ಎದುರಿನ ಹಲ್ಲುಗಳೇ ಇಲ್ಲ. ಆದ್ದರಿಂದಲೇ ಪ್ರತಿಭಟಿಸುವ ಯಾವ ಪ್ರಾಣಿಯ ಗೋಜಿಗೂ ಹೋಗದೆ ಈ ಹುಲಿ ಮನೆಯಲ್ಲಿನ ಕರು, ನಾಯಿಗಳನ್ನೇ ಖಾಯಸು ಮಾಡುವುದು" ಎಂದು ತೀರ್ಮಾನವಿತ್ತ. ನಮಗೆಲ್ಲ ಅದು ನಿಜವೆಂದು ಮನದಟ್ಟಾಯಿತು.

ಹುಲಿಯನ್ನು ಅಂಗಾತ ಮಲಗಿಸಿ, ಬಡಿಗೆ ಹಗ್ಗಗಳನ್ನು ತರಲು ಕೆಲವರು ಹೋದರು. ನನ್ನ ತೈನಾತಿಗಳಾದ ಮಲ್ಲು, ಅಂಗರ ಇವರು ಈ ಸಂಭ್ರಮದ ಸುವಾರ್ತೆಯನ್ನು ಮನೆಗೆ ಮುಟ್ಟಿಸಲು ಲಾಟಾನು, ದೊಣ್ಣೆ ಗಳನ್ನು ಹಿಡಿದುಕೊಂಡು ತವಕದಿಂದ ಓಡಿದರು. ಸುಂಕದಕಟ್ಟೆಗೆ ಮರು ದಿನ ಗಾಡಿ ಬರುವಂತೆ ಮಾಡಿ ಹುಲಿಯ ಮೆರವಣಿಗೆಯ ವ್ಯವಸ್ಥೆ ಆಗ ಬೇಕಲ್ಲ ? ನನ್ನ ಈಡುಗಾರಿಕೆಯ ಜಾಹೀರಾತು ಬೇಡವೇ ? ಬಾವಿಗೆ ಬಿದ್ದ ಹುಲಿಯನ್ನು ಧನಿಗಳ ಮಗ ಹೊಡೆದುದೆಂದು ತಪ್ಪಿಯೂ ಯಾರೂ ಬಾಯಿ

ಬಿಡುವಂತಿಲ್ಲ. ಹಾಗೆ ಯಾರಾದರೂ ಉಸಿರೆತ್ತಿದರೆ ಮರುದಿನ ಊಟ, ಕಾಫಿಗೆ ಖೋತಾಯೆಂದು ಸ್ಪಷ್ಟವಾಗಿ ಗೊತ್ತಿದ್ದ ನನ್ನ ಸಂಗಡಿಗರು ಬಾಯಿ ಮುಚ್ಚಿದ್ದರು.

ರಾತಾರಾತ್ರಿಯೇ ಹುಲಿಯನ್ನು ಬಡಿಗೆಗೆ ಸಿಕ್ಕಿಸಿ, ಕೂಡಿದವರಿಂದ ಹೊರಿಸಿಕೊಂಡು ಸುಂಕದ ಕಟ್ಟೆಯ ಕಡೆಗೆ ಹೊತ್ತದ್ದಾಯಿತು. ದಾರಿಯಲ್ಲಿ ರಾಮು ಪೂಜಾರಿಯ ಮನೆ. ಅಲ್ಲಿ ತುಸು ತಂಗಿದಾಗ ಹುಲಿ ಹೊತ್ತು ದಣಿದವರಿಗೆ ರಾಮು ಪೂಜಾರಿಯ ಹಂಡೆಯಲ್ಲಿ ಉಳಿದಿದ್ದ ಬೈನಿ ಕಳ್ಳಿನ ಸಮಾರಾಧನೆ! ನನಗೆ ಎಳನೀರು ಸೇವನೆಯಾಯಿತು. ಹುಲಿಯನ್ನು ಹೊತ್ತವರು ಆಗಲೇ ಸುಂಕದ ಕಟ್ಟೆಯ ತನಕ ಹೊತ್ತು ಅದನ್ನು ಸಾಗಿಸಬೇಕೆಂದು ಕುಂಞಿವೋನು ದಟ್ಟಿಸಿ ಹೇಳುವಾಗ ಆಗದೆನ್ನುವ ಎದೆಗಾರಿಕೆ ಯಾರಿಗಿದೆ? ಬಹಳ ಸಾಹಸಪಟ್ಟು ಹುಲಿಯ ಹೆಣವನ್ನು ಸುಂಕದ ಕಟ್ಟೆಗೆ ಸಾಗಿಸಿದ್ದಾಯಿತು. ಅಲ್ಲಿನ ನೆರೆಕರೆಯವರಿಗೆ, ಪಟೇಲರಿಗೆ, ಅಂಗಡಿ ಹೋಟೆಲಿನವರಿಗೆ ಅಚ್ಚರಿ, ಸಂಭ್ರಮ! "ನನ್ನ ಮನೆಯ ಕರುವನ್ನು ಈ ಖೂಳನೇ ತಿಂದದ್ದು, ನಮ್ಮ ನಾಯಿಗಳನ್ನೆಲ್ಲ ತಿಂದು ಮುಗಿಸಿದೆ", ಎಂದು ವಿಧ ವಿಧವಾಗಿ ಮಾತನಾಡುತ್ತ ಜನ ಸತ್ತ ಹುಲಿಯತ್ತ ಉಗುಳುತ್ತಿದ್ದರು. ಹುಲಿಬೇಟೆಯಿಂದ ಸಂತುಷ್ಟರಾದ ಹೋಟೆಲ್ ಪುಟ್ಟಣ್ಣ ಗೌಡರು ನಮ್ಮ ಬಳಗಕ್ಕೆ ಗಡದ್ದಾಗಿ ಅವಲಕ್ಕಿ, ಕಾಫಿ ಸಮಾರಾಧನೆಯನ್ನೇ ಏರ್ಪಡಿಸಿದರು. ಅಷ್ಟಲ್ಲದೆ, 'ತಮ್ಮ ದನ ಕರುಗಳು ಇನ್ನು ಅದರ ಪಾಲಾಗದಂತೆ ಕಾಪಾಡಿದ ಪುಣ್ಯವು ನನ್ನ ಪಾಲಿಗೆ ರಕ್ಷೆಯಾಗಲಿ' ಎಂದು ಹಾರ್ದಿಕವಾಗಿ ಆಶೀರ್ವದಿಸಿ ಸುಂಕದ ಕಟ್ಟೆಯಿಂದ ಕಡಬದ ತನಕ ಹುಲಿ ಮೆರವಣಿಗೆ ಅದ್ಧೂರಿಯಿಂದ ನಡೆಯಬೇಕೆಂದೂ, ಅದರ ಖರ್ಚೆಲ್ಲವನ್ನೂ ತಾವೇ ವಹಿಸಿಕೊಳ್ಳುವುದಾಗಿಯೂ ಉತ್ಸಾಹದಿಂದ ನುಡಿದರು. ಕಾಸಿಂ ಸಾಹೇಬನು ನೂರು ಗರ್ನಾಲುಗಳನ್ನು ಹೊಡೆಯಬೇಕು; ಮೇರ, ಕೊರಗರ ಕೊಂಬು, ಕಹಳೆ, ದುಡಿ, ಡೋಲಿನ ಗೌಜಿ ಇರಬೇಕು - ಎಂದೆಲ್ಲ ಏರ್ಪಾಡಾಯಿತು. ಕೊರಗರ ಕೊಟ್ಯಕ್ಕೆ, ಮೇರರ ದಟ್ಟಿಗೆಗೆ ಜನ ಅಟ್ಟಿ ಅವರು ಬಂದು ಕಿರು ಫಳಾರ ಮಾಡಿ ಕೊತ್ತುಕೊಂಡಿದ್ದಷ್ಟೆ; ಅಬ್ದೋಕರೆ ಬ್ಯಾರಿಯ ಉರಾಲು ಕೇಳಿಸಿ ಗಾಡಿ ಬಂತೆಂದು ಸೂಚಿಸಿತು. ಆಗ ಬೆಳಗ್ಗೆ ಗಂಟೆ ಎಂಟಾಗಿರಬಹುದು.

ಸಮೀಪಿಸಿದ ಗಾಡಿಯ ಎತ್ತುಗಳು ಗೋಡೆಗೊರಗಿಸಿ ನಿಲ್ಲಿಸಿದ್ದ ಹುಲಿಯ ದೇಹವನ್ನು ಕಂಡು ಒಮ್ಮೆ ಪೆರ್ಚಿಕಟ್ಟಿದವು; ಆದರೂ ಅಬ್ಬೋಕರೆಯ ಚಾಕಚಕ್ಯದಿಂದ ಹಿಡಿತಕ್ಕೆ ಬಂದುವು. ಗಾಡಿಯಿಂದ ಅಜ್ಜಯ್ಯನವರೂ, ತಂದೆಯವರೂ ನಿಧಾನವಾಗಿ ಇಳಿದರು.

ತಂದೆಯವರು ಹುಲಿಯನ್ನು ಒಮ್ಮೆ ಮೆಚ್ಚುಗೆಯ ನೋಟದಿಂದ ದಿಟ್ಟಿಸಿ ನನ್ನನ್ನು ನೋಡಿ ದು ರ್ದಾ ನ ತೆಗೆದುಕೊಂಡವರಂತೆ ಮುಖ ತಿರುಗಿಸಿ ಗಾಡಿಯೇರಿ "ಹೂಂ, ಹುಲಿಯನ್ನು ಗಾಡಿಗೆ ಹತ್ತಿಸಿರಿ" ಎಂದರು. ಅಜ್ಜಯ್ಯನವರು ಸಮೀಪಿಸಿ ನನ್ನ ತಲೆ ನೇವರಿಸಿ, "ಇದು ಬಲಿಪ್ಪ; ಬಹು ಶಕ್ತಿಯುತವಾದುದು. ನಾನು ಹಲವಾರು ಹುಲಿಗಳನ್ನು ಹೊಡೆದಿದ್ದರೂ ಇಷ್ಟು ಘನ ಅಡ್ಡಬಲಿಪ್ಪನನ್ನು ಕಂಡಿಲ್ಲ. ಒಂದೇ ಈಡಿನಲ್ಲಿ ಸತ್ತಿತಷ್ಟೆ? ಹೆದರಲಿಲ್ಲ ತಾನೆ?" ಎಂದು ತುಂಬು ಹರ್ಷದಿಂದ ನುಡಿದರು. 'ಮಗ ಸೋತರೂ ಚಿಂತಿಲ್ಲ; ಜೂಜಿನ ಒಳವು ಕಲಿತನು' ಎಂಬ ಗಾದೆಯಂತೆ ವಿದ್ಯಾವಂತನಾಗಿ ಮನೆಗೆ ಹೆಸರು ತಾರದಿದ್ದರೂ ಶಿಕಾರಿಯಲ್ಲಿ ತಂದನಲ್ಲವೆ? ಎಂಬ ಭಾವನೆಯಿಂದ ನನ್ನನ್ನು ಹೊಗಳಿದ್ದೇ ಹೊಗಳಿದ್ದು! ಪಾಪ, ಅವರೇನು ಬಲ್ಲರು- ನಾನು ಬಾವಿಗೆ ಬಿದ್ದ ಹುಲಿಗೆ ಹೊಡೆದು ಬಂಟತನದ ಅಬ್ಬರದಿಂದ ಬೀಗುವುದೆಂದು? ತಂದೆಯವರೇನಾದರೂ ಈ ಗುಟ್ಟನ್ನು ಅರಿತಿದ್ದರೆ ಅಲ್ಲೇ ನನ್ನ ಮುಖಕ್ಕೆ ಉಗುಳುತ್ತಿದ್ದರು.

ತಂದೆಯವರು "ಹುಲಿಯನ್ನು ಗಾಡಿಗೆ ಹಾಕಿರಿ" ಎಂದಿದ್ದನ್ನು ಕೇಳಿ ಪುಟ್ಟಣ್ಣ ಗೌಡರು ಮುಂದೆ ಬಂದು, "ಧನಿಗಳೇ ಮಗುವು ಹೊಡೆದ ಪ್ರಥಮ ಬಲಿಪ್ಪ. ಕಡಬದ ತನಕ ಇದರ ಮೆರವಣಿಗೆಯಾಗಲೇಬೇಕು. ಈ ನಮ್ಮಣ್ಣ ಊರಿಗೆ ಉಪದ್ರ ಕೊಡುತ್ತಿದ್ದ ಬಲಿಪ್ಪನನ್ನು ಒಂದೇ ಈಡಿನಿಂದ ಕೊಂದ ಪುಣ್ಯಾದಿಗನೆಂದು ಊರವರು ಆಶೀರ್ವಾದ ಮಾಡಬೇಕು. ಈ ಬಾಬ್ತಿನಲ್ಲಿ ಎಷ್ಟು ಖರ್ಚಾದರೂ ಇಂದು, ನನ್ನ ಲೆಕ್ಕದಲ್ಲಿ! ಗಾಡಿಯು ಮುಂದಿನಿಂದ ಹೋಗಲಿ. ಹುಲಿಯನ್ನು ಹೊತ್ತವರು ಹಿಂದಿನಿಂದ ಬರುತ್ತಾರೆ. ನಾನೂ ಸುಂಕದಕಟ್ಟೆ ಪಟೇಲರೂ ಕಡಬದ ತನಕ ಬರುವವರೇ" ಎನ್ನುವಾಗ ತಂದೆಯವರಿಗೆ ಏನು ಮಾಡುವುದಕ್ಕೂ ಗೊತ್ತಾಗದೆ ಅಜ್ಜನವರ ಮುಖವನ್ನು ನೋಡಿದರು. ಅಜ್ಜಯ್ಯನವರ ಮೋಹದ ಮೊಮ್ಮಗನಲ್ಲವೆ ನಾನು?

ಅವರು ಎಂದೂ ಬೇಡವೆನ್ನರು. ಅವರ ಸಮ್ಮತಿಯೂ ದೊರಕಿದ್ದನ್ನು ಕಂಡ ತಂದೆಯವರು 'ಇವನ ಸುಟ್ಟ ಮುಖಕ್ಕೆ ಇನ್ನು ಇದೊಂದು ಬಾಕಿ' ಎಂದು ಗೊಣಗಿಕೊಂಡು ಗಾಡಿಯಿಂದ ಇಳಿದು ಮನೆಗೆ ನಡೆದೇಬಿಟ್ಟರು. ಇದೇನು ಅವರು ಸಿಟ್ಟುಗೊಂಡವರಂತೆ ಹೋದುದೆಂದು ಗೌಡರು ಅಜ್ಜಯ್ಯನವರತ್ತ ನೋಡುವಾಗ "ಮಗನ ಬಿರ್ಸತ್ತಿಗೆಯನ್ನು ಮನೆಯಲ್ಲಿ ಹೇಳಲು ಹೋದು ದೆಂದು" ಸಮಾಧಾನಪಡಿಸಿದರು. ಸ್ಕೂಲು ಬಿಟ್ಟು ಅಪಾಪೋಲಿಯಾಗಿ ಮಗನು ತಿರುಗುತ್ತಿರುವುದಕ್ಕೆ ತಂದೆಗೆ ಸಿಟ್ಟು ಎಂಬ ಗುಟ್ಟನ್ನು ರಟ್ಟು ಮಾಡಿದರೆ ಮನೆತನಕ್ಕೆ ಕುಂದಲ್ಲವೆ ? ಕೊನೆಗೂ ಅಜ್ಜಯ್ಯನವರ ಉಪಸ್ಥಿತಿ ಯಲ್ಲಿ ಮೆರವಣಿಗೆಗೆ ಸಿಂಗರಿಸಿದ ಹುಲಿಯು ಸಿದ್ಧವಾಗುತ್ತಿತ್ತು. ಬಾಯಗ ಲಿಸಿ ಹುಲಿಯು ಭೀಕರವಾಗಿ ತೋರುವಂತೆ ಹುಲ್ಲಿನ ಉಂಡೆಯನ್ನು ಅದರ ದವಡೆಗೆ ಬೇಕಾದ ರೀತಿಯಲ್ಲಿ ಅಣಿಗೊಳಿಸಲು ಅಜ್ಜಯ್ಯನವರು ಹೇಳಿ ಕೊಡುತ್ತಿದ್ದಾಗ ತೆರೆದ ಬಾಯನ್ನು ಕಂಡವರೇ "ಹೋ, ಇದು ಮುದಿ ಜಂಬೂಸು ಹುಲಿ ! ಎದುರಿನ ಹಲ್ಲೇ ಇಲ್ಲ. ಇನ್ನು ಕೆಲವು ಸಮಯದೊಳಗೆ, ಹೊಟ್ಟೆಗಿಲ್ಲದೆ ಇದು ಸತ್ತೇ ಹೋಗುತ್ತಿತ್ತು" ಎಂದಾಗ ನನ್ನ ಈ ಬೇಟೆಯ ಪೂರ್ಣ ಕಥೆ ಬೆಳಕಿಗೆ ಬಂದರೇನು ಗತಿಯೆಂದು ನನ್ನೆದೆ ನಡುಗಿತು.

ಸತ್ತ ಹುಲಿಯನ್ನು ಬಾಯಗಲಿಸಿ ಹಾರಲು ಹವಣಿಸುವ ಭಂಗಿಗೆ ಅಳ ವಡಿಸಿ, ಬಡಿಗೆಯ ಊರನ್ನು ಕೊಟ್ಟು ಸಿದ್ಧಗೊಳಿಸಿ ವಿವಿಧ ಜಾತಿಯ ಹೂಮಾಲೆಗಳನ್ನು ಕೋದು ಕೊರಳಿಗಿಕ್ಕಿ, ಚರ್ಮ ಹಾಳಾಗದಂತೆ ಮೇಲಿನಿಂದ ಹುಲಿಯನ್ನು ಬಡಿಗೆಗೆ ನೇತಾಡಿಸಿ ಕೆಳಭಾಗವು ಮುದುಡಿ ಹುಲಿಯು ಕುಸುಕಿ ಹೋಗದಂತೆ ವ್ಯವಸ್ಥೆಗೊಳಿಸಿ ಆರಾರು ಜನ ಹಿಂದು ಮುಂದಿನಿಂದ ಹೊರಲು ಅನುಗೊಳಿಸಿದ್ದಾಯಿತು. ಹೀಗೆ ಮೆರವಣಿಗೆಗೆ ಸಿದ್ಧವಾದ ಹುಲಿಯನ್ನು ಕಂಡು ನನ್ನ ಮತ್ತು ಅಜ್ಜನವರ ಆನಂದಕ್ಕೆ ಪಾರವಿಲ್ಲ. ನನ್ನ ಸಂಗಡಿಗರಂತೂ ಹೆಮ್ಮೆಯಿಂದ ಬೀಗಿದ್ದರು. ಹುಲಿ ಮೆರವಣಿಗೆಗೆ ಸಿದ್ಧವಾಯಿತೆಂಬುದನ್ನು ಸೂಚಿಸುವಂತೆ ಕಾಸಿಂ ಸಾಹೇಬರ ಗರ್ನಾಲಿನ 'ಢಂ' ಸದ್ದು ಸೂಚಿಸಿತು.

ಅಜ್ಜಯ್ಯನವರೂ ನಾನೂ ಅಬ್ಬೋಕರೆ ಬ್ಯಾರಿಯೂ ಗಾಡಿಯೇರಿದೆವು. ಗಾಡಿ ಮರ್ದಾಳದತ್ತ ಹೊರಟಿತು. ಹಾರಲು ಸಿದ್ಧವಾದ ಭಂಗಿಯಲ್ಲಿರುವ

ಹುಲಿಯನ್ನು ಕಂಡು, ಮಡಿ ಡೋಲು ತಮ್ಮಟೆ ಕೊಂಬುಗಳ ಸದ್ದಿನಿಂದಾಗಿ ಗಲಿಬಿಲಿಗೊಂಡು, ಕಳ್ಳು ಕುಡಿದು ಕುಣಿಯುತ್ತಾ ಬೊಬ್ಬಿಡುತ್ತಿದ್ದ ಮೂಲದ ಹೊಲೆಯರ ಗದ್ದಲಕ್ಕೆ ಹೆದರಿದ ಎತ್ತುಗಳ ತುಯ್ದಾಟವನ್ನು ಕಡಿಮೆಮಾಡಿ ಮೆರವಣಿಗೆಗಾರರೊಡನೆ ಬೆರೆತು ಬರುವಂತೆ ಮಾಡಬೇಕಾದರೆ ಅಬ್ಬೋಕರೆ ಬ್ಯಾರಿ ಪಟ್ಟ ಪಾಡು ಹೇಳತೀರದು. ಗಾಡಿಯ ಪ್ರಯಾಣ ಸಾಗುತ್ತಿದ್ದಾಗ ಅಜ್ಜಯ್ಯನವರು ಹೇಳಿದರು –

"ಮಗೂ, ಶಾಲೆಗಂತೂ ನೀನು ಹೋಗುವವನಲ್ಲ. ಆದರೆ ಬೇಟೆಯಲ್ಲಿ ನಿಷ್ಣಾತನಾಗು. ಅದೇನು ಸಣ್ಣ ಕೆಲಸವಲ್ಲ. ನಾನು ಕೋವಿ ಹಿಡಿಯಲು ಶುರುಮಾಡಿ ಐವತ್ತು ವರ್ಷಗಳೇ ಕಳೆದರೂ ಇಂದಿಗೂ ನಿಷ್ಣಾತ ಈಡುಗಾರನೆಂದು ಹೇಳಿಕೊಳ್ಳುವ ಧೈರ್ಯ ಬಂದಿಲ್ಲ. ಆಹಾರಕ್ಕಾಗಿಯೇ ಹೊಡೆಯುವ ಜಿಂಕೆ, ಕಡವೆಗಳ ಮಾತು ಒತ್ತಟ್ಟಿಗಿರಲಿ; ಈಡು ತಪ್ಪಿದರೂ, ಅರೆ ಪೆಟ್ಟಾದರೂ ಅಂಥ ಅಪಾಯವಿಲ್ಲ. ಆದರೆ ಹುಲಿ, ಹಂದಿಗಳು ಹಾಗಲ್ಲ; ಬಹಳ ಅಪಾಯಕಾರಿ. ಇಂದೇನೋ ನೀನು ಧೈರ್ಯದಿಂದ ಹೊಡೆದೆ. ರೂಪು ರೂಪು ಹುಲಿಗೆ ಎಂದೂ ಹೊಡೆಯಬೇಡ. ಪೆಟ್ಟಾದಾಗ ಎದುರು ಕಂಡರೆ ಅದು ನೆಗೆಯಿತೆಂದೇ ಅರ್ಥ. ಅಡ್ಡಕ್ಕೆ ಹುಲಿಯು ಹೋಗುವುದಿದ್ದರೆ ನಿನ್ನಿಂದ ಮೂರು ನಾಲ್ಕು ಮಾರು ಅಡ್ಡದಾರಿಯನ್ನು ದಾಟಿದ ಬಳಿಕ ಹೊಡೆದರೆ ಅದು ಕಳ್ಳ ಹಾರು ಹಾರಿ ಮುಂದಕ್ಕೆ ಓಡುವುದೇ ವಿನಾ ಈಡಾದ ಜಾಗಕ್ಕೆ ಬರದು. ಹುಲಿಗೆ 'ಕಳ್ಳ' ನೆಂದೇ ಹೆಸರು. ಎದುರಾಗಿ ಹುಲಿಯು ಬರುವುದನ್ನು ನೀನು ಕಂಡು, ಅದು ನಿನ್ನನ್ನು ಕಾಣದಿದ್ದರೆ ಆದಷ್ಟು ಮರೆಗೆ ಸರಿದು ನಿಲ್ಲಬೇಕು. ನಿನ್ನನ್ನು ಅದು ದಾಟಿ ಮೂರು ನಾಲ್ಕು ಮಾರು ಹೋದ ಅನಂತರ ಮರ್ಮಕ್ಕೆ ಹೊಡೆದರೆ ಹುಲಿ ಉರುಳಿದಂತೆಯೆ. ಎಷ್ಟು ದೊಡ್ಡ ಹುಲಿಯಾದರೂ ಒಂದನೇ ನಂಬ್ರದ ಚರೆಯಿಂದ S. S. G; S. G; L. G. ಗಳ ತನಕದ ತೋಟೆಯು ಧಾರಾಳ ಸಾಕು. ಒಂಟಿ ಗುಂಡಾಗಲೀ, ಸ್ಪೆರಿಕಲ್ ಬಾಲ್ ಆಗಲೀ ಬೇಡ. ಆಯ ತಪ್ಪಿ ಹುಲಿಗೆ ಪೆಟ್ಟಾಗಿ ಅದು ಬಲ್ಲೆ ನುಗ್ಗಿದರೆ ಮತ್ತೆ ಹುಡುಕಹೋಗುವುದು ತುಂಬಾ ಅಪಾಯಕರ; ಹೋಗಲೇಬಾರದು. ಹಂದಿಯಾದರೋ ಹುಲಿಗಿಂತಲೂ ಶಕ್ತಿಯುತ ವಾದುದು. ಕಿರು ಹಂದಿಗೇ ಆದರೂ L. G. ಗುಂಡು, ಸ್ಪೆರಿಕಲ್ ಬಾಲೇ

ಆಗಬೇಕು. ಹಂದಿಯ ಚರ್ಮ ಗಟ್ಟಿ. ಪೆಟ್ಟಾದರೆ ಪ್ರಾಣ ಹೋಗುವ ತನಕವೂ ಹೋರಾಟ ಮಾಡುವ ಪ್ರಾಣಿಯೆಂದರೆ ಕಾಡುಹಂದಿಯೊಂದೆ; ರಕ್ಕಸ ಜಾತಿಯದು ! ಆನೆಯೂ ಕೊನೆಗೆ ಪ್ರಾಣೋತ್ಕ್ರಮಣ ಕಾಲದಲ್ಲಿ ಸೊಂಡಿಲೆತ್ತಿ ಸೋತ ಭಾವದಿಂದ ನಮಿಸುತ್ತದೆ. ಹಂದಿ, ಹುಲಿಗಳು ಕೊನೆ ತನಕವೂ ಸೇಡಿನ ಭಾವನೆಯನ್ನು ಬಿಡುವುದಿಲ್ಲ. ಆಸುಪಾಸಿನಲ್ಲಿ ಸಿಕ್ಕಿದ ಕಲ್ಲು, ಮರಗಳನ್ನು ಕಚಕಚನೆ ಕಡಿಯುವುದನ್ನು ಕಂಡೇ ಆ ಪ್ರಾಣಿಗಳ ಸೇಡಿನ ಸ್ವರೂಪವನ್ನು ಮನದಟ್ಟು ಮಾಡಿಕೊಳ್ಳಬಹುದು. ಹಂದಿ ಆಹಾರ ಸೇವಿಸುವಾಗಲೂ ಸ್ನಾಯು ಸ್ಥಿರತೆಯನ್ನುಳಿಸಿಕೊಳ್ಳುವ ಪ್ರಾಣಿ. ಹುಲಿಯು ಮೃದು ಶರೀರದ ಹೆಣ್ಣಿಗ. ಗುಂಡು ಅದರ ದೇಹಕ್ಕೆ ಬಿದ್ದೊಡನೆ ಈಚಿ ಹೊಡೆಯಿಂದ ಸುಲಿದು ಹೋಗುವುದೇ ಜಾಸ್ತಿ. ಹಂದಿಗೆ ಕೆಲವೊಮ್ಮೆ, ಕೆಲವು ಕೋವಿಯ ಗುಂಡು ಚರ್ಮಕ್ಕೆ ಕೂಡಾ ನಾಟದೆ ಟೊಯ್ಯೆಂದು ಹಿಂದೆ ಹಾರಿದ ಸಂದರ್ಭವೂ ಇದೆ. ಹಂದಿಗೆ ಈಡುಗಾರನ ಇರವು ಗೊತ್ತಾ ದೊಡನೆ ಅದು ಮಾಂಸಖಂಡಗಳನ್ನು ಸೆಟೆಯಿಸಿಕೊಂಡು ನಿಂತಿದೆಯೆಂದೇ ತಿಳಿಯಬೇಕು. ಅದು ಆ ಹೊತ್ತಿನಲ್ಲಿ ರೋಮರಾಜಿಯನ್ನು ನಿಗುರಿಸಿ ನಿಲ್ಲುವುದರಿಂದ ಸೆಟೆದು ನಿಂತ ಬೆನ್ನಿನ ನಿಬಿಡ ರೋಮವು ಹಂದಿಯ ಎತ್ತರವೆಂದೇ ಭ್ರಮಿಸುವಂತೆ ಮಾಡುತ್ತದೆ. ಈಡುಗಾರನು ಕುತ್ತಿಗೆಯ ಮರ್ಮಸ್ಥಾನವನ್ನು ಗಮನಿಸಿ ಈಡುಮಾಡಿದರೆ ರೋಮ ಸುಡಿಸಿಕೊಂಡು ಪಲಾಯನಗೈವ ಹಂದಿ ಮತ್ತೆ ಕಾಣಸಿಗದು. ಪಳಗಿದ ಶಿಕಾರಿಯು ನಾಲ್ಕು ಬೆರಳು ನಿಗುರಿಸಿ ನಿಂತ ರೋಮದ ಅಳತೆಯನ್ನು ಉಳಿದು ಕತ್ತಿನ ಮಧ್ಯ ಭಾಗವು ಸಿಗಬೇಕಿದ್ದರೆ, ನಾಲ್ಕು ಬೆರಳು ತಗ್ಗಿಸಿ ಹೊಡೆದರೆ ಈಡು ಮರ್ಮಕ್ಕೆ ನಾಟುವುದು. ಹಂದಿಗಾಗಲೀ, ಹುಲಿಗಾಗಲೀ ಕೈಗಳ ಮುಂದೆ ಕತ್ತಿನ ಭಾಗಕ್ಕೆ ಹೊಡೆಯುವುದು ಈಡುಗಾರನ ಜಾಣ್ಮೆ. ಆ ಭಾಗದಲ್ಲಿ ಚರ್ಮವು ತೆಳು; ಚರ್ಬಿಯಿಲ್ಲ. ಅಲ್ಲದೆ ಶ್ವಾಸನಾಳವು ಕುತ್ತಿಗೆಯಿಂದ ಮೂಗಿನೆಡೆ ಚಾಚಿರುವ ಸ್ಥಳವಾದುದರಿಂದ ಅಲ್ಲಿ ಒಡೆದು ಶೀಘ್ರ ಮರಣವನ್ನು ಹೊಂದು ವುದು. ಕೈಯ ಹಿಂಬದಿಗೆ ಹೊಡೆದರೆ ಪೆಟ್ಟಾದ ಸ್ಥಳದಲ್ಲಿ ಚರ್ಬಿಯು ತುಂಬಿಕೊಂಡು, ಗಾಯ ಒಗ್ಗೂಡಿ, ಮೃಗವು ಚೇತರಿಸಿಕೊಂಡು ಮೈಲು ಗಟ್ಟಲೆ ಓಡಿ,ನೀರು ಕುಡಿದು, ಸತ್ತುಹೋದ ಪ್ರಸಂಗಗಳಿವೆ. ಆದುದರಿಂದಲೇ

ಜೀವಾಂತಿಕ ಪೆಟ್ಟು ತಿಂದ ಮೃಗವನ್ನು ನೀರ ತೊರೆಯ ತನಕ ಹಿಂಬಾಲಿಸ ಬೇಕೆಂಬುದು ಬೇಟೆಯ ನಿಯಮ. ಬೇಟೆಯಲ್ಲಿ ಅವಸರ, ಅಜಾಗರೂಕತೆ ಎಂದಿಗೂ ಸಲ್ಲದು.

ಬೇಟೆಗೂ ಒಂದು ನೀತಿಸಂಹಿತೆ ಇದ್ದೇ ಇದೆ. ಇದನ್ನು ಉಲ್ಲಂಘಿಸು ವುದು ಪಾಪಕರ. ಮೃಗವಾವುದೆಂದು ತಿಳಿಯದೆ, ಅದು ತನಗೆ ಬೇಕಾದುದೋ ಬೇಡವಾದುದೋ ಎಂದು ಖಚಿತ ಮಾಡಿಕೊಳ್ಳದೆ ಕೋವಿ ಯೆತ್ತಬಾರದು. ಎತ್ತಿದ ಬಳಿಕ ಕೇವಲ ನಾನೂ ಹೊಡೆದೆ ಎನ್ನಿಸಿ ಕೊಳ್ಳಲು, ಮೃಗವನ್ನು ನೋಯಿಸುವುದಕ್ಕಾಗಿ ಮಾತ್ರ ಹೊಡೆಯಲಾಗದು. ಹೊಡೆದೆಯೋ, ಅದು ಸಾಯಲೇಬೇಕು" ಹೀಗೆ ಮರ್ದಾಳಕ್ಕೆ ತಲುಪುವ ತನಕವೂ ಅವರ ಉಪದೇಶ ಸಾಗಿಯೇ ಇತ್ತು. ಅವರ ಅಂದಿನ ಬೋಧೆ ನನ್ನ ಪಾಲಿಗೆ ಚಿರಸ್ಮರಣೀಯವಾದ ಪಳೆಯುಳಿಕೆ. ಗಾಡಿಯು ಮರ್ದಾ ಳಕ್ಕೆ ಬಂತು. ಮೆರವಣಿಗೆಯು ಹಿಂದಿನಿಂದಲೇ ವಿಜೃಂಭಣೆಯಿಂದ ಬರು ತ್ತಿತ್ತು. ಗಾಡಿಯಿಂದ ಇಳಿದ ಅಜ್ಜಯ್ಯನವರು ಕೋವಿಯನ್ನು ಹೆಗಲಿ ಗೇರಿಸಿ "ನಾನು ಮುಂದಾಗಿ ಮನೆಗೆ ಹೋಗುವೆ. ನೀವೆಲ್ಲ ಕಡಬದ ತನಕ ಮುಂದುವರಿದು ಜಾಗ್ರತೆಯಾಗಿ ಬನ್ನಿ" ಎಂದು ಆದೇಶಿಸಿದರು. ಮನೆಯತ್ತ ಹೆಜ್ಜೆ ಹಾಕುತ್ತ ಅವರು ಸಾಗಿದಾಗ ಬಾಯಿ ಬಿಟ್ಟಿದ್ದ ಅವರ ಕಾಲಿನ ಬೇಡಿ ಯಿಂದಾದ ಟಸ್ - ಟಸ್ ಸದ್ದು ಮಾರ್ದನಿಸುತ್ತಿತ್ತು.

# ಜೀವಂತ ಹುಲಿಯ ಮೀಸೆಯನ್ನು ಕಿತ್ತು ತರುವ ಮೋಂತು

ಇದು ಸುಮಾರು 40, 45 ವರುಷಗಳ ಹಿಂದಿನ ವಿಚಾರ. ಉಪ್ಪಿನಂಗಡಿಯಿಂದ ಏಳೆಂಟು ಮೈಲು ದೂರದಲ್ಲಿ ನಮ್ಮ ಭಾವ ನಟ್ಟಿಬೈಲು ಸಂಜೀವ ರೈಗಳ ವಾಸ. ಪಿಲಿಗೂಡಿನಲ್ಲಿ ಪಟೇಲರಾಗಿ ಅವರು ಪ್ರಸಿದ್ಧರಾಗಿದ್ದ ಸಮಯವದು. ನಾನು ಆಗ ನಾವೂರಿಗೆ ಹೋಗಿ 2, 3 ವರ್ಷಗಳಾಗಿದ್ದವು. ಉತ್ತಮ ಶಿಕಾರಿ ಎಂಬ ಪ್ರಸಿದ್ಧಿ ಅದಾಗಲೇ ನನಗೆ ಒದಗಿತ್ತು. ಆದರೆ ಆಗಿನ್ನೂ ಹದಿನೆಂಟು ವರ್ಷ ಪ್ರಾಯವಾಗದ್ದರಿಂದ ಕೋವಿಯ ಲೈಸನ್ಸ್ ನನಗೆ ಸಿಕ್ಕಿರಲಿಲ್ಲ. ಮುಗ್ಗ ಕುಂಜಿರ ಪೂಜಾರಿಗಳ ಅಳಿಯ ಕಂಟ್ರಾಕ್ಟರ್ ಕೃಷ್ಣಪ್ಪ ಪೂಜಾರಿಗಳ ಮತ್ತು ಅವರ ಹೆಂಡತಿಯ ತಂದೆ ನಾರ್ಣಪ್ಪ ಪೂಜಾರಿಗಳ ಕೋವಿಗಳನ್ನು ನಾನು ಯಥೇಚ್ಛ ಬಳಸುತ್ತಿದ್ದೆ. ಪರವೂರಿನಲ್ಲಿ ನನ್ನ ಕೈಯಲ್ಲಿ ಕೋವಿಯಿದ್ದರೆ ನಾನೇ ಆಗ ಕುಂಜಿರ ಪೂಜಾರಿಗಳ ಅಳಿಯ ಕೃಷ್ಣಪ್ಪ ಪೂಜಾರಿ ! ನಾನು ಆ ಕೋವಿಯನ್ನು ಹಿಡಿದು ಘಟ್ಟದ ತುದಿಯಿಂದ ಸಮುದ್ರದ ಬದಿಯ ಬಂಟ್ವಾಳದ ತನಕ ಬೇಟೆಯಾಡಿ ತೊಂದರೆಗೆ ಸಿಕ್ಕದ ಸಾಹಸಿ !

ಅಂದು, ನಾನು ನಮ್ಮ ಸುಳ್ಯೋಡಿ ಮನೆಯಲ್ಲಿ - ಕಾಫಿ ಕುಡಿದು ನೆರೆಕರೆಯವರ ಪಂಚಾಯತಿಕೆಯಲ್ಲಿ ಪಾಲುಗೊಂಡು ಐದಾರು ಜನ ಗೃಹಸ್ಥರೊಂದಿಗೆ ಮಾತುಕತೆಯಾಡುತ್ತಿದ್ದೆ. ರೋಟಿನ ಬದಿಯಿಂದ ಸೈಕಲ್ ಬೆಲ್ ಕೇಳಿಸಿತು. ಮನೆಯಲ್ಲಿದ್ದ ಬೇಟೆ ನಾಯಿಗಳ ಭಯದಿಂದಾಗಿ ಯಾರಾದರೂ ದೂರದಿಂದಲೇ ಮನೆಯವರನ್ನು ಎಚ್ಚರಿಸಿಯೇ ಬರಬೇಕಿತ್ತು. ಸದ್ದಿಲ್ಲದೆ ಬಂದರೆ ಒಂದೋ ಹಾಗೆ ಬಂದವರು ಮರವೇರಬೇಕು; ಇಲ್ಲವಾದರೆ ನಮ್ಮ ನಾಯಿಗಳಿಗೆ ತಮ್ಮ ದೇಹದಿಂದ ಏನಾದರೂ ಪಾಲು ತೆರಬೇಕು ! ಅಂದೂ ನಾಯಿಗಳನ್ನು ಬಿಟ್ಟಿತ್ತು. ಹಾಗಾಗಿ ಬೆಲ್ ಸದ್ದು ಕೇಳಿ ಆತುರಾತುರವಾಗಿ ಹೊರಬಂದೆ. ಸಂಜೀವ ರೈಗಳ ಅಡುಗೆಯಾಳು ರಾಮಣ್ಣ

ಗೇಟಿನ ಬಳಿಯಲ್ಲಿ ಸೈಕಲ್ ಹಿಡಿದು ನಿಂತಿದ್ದುದು ಕಂಡಿತು. ನಮ್ಮ ನಾಯಿಗಳು ಬೊಬ್ಬಿಡುತ್ತಾ, ಆ ಕಡೆಗೆ ಧಾವಿಸುತ್ತಿದ್ದವು. "ಟಾಮು, ರೂಬಿ" ಎಂದು ಅವುಗಳನ್ನು ಕರೆದು ಮುಂದೊತ್ತದಂತೆ ತಡೆದು ಅವನನ್ನು ಬಳಿಗೆ ಕರೆದುದಾಯಿತು. ಸೈಕಲನ್ನು ಮರಕ್ಕಾನಿಸಿ, ಬೆವರನ್ನು ಒರಸಿ ಕೊಳ್ಳುತ್ತಾ ಒಳಗೆ ಬಂದವನೇ ಆತ "ಅಣ್ಣಾ, ನೀವು ಕೂಡಲೇ ಪಿಲಿಗೂಡಿಗೆ ಬರಬೇಕಂತೆ. ಅಲ್ಲಿ ಕರಾವಿನ ಕಪಿಲೆ ದನವನ್ನು ಹುಲಿ ಹಿಡಿದಿದೆ. ಇಂದು ಯಜಮಾನರಿಗೂ ಸುಖವಿಲ್ಲ. ನೀವು ಕೂಡಲೇ ಸೈಕಲಿನಲ್ಲಿ ಹೋಗ ಬೇಕಂತೆ. ನಾನು ಬೆಳ್ತಂಗಡಿ ತನಕ ನಡೆದು ಬಂದು ರಾತ್ರಿಯಾಗುವಾಗ ಬಸ್ಸಿನಲ್ಲಿ ಬರುತ್ತೇನೆ" ಎಂದು ಒಂದೇ ಉಸಿರಿನಲ್ಲಿ ತಿಳಿಸಿದ.

ಕಪಿಲೆ ವರ್ಣದ ದನವು ಹಟ್ಟಿಯಲ್ಲಿದ್ದರೆ ಹಟ್ಟಿಗೆ ಮಂಗಳ. ಮನೆಯ ವರಿಗೆ ಶುಭ. ಆ ಕಪಿಲೆ ದನವು ಮನೆಯವರ ಅತಿ ಪ್ರೀತಿಯ ದನವಾಗಿತ್ತು. ನಮ್ಮ ಅಕ್ಕ ಲಲಿತಮ್ಮನವರು ಅದರ ಹಣೆಗೆ ಕುಂಕುಮವಿಟ್ಟು ಪ್ರದಕ್ಷಿಣೆ ಬಂದು ನಮಸ್ಕರಿಸದೆ ತೊಟ್ಟು ನೀರೂ ಮುಟ್ಟುತ್ತಿರಲಿಲ್ಲ. ಅದರ ಹಾಲು ಕರೆಯುವಾಗ ನಾವಾರಾದರೂ ಬಳಿಗೆ ಹೋದರೆ, ದೃಷ್ಟಿಯಾದೀತೆಂಬ ಭೀತಿಯಿಂದ ನಮ್ಮನ್ನು ಉಪಾಯವಾಗಿ ಸಾಗಹಾಕುತ್ತಿದ್ದರು. ಅಷ್ಟು ಹಾಲು ಕೊಡುವ ದನ ಆ ಆಸುಪಾಸಿನಲ್ಲೇ ಇರಲಿಲ್ಲ. ಅದರ ಕೊಂಬಿನ ಆಕಾರ, ಬಣ್ಣ, ಶರೀರದ ಗಾತ್ರ ಎಲ್ಲ ಅಷ್ಟೊಂದು ಒಪ್ಪ, ಓರಣ, ಆಕರ್ಷಕ. ಬುದ್ಧಿಯೂ ಅಂತಹದೇ. ನಮಗೆಲ್ಲ ಅದರ ಮೇಲೆ ಎಷ್ಟು ಮಮತೆಯೆಂದರೆ, ನಮಗೆ ಇಕ್ಕಿದ ದೋಸೆ, ಇಡ್ಡಲಿಗಳಲ್ಲಿ ನಾವು ಎಂಜಲು ಮಾಡುವುದಕ್ಕೆ ಮೊದಲು ಕಪಿಲೆಗೆಂದು ಪ್ರತ್ಯೇಕವಾಗಿ ತೆಗೆದಿರಿಸಿ ಕೊಡುತ್ತಿದ್ದೆವು. ಎಂಜಲು ಮುಟ್ಟಿದರೆ ಕಪಿಲೆ ತಿನ್ನುತ್ತಲೂ ಇರಲಿಲ್ಲವಂತೆ. ಎಂಜಲಾದ ಕೈಯಿಂದ ಆ ದನಕ್ಕೆ ಕೊಡಹೋದರೆ ಅಕ್ಕ ನಮ್ಮನ್ನು ತರಾಟೆಗೆ ತೆಗೆದುಕೊಳ್ಳದೆ ಇರುತ್ತಿರಲಿಲ್ಲ! ಅಂಥ ದನವು ಈಗ ಹುಲಿಯ ಪಾಲಾದುದನ್ನು ಕೇಳಿ ನನಗೂ ನಮ್ಮ ಕುಟುಂಬದ ಒಂದು ಅಂಗವೇ ಕಳಚಿದಂತೆ ಭಾಸವಾಯಿತು. ಉಕ್ಕಿ ಬಂದ ಕಣ್ಣೀರನ್ನು ಅಂಗವಸ್ತ್ರದಿಂದ ಒರೆಸಿಕೊಂಡು ಪಂಚಾಯತಿಕೆಗಾಗಿ ಸೇರಿದ್ದವರನ್ನು ಮುಂದೊಂದು ದಿನ ಸೇರುವಂತೆ ತಿಳಿಸಿ ಹೊರಡುವ ಸಿದ್ಧತೆ ಮಾಡಿದೆ. ರಾಮಣ್ಣನನ್ನು ಹಿಂದಿನಿಂದ ಬರುವಂತೆ ಹೇಳಿ ನಾನು ನನ್ನ

ಶಿಕಾರಿ ಕತ್ತಿಯನ್ನು ಮಾತ್ರ ತೆಗೆದುಕೊಂಡು ಸೈಕಲ್ ಹತ್ತಿ, ನಮ್ಮಲ್ಲಿಂದ ಸುಮಾರು ಹದಿನಾಲ್ಕು ಮೈಲು ದೂರದ ಪಿಲಿಗೂಡಿಗೆ ತ್ವರೆಯಿಂದ ಹೊರಟೆ. ಸಂಜೀವ ರೈಗಳು ಅಸ್ವಸ್ಥರಾಗಿದ್ದುದರಿಂದ ದನವು ಬಿದ್ದಲ್ಲಿ ಹುಲಿ ಬೇಟೆಗಾಗಿ ಹತ್ತಿರದ ಮರ ಹುಡುಕಿ ಅಟ್ಟಳಿಗೆ ಕಟ್ಟಿಸಿ ಬೇಕಾದ ಸಿದ್ಧತೆ ಗೆಯ್ಯುವ ಜವಾಬ್ದಾರಿಯೆಲ್ಲ ನನ್ನದೆಂದು ಆ ಬಗೆಗೆ ಯೋಚಿಸುತ್ತಲೇ ಸೈಕಲ್ ತುಳಿಯುತ್ತಿದ್ದೆ. ಇದು ಪಳಗಿದ ಶಿಕಾರಿಗಳಿಗೆ ಮಾತ್ರ ಸಾಧ್ಯ. ಸ್ವಲ್ಪ ವ್ಯತ್ಯಾಸ, ಆಭಾಸವಾದರೂ ಪಪ್ಪಿನ ಹತ್ತಿರ ಹುಲಿಯು ಸೋಂಕಲಾರದು.

ಪಿಲಿಗೂಡು ಮನೆಗೆ ತಲುಪಿದೆ. ಅಕ್ಕನ ಮುಖವು ಮಗಳನ್ನು ಕಳೆದುಕೊಂಡ ತಾಯಿಯಂತೆ ನಿಸ್ತೇಜವಾಗಿದೆ. ರೈಗಳು ಮಂಚದಲ್ಲಿ ಮಲಗಿಕೊಂಡಿದ್ದಾರೆ. ಅಂಗಳದಲ್ಲಿ ಸೇರಿದ್ದ ಏಳೆಂಟು ಜನರು ಇದೇ ವಿಚಾರವಾಗಿ ಮಾತನಾಡುತ್ತಿದ್ದಾರೆ. ನಾನು ಬಚ್ಚಲು ಮನೆಗೆ ಹೋಗಿ ಕೈಕಾಲು ತೊಳೆದು, ಬಾಯಾರಿಕೆ ಪರಿಹರಿಸಿಕೊಂಡು "ದನವನ್ನು ಹುಲಿ ಹಿಡಿದುದೆಲ್ಲಿ?" ಎಂದು ಕೇಳಿದೆ.

ಹುರಿಮೀಸೆಯ, ಕಪ್ಪು ಬಣ್ಣದ, ಕುಡಿದು ಕಣ್ಣು ಕೆಂಪಾದ, ಕಡಿದರೆ ನನ್ನಂಥ ಎರಡು ಜನರ ದೇಹದ ಮೋಂತು ತೊದಲುತ್ತಾ 'ಹಾದಿ ಬದಿಯ ಹಾಡಿಯಲ್ಲಿ' ಎಂದು ಉತ್ತರಿಸಿದ. ಮನೆಗೆ ಸಮೀಪವೇ; ಸಾಧಾರಣ ಅರ್ಧ ಮೈಲು ದೂರದಲ್ಲಿ ಈ ಹಾಡಿ ಇದೆ. ಬಳಿಯಲ್ಲೆ ರೈಗಳು ಕಡಿಸಿದ ಒಂದು ಚಿಕ್ಕ ಕೆರೆಯೂ ಇದೆ. ನೀರು ಕುಡಿಯಲೆಂದು ಅಲ್ಲಿಗೆ ಹೋದ ಕಪಿಲೆಯನ್ನು ಹುಲಿ ಹಿಡಿದದ್ದು. ಬಳಿಯಲ್ಲಿ ಸೊಪ್ಪು ಹೆರೆಯುತ್ತಿದ್ದವರ ಬೊಬ್ಬೆಗೆ ಗಲಿ ಬಿಲಿಗೊಂಡು, ಕೊಂದಿದ್ದ ದನವನ್ನು ಮುಟ್ಟದೆ ಹುಲಿ ಓಡಿತೆಂದು ಗೊತ್ತಾಯಿತು. 'ಅದು ಕತ್ತಲೆಯಲ್ಲಿ ಮತ್ತೆ ಬರದೆ ಇರಲಾರದೆಂದೂ, ರೈಗಳಿಗೆ ಅಸ್ವಾಸ್ಥ್ಯವಾದ್ದರಿಂದ ನನಗೆ ಕರೆ ಕಳುಹಿಸಬೇಕಾಯಿತೆಂದೂ, ಆ ಹುಲಿಯ ಹೆಣವನ್ನು ನೋಡದೆ ಅಕ್ಕನವರು ನೀರನ್ನು ಸಹ ಸೇವಿಸಲಿಕ್ಕಿಲ್ಲವೆಂದು ಆಣೆಹಾಕಿಕೊಂಡಿದ್ದಾರೆಂದೂ, ನಾನು ಒಂದು ವೇಳೆ ಬರದೆ ಹೋಗಿದ್ದರೆ ಮೋಂತುವೇ ಹುಲಿ ಹೊಡೆಯಲು ಹೋಗುತ್ತಿದ್ದನೆಂದೂ, ಕೂಡಿದವರಲ್ಲಿ ಒಬ್ಬರು ವರದಿಯೊಪ್ಪಿಸಿದರು. ಅಷ್ಟರಲ್ಲಿ ಅವರೆಡೆಯಿಂದ ಮತ್ತೊಂದು ಧ್ವನಿ- "ಮೋಂತು ಹೊಡೆಯುವುದು ಗಡಂಗಿನಲ್ಲಿ ಕಳ್ಳು!" ಎಂದು

ಹೊರಟುದನ್ನು ಕೇಳಿದ ಮೋಂತುವು ಸಿಟ್ಟಿನಿಂದ- "ಏನೆಂದೆ ಮಗನೆ? ನಾನು ಹೊಡೆಯುವುದು ಕಳ್ಳೆ? ಮನಸ್ಸು ಮಾಡಿದೆನೆಂದರೆ ಈಗ ಹೋಗಿ ಹುಡುಕಿ ಆ ಹುಲಿಯು ಮಲಗಿದಲ್ಲಿಂದ ಅದರ ಮೀಸೆಯನ್ನೇ ಕಿತ್ತು ತಂದೇನು!" ಎಂದು ಅಬ್ಬರಿಸಿದ್ದೇ ಅಬ್ಬರಿಸಿದ್ದು! ಅವನ ಧೈರ್ಯ, ಸಾಹಸದ ಮಾತಿನಿಂದ ಬೆರಗಾದ ನಾನು, 'ಈ ಜನ ಆಗಬಹುದು' ಎಂದು ಭಾವಿಸಿಕೊಂಡೆ. ನಾವು ಕೆಲವು ಜನರು ಕೂಡಿಕೊಂಡು ಕೋವಿಯೊಡನೆ ದನ ಬಿದ್ದಲ್ಲಿಗೆ ಬಂದೆವು.

ಕಪಿಲೆಯು ಕೈಕಾಲು ಚಾಚಿ ಚಿರನಿದ್ರೆಯಲ್ಲಿದೆ. ಅದು ಕರುಳು ಕರಗುವ ದೃಶ್ಯ. ಬಳಿಯಲ್ಲಿಯೇ ಸುರಗಿಯ ಮರವೊಂದು ನೀಳವಾದ ಕೊಂಬೆಗಳನ್ನು ಚಾಚಿ ನಿಂತಿದೆ. ಅದಕ್ಕೆ 20-25 ಮಾರು ದೂರದಲ್ಲಿ ದನದ ಶವವಿದೆ. ಪೈರಿನ ಸೂಡಿಗಳನ್ನು ಹೊಡೆದು ಭತ್ತವನ್ನು ಪ್ರತ್ಯೇಕಿಸುವ ಸಾಧನವಾದ ಪಡಿಯನ್ನು ತಂದು ಮರದಲ್ಲಿ ಅಟ್ಟಳಿಗೆಯ ನಿರ್ಮಾಣಕ್ಕೆ ವ್ಯವಸ್ಥೆ ಮಾಡಿದೆವು. ನೆಲದಿಂದ ಸುಮಾರು 25 ಮಾರು ಎತ್ತರದಲ್ಲಿ ಮರದ ರೆಂಬೆಗಳಲ್ಲಿ ಪಡಿಯನ್ನು ಭದ್ರವಾಗಿ ಸ್ಥಾಪಿಸಿ, ಕಾಲು ನೀಡಿ ಕುಳಿತುಕೊಳ್ಳಲು ಸಾಧ್ಯವಾಗುವಂತೆ ಅಟ್ಟಳಿಗೆ ಇರುತ್ತದೆ. ಅಟ್ಟಳಿಗೆಯಲ್ಲಿ ಈಡುಗಾರನು ಕುಳಿತುಕೊಂಡರೆ ಅವನಿಗಿಂತ ಸ್ವಲ್ಪ ಮೇಲಕ್ಕೆ ಲೈಟ್ ಬೀರುವವನು ಕೂತುಕೊಳ್ಳಲು ಹಲಗೆಯೊಂದನ್ನು ಕಟ್ಟುವ ಕ್ರಮ. ಅಲ್ಲಿಂದ ಲೈಟ್ ಹಾಯಿಸಿದರೆ ಬಿದ್ದ ದನ ಸರಿಯಾಗಿ ಕಾಣುವಂತೆ ಇರಬೇಕು. ಹೀಗೆ ನಿರ್ಮಾಣವಾದ ಅಟ್ಟಳಿಗೆಯನ್ನು ಎಲೆಗಳಿಂದ ಮರೆಮಾಡಿ ಹೊರಗಿನಿಂದ ಯಾವುದೇ ಪ್ರಾಣಿಗೆ ಇದರ ಸುಳಿವು ಸಿಗದಂತೆ ಮಾಡಬೇಕು. ಈ ಎಲ್ಲ ವ್ಯವಸ್ಥೆಗಳನ್ನು ಸಕ್ರಮವಾಗಿ ನೆರವೇರಿಸಿದೆವು. ದನದ ಶವ ಸ್ಪರ್ಶವಾಗದಂತೆ ಎಚ್ಚರ ವಹಿಸಿ ಹುರಿಗೆಜ್ಜೆಯ ಸಂಕೋಲೆಯೊಂದನ್ನು ಅದರ ಕಾಲಿಗೆ ಸಿಲುಕಿಸಿ ಬಳಿಯ ಪೊದೆಗೆ ಕಟ್ಟಿದೆವು. ಮನುಷ್ಯ ಸ್ಪರ್ಶವಾದ ಸತ್ತ ಪ್ರಾಣಿಯನ್ನು ಹುಲಿಯು ಮುಟ್ಟಲಾರದೆಂದು ಪ್ರತೀತಿ. ಹುರಿಗೆಜ್ಜೆಯ ಸಂಕಲೆಯನ್ನು ಕಟ್ಟುವುದೇಕೆಂದರೆ ಕತ್ತಲೆಯಲ್ಲಿ ಸದ್ದಿಲ್ಲದೆ ಬರುವ ಹುಲಿಯು ತನ್ನ ಗ್ರಾಸವನ್ನು ಮೇಯುವ ಆತುರದಲ್ಲಿರಲು ಗೆಜ್ಜೆಯ ಸದ್ದು ಬೇಟೆಗಾರರಿಗೆ ಹುಲಿಯ ಆಗಮನದ ಸೂಚನೆಯಾಗಲು! ಹುರಿಗೆಜ್ಜೆಯ

'ಕಿಣಿಲ್' ಸದ್ದು ಕೇಳಿದೊಡನೆ ಲೈಟಿನವನು ಬೆಳಕನ್ನು ಆ ಎಡೆಗೆ ಬೀರಬೇಕು; ಈಡುಗಾರನು ಕೊಳ್ಳಿಯನ್ನು ಹೊಡೆದುರುಳಿಸಬೇಕು. ಇದಕ್ಕಾಗಿ ಅಟ್ಟಳಿಗೆ ಕಟ್ಟಿ ಬೇಟೆಯಾಡುವಾಗ ಈ ಕ್ರಮಗಳನ್ನು ಒಂದಿಷ್ಟೂ ತಪ್ಪದೆ ಪಾಲಿಸ ಬೇಕು. ಅಷ್ಟೆಲ್ಲ ಕೆಲಸಗಳನ್ನು ಪೂರೈಸಿ ಮನೆಗೆ ಬಂದೆವು.

ರಾತ್ರಿ ಹತ್ತು ಗಂಟೆಯ ಹೊತ್ತಾಗಿ ಸುತ್ತುಮುತ್ತಲ ಸದ್ದುಗದ್ದಲವು ಅಡಗದೆ ಹುಲಿಯು ತನ್ನ ಬೇಟೆಯಿದ್ದಲ್ಲಿಗೆ ಬರಲಾರದೆಂಬುದು ನಮಗೆ ಅನುಭವವೇದ್ಯ. ಕಿರು ಫಲಾಹಾರವನ್ನು ಮುಗಿಸಿ, ಅಕ್ಕನಿಗೆ ಹುಲಿ ಯನ್ನು ಕೊಂದು ಬರುವೆನೆಂದು ಭರವಸೆ ನೀಡಿದೆ. ರಾಮಣ್ಣ ಇನ್ನೂ ಬಂದಿಲ್ಲವಾದ್ದರಿಂದ ಬೇಟೆಯಲ್ಲಿ ನನಗೆ ಬೇಕಾದಂತೆ ಲೈಟ್ ಬೀರಿ ಸಹಕರಿಸುವ ನಿಷ್ಣಾತರಾರಿದ್ದಾರೆಂದು ಕೇಳಿದೆ. ಮೋಂತು ಠೀವಿಯಿಂದ ಮುಂದೆ ಬಂದು ನಿಂತು, "ನಾನು ಇರುವಾಗ ಬೇರೆ ಯಾರು, ಏಕೆ? ನಾನು ಲೈಟ್ ಹಾಕಿ ನಿಮ್ಮಲ್ಲಿ ಅದನ್ನು ಕೊಡುತ್ತೇನೆ. ನೀವು ಲೈಟನ್ನು ನಂದಿಸ ದಿದ್ದರೆ ಹಿಂದಿನಿಂದ ಹುಲಿಯನ್ನು ದೊಣ್ಣೆಯಿಂದಲೇ ಹೊಡೆದು ಕೊಂದೇನು! ನೀವು ಈಗ ರಾಮಣ್ಣ, ದೂಮಣ್ಣ ಎಂದು ಮೇಲೆ ಕೆಳಗೆ ನೋಡುತ್ತೀರೇಕೆ? ಇಂದು ನೀವು ಬರದಿದ್ದರೆ ನಾನೇ ಹೋಗಿ ಹೊಡೆಯುತ್ತಿದ್ದೆ" ಎಂದು ಬೊಬ್ಬೆ ಹೊಡೆದ. ನನಗೆ ಆತನ ಬೆಂಬಲದ ಬಗ್ಗೆ ಮತ್ತೊಮ್ಮೆ ಭರವಸೆ ದೊರೆತಂತಾಯಿತು. ಮನದಲ್ಲೇ 'ಈ ಎಳೆಪ್ರಾಯದಲ್ಲೆ ಏಳೆಂಟು ಹುಲಿ ಕೊಂದಿದ್ದ ನನಗೆ ಈ ಕಳ್ಳು ಕುಡುಕನಿಂದ ಸವಾಲೆ? ಇದು ನನ್ನ ಆತ್ಮ ಪ್ರತಿಷ್ಠೆಗೆ ಈತನೆಸೆದ ಪ್ರಶ್ನೆ - ನೋಡೋಣ' ಎಂದುಕೊಂಡೆ.

ರೈಗಳ B. S. A. ಜೋಡು ನಳಿಗೆಯ ಕೋವಿಗೆ, ಎರಡು ನಳಿಗೆ ಗಳಿಗೂ ಮೂರೂವರೆ ಇಂಚಿನ ಅಲ್ಫಾಮೇಕ್ಸ್ L. G. ತೋಟೆಯನ್ನು ತುಂಬಿಸಿ ಶಿಸ್ತಾಗಿ ಡ್ರೆಸ್‌ಮಾಡಿ ಸೊಂಟಕ್ಕೆ ತೋಟಾ ಪಟ್ಟೆಯನ್ನು ಬಿಗಿದು, ಚಳಿಗಾಲವಾಗಿದ್ದರಿಂದ ತಲೆಗೆ ಮಫ್ಲರ್ ಸುತ್ತಿ– ಯುದ್ಧಾತುರನಾಗಿ ಹೊರಡುವ ಯೋಧನಂತೆ – ಕೋವಿಯನ್ನು ಹೆಗಲಿಗೇರಿಸಿ, ಮನೆ ದೈವವನ್ನು ಮನಸಾ ಪ್ರಾರ್ಥಿಸಿ ಹೊರಟೆ. ಮೋಂತುವಿನೊಡಗೂಡಿ ಒಂಭತ್ತೂಕಾಲು ಗಂಟೆ ಹೊತ್ತಿಗೆ, ಅಟ್ಟಳಿಗೆ ಕಟ್ಟಿದ್ದ ಮರದ ಬಳಿಗೆ ತಲಪಿದೆ. ಮೋಂತುವಿನ ಕೈಗೆ ಕೋವಿ, ಲೈಟುಗಳನ್ನು ಕೊಟ್ಟು, ಮರವೇರಲು ಹೇಳಿದೆ. ಕೋವಿಯನ್ನು

ನಾನು ಕೂತುಕೊಳ್ಳಲಿರುವ ಅಟ್ಟಳಿಗೆಯಲ್ಲಿರಿಸಬೇಕೆಂದೂ, ನನ್ನ ಸೂಚನೆಯಾಗದೆ ಲೈಟ್ ಹಾಯಿಸಬಾರದೆಂದೂ ಕಿಣಿಲ್ ಶಬ್ದವು ಕೇಳಿ ಎರಡು ನಿಮಿಷಗಳಾಗುವಷ್ಟರಲ್ಲಿ ದನದ ಕುತ್ತಿಗೆಯ ಭಾಗಕ್ಕೆ ಬೆಳಕು ಬೀರಬೇಕೆಂದೂ ಹೆದರಬಾರದೆಂದೂ ಎಚ್ಚರಿಸಿದೆ. "ನಾನು ಹೆದರುವ ಸುದ್ದಿ ಬಿಡಿ, ನೀವು ಹುಲಿಯನ್ನು ಕಂಡು ಬೊಬ್ಬೆ ಹೊಡೆಯದಿದ್ದರೆ ಸಾಕು!" ಎಂದು ನನ್ನನ್ನೇ ಗೇಲಿಮಾಡಿ ಮರವೇರಿದ್ದ ಮೋಂತು. ಪೂರ್ವ ಸಿದ್ಧತೆಗಳನ್ನು ಯಥಾಪ್ರಕಾರ ನೆರವೇರಿಸಿ ಅಟ್ಟಳಿಗೆಯನ್ನಡರಿ ಕುಳಿತದ್ದಾಯಿತು.

ಹುಲಿಯ ನಿರೀಕ್ಷಣೆಯಲ್ಲಿ ಮೈಯೆಲ್ಲ ಕಿವಿಯಾಗಿ ತದೇಕಚಿತ್ತದಿಂದ ಉಸಿರನ್ನೂ ಸರಿಯಾಗಿ ಬಿಡದೆ, ತೊಡೆಯ ಮೇಲೆ ಕೋವಿಯಿರಿಸಿ, ಆಗಾಗ್ಗೆ ತೋಟೆಯ ಬೆಲ್ಟನ್ನು ಮುಟ್ಟಿ ನೋಡಿಕೊಳ್ಳುತ್ತ ಕಾದಿದ್ದೆ. ಕಾಲದ ಕಾಲು ಕುಂಟಾದಂತೆ ನಿಧಾನವಾಗಿ ಸಮಯ ಸರಿಯುತ್ತಿದೆ; ಸ್ಮಶಾನ ಮೌನ. ಒಮ್ಮೊಮ್ಮೆ ರಾತ್ರಿಂಚರ ಹಕ್ಕಿಗಳ ಕೂಗು, ಜೀರುಂಡೆಗಳ ಸದ್ದು. ದೂರದಿಂದ ನಾಯಿಗಳ ಊಳಿಡುವಿಕೆಯೂ ಕೇಳಿ ಬರುತ್ತಿತ್ತು. ಕೈಯಲ್ಲಿ ವಾಚ್ ಇದ್ದರೂ ಲೈಟ್ ಹಾಕಿ ನೋಡಿಕೊಳ್ಳುವಂತಿಲ್ಲ. ಅಟ್ಟಳಿಗೆಯೇರಿ ಸುಮಾರು ಒಂದೂವರೆ ಗಂಟೆ ಹೊತ್ತಾಗಿರಬಹುದು. ಅತ್ತಿತ್ತ ಅಲುಗಾಡದೆ ಕುಳಿತಿದ್ದುದರಿಂದ ದೇಹವು ಜಡವಾಗುತ್ತ ಬರುತ್ತಿದೆ. ಹೊರಳಿದರೆ ಅಟ್ಟಳಿಗೆಯ ಸ್ವಲ್ಪ ಮಾತ್ರ ಸದ್ದೂ ಹುಲಿಯ ಬರುವಿಕೆಯನ್ನು ತಡೆಯಬಹುದು! ಇಷ್ಟು ಹೊತ್ತಿಗೆ ಹುಲಿಯ ಸವಾರಿ ಬರಬೇಕಿತ್ತು. ಇನ್ನೂ ಏಕೆ ಬಂದಿಲ್ಲವೋ— ಹೀಗೆಲ್ಲ ಚಿಂತಿಸುತ್ತಿದ್ದೆ.

ಕಿಣಿಲ್ ಸದ್ದಾಯಿತು. ಓಹೋ, ಹುಲಿ ಬಂತೇ ಬಂತು ಎಂದು ಭಾವಿಸಿಕೊಳ್ಳುತ್ತಿದ್ದೆ. ಅಷ್ಟರಲ್ಲಿ ಮತ್ತೊಮ್ಮೆ ಸಂಕಲೆಯ ಎಳೆತದೊಂದಿಗೆ ಗೆಜ್ಜೆಯ ಸದ್ದು ಕೇಳಿಸಿತು- ಇನ್ನೇನು? ಮೋಂತು ಲೈಟ್ ಬೀರುತ್ತಾನೆಂದು ನಾನು ಕೋವಿಯನ್ನು ಎದೆಗಾನಿಸಿ ಸಿದ್ಧನಾದೆ; ಕಾದೆ. ಏನು? ಮೋಂತು ನಿದ್ದೆ ಹೋಗಿರಬಹುದೆ? ಎಂದು ಆಲೋಚಿಸಿದೆ. ಲೈಟಿನ ಬೆಳಕಿಲ್ಲ; ನಿಧಾನವಾಗಿ ನಾವು ಕೂತಿದ್ದ ಮರದ ತುದಿಯು ಅಲುಗಿದಂತಾಯಿತು. ಇದೇನು? ಹುಲಿಯು ತನ್ನ ತಿನಿಸನ್ನು ಬಿಟ್ಟು ನಾವು ಕುಳಿತಿದ್ದ ಮರದೆಡೆಗೆ ಆಕ್ರಮಿಸುವುದಕ್ಕಾಗಿ ಬಂತೆ? ಹೀಗೆ ಯೋಚಿಸುತ್ತಿದ್ದಾಗ ಮೋಂತು

ಕುಳಿತ ಗೆಲ್ಲು ಗಡಗಡನೆ ನಡುಗಲು ತೊಡಗಿತು. 'ಓ, ಇದು ಜೀವಂತ ಹುಲಿಯ ಮೀಸೆ ಕೀಳುವೆನೆಂಬ ಸಾಹಸಿ ಮೋಂತುವಿಗೆ ಈಗ ಹುಲಿಭೂತ ಹಿಡಿದ ದರ್ಶನ!' ಎಂದು ನನಗೆ ಅರಿವಾಗಲು ಬಹಳ ವೇಳೆ ಬೇಕಾಗಲಿಲ್ಲ. ಮೋಂತು ಕುಳಿತಿದ್ದ ಗೆಲ್ಲಿನ ಅಲುಗಾಟ ಜಾಸ್ತಿಯಾಗುತ್ತಿತ್ತು. ಇನ್ನು ಅವನು ಲೈಟ್ ಹಾಯಿಸುವ ವಿಚಾರವಿರಲಿ, ಮರದಿಂದ ಬಿದ್ದು ಕೈಕಾಲು ಮುರಿದು ಪ್ರಾಣಾಪಾಯಕ್ಕೆ ಈಡಾಗದಿದ್ದರೆ ಸಾಕೆಂದುಕೊಂಡೆ. ಅವನಿಂದ ಲೈಟನ್ನು ನಾನೇ ತೆಗೆದುಕೊಂಡು ಬೆಳಕು ಹಾಯಿಸಬೇಕೆಂದು ಗೆಲ್ಲನ್ನು ಆಧರಿಸಿ ನಿಲ್ಲಲು ಹವಣಿಸಿದೆ. ಅಷ್ಟರಲ್ಲಿ ನನ್ನ ತಲೆಗೆ ಮೇಲಿನಿಂದ ಅದೇನು ಹಸಿ ಹಸಿಯಾಗಿ ಬೀಳುತ್ತಿದೆ? ಥೂ! ಒಂದೆಡೆಯಲ್ಲಿ ಹುಲಿ ಓಡಿ ಹೋದೀತೆಂಬ ಆತಂಕ, ಇನ್ನೊಂದೆಡೆ ಈ ಕಳ್ಳುಕುಡುಕನ ಬೊಬ್ಬಾಟವನ್ನು ನಂಬಿ ಅವನೊಡಗೂಡಿ ಬಂದು ರಾತ್ರಿಯಲ್ಲಿ ಮಾನವ ಮೂತ್ರದಿಂದ ಸಚೇಲ ಸ್ನಾನವಾಯಿತಲ್ಲಾ ಎಂಬ ಕ್ರೋಧ, ಚಡಪಡಿಕೆ! ಕೋಪವನ್ನು ತಡೆದು ಕೊಳ್ಳಲಾಗದೆ ಎದ್ದು ನಿಂತು ಮೋಂತು ಕುಳಿತೆಡೆ ತಡಕಿ ಅವನ ಕೈಯಿಂದ ಜಾರಿ ಬೀಳಲು ತಯಾರಾಗಿದ್ದ ಟಾರ್ಚ್‌ಲೈಟನ್ನು ಎಳೆದುಕೊಂಡು ಕೋವಿಯ ಅಡಿಯಲ್ಲಿ ಅದನ್ನಿರಿಸಿ ಲೈಟ್ ಹಾಯಿಸಿ ಹುಲಿಗೆ ಹೊಡೆಯುವು ದೆಂದು ತಿರುಗಿದೆ.

ಕಿಣೆಲ್ ಸದ್ದು ಕೇಳುತ್ತಲೇ ಇದೆ, ದೇವರು ನೆನೆದಂತಾಗಲಿ ಎಂದು ಕೊಂಡು ಪಪ್ಪಿನತ್ತ ಲೈಟ್ ಹಾಯಿಸಿ, ಕೋವಿಯನ್ನು ಗುರಿ ಹಿಡಿದು ನೋಡುತ್ತೇನೆ. ಥೂ! ಅದೇನು ಕಣ್ಣು ಮಿಟಕಿಸುತ್ತಾ ಕುಳಿತಿರುವುದು? ಕಳ್ಳನರಿ! 'ಅಯ್ಯೋ, ನರಿ ಬಂದು ಇಂಥ ಹೇಸಿ ಪಿಕಲಾಟಕ್ಕೆ ಗುರಿಯಾಗ ಬೇಕಾಯಿತಲ್ಲಾ' ಎಂದು ನಾಚಿ, ಕೋಪ ತಡೆಯಲಾಗದೆ ಮೋಂತು ವನ್ನೊಮ್ಮೆ ಹಿಡಿದು ಜಗ್ಗಿ 'ಇಳಿ ಕೆಳಗೆ' ಎಂದು ಗುರುಗುಟ್ಟಿದೆ. ಇಬ್ಬರೂ ಇಳಿದದ್ದಾಯಿತು. ನನ್ನ ದುರವಸ್ಥೆಯ ಕಾರಣದಿಂದಾದ ಕೋಪವೆಲ್ಲ ವನ್ನೂ ಒಟ್ಟೈಸಿ ಅವನ ಕೆನ್ನೆಗೆ ಒಂದೇಟು ಹೊಡೆದೆ! ಮತ್ತೊಮ್ಮೆ ಹೊಡೆಯಲು ಕೈಯೆತ್ತುವಷ್ಟರಲ್ಲಿ ಓಡಿದ ಮೋಂತುವನ್ನು ಮತ್ತೆ ನಾನು ಕಾಣಲಿಲ್ಲ!

ಬಳಿಕ ಕೆರೆಯ ಬಳಿಗೆ ಬಂದು ಬಟ್ಟೆ ಬಿಚ್ಚಿ ತೊಳೆದುಕೊಂಡು, ಆ ಚಳಿಯಲ್ಲಿ ಮೋಂತುವಿಗೆ ಬೈಗಳಿನ ಸಹಸ್ರನಾಮ ಹಾಕುತ್ತಾ ತಣ್ಣೀರಿನಲ್ಲಿ ಮುಳುಗುಹಾಕಿ ಒದ್ದೆ ಬಟ್ಟೆಯನ್ನು ಹಿಂಡಿ ಮೈಯೊರಸಿಕೊಂಡು ಗಡಗಡನೆ ನಡುಗುತ್ತಾ ಮನೆಗೆ ಬಂದೆ. ರೈಗಳಿಗೂ, ಅಕ್ಕನಿಗೂ ನಡೆದ ಪ್ರಸಂಗವನ್ನೆಲ್ಲ ವಿವರಿಸಿದೆ. ರೈಗಳು ಆ ಜ್ವರದ ತಾಪದಲ್ಲೂ ನಗು ತಡೆಯಲಾಗದೆ ನನ್ನನ್ನು ನೋಡಿ ಯಥೇಚ್ಛವಾಗಿ ನಕ್ಕರು ! ಆದರೆ ಮಗಳನ್ನು ಕಳೆದುಕೊಂಡ ತಾಯಿಯ ಮುಖವನ್ನು ಮತ್ತೆ ನೆನಪಿಗೆ ತರುವಂತಿದ್ದ ಅಕ್ಕನ ಮ್ಲಾನವದನವು ಹುಲಿಯನ್ನು ಹೊಡೆದೇ ತೀರಬೇಕೆಂದು ನಾನು ನಿರ್ಧರಿಸುವಂತೆ ಮಾಡಿತು. ಕೆಲಹೊತ್ತಿಗೆ ಹಿಂದೆ ಅಡುಗೆ ರಾಮಣ್ಣ ಬಂದು ತಲಪಿದ್ದ. ಅವನೊಡನೆ ಬೇಟೆಗೆ ತೆರಳಲು ಸನ್ನದ್ಧನಾದೆ. ಅಕ್ಕ ಉತ್ಸಾಹಿತರಾಗಿ 'ಗರಂ ಚಾ ಮಾಡಿಕೊಡುತ್ತೇನೆ. ನನ್ನ ಸ್ವೆಟ್ಟರನ್ನು ಹಾಕಿಕೊಂಡು ಹೋಗು' ಎಂದು ಉತ್ತೇಜನವಿತ್ತರು. ಚಹಾ ಸೇವಿಸಿ, ರಾಮಣ್ಣನೊಡನೆ ಪುನಃ ಮರದೆಡೆಗೆ ಬಂದು ಅಟ್ಟಳಿಗೆಯೇರಿ ಕುಳಿತದ್ದಾಯಿತು.

ರಾಮಣ್ಣನಾದರೆ ಈ ಹಿಂದೆ, ಎರಡು ಮೂರು ಹುಲಿಗಳನ್ನು ಲೈಟ್ ಹಾಕಿ ನನ್ನಿಂದ ಕೊಲ್ಲಿಸಿದ ಅನುಭವಿ. ಹಾಗಾಗಿ ಭರವಸೆಯಿಂದ ಕಾದು ಕುಳಿತೆ. ಒಂದು, ಒಂದೂವರೆ ಗಂಟೆಯಾದರೂ ಹುಲಿಯ ಸುಳಿವಿಲ್ಲ. ನಮ್ಮ ಗಲಾಟೆಯ ಪ್ರಸಂಗದಿಂದಾಗಿ ಹುಲಿಗೆ ನಮ್ಮ ಇರವು ಅರಿವಿಗೆ ಬಂದು ಬಾರದೇ ಉಳಿಯುತ್ತದೋ ಎಂದು ಅನುಮಾನವಾಯಿತು. ಹಾಗೊಂದು ವೇಳೆ ಆದರೆ ವೃಥಾ ಒಂದು ರಾತ್ರಿ ಶ್ರಮಿಸಿದ್ದೂ, ಬರಬಾರದ ಹೇಸಿಗೆಯನ್ನು ಅನುಭವಿಸಿದ್ದೂ ನಿರರ್ಥಕವಾದೀತಲ್ಲಾ ಎಂದು ಚಿಂತಿಸುತ್ತಿದ್ದೆ. ಅಷ್ಟರಲ್ಲಿ ಹೆಣದ ಕಡೆಯಿಂದ 'ಕಿಣಿಲ್' ಎಂಬ ಸದ್ದು ಕೇಳಿ ಆನಂದದಿಂದ ಮೈಯ ರೋಮಗಳು ನಿಗುರಿದವು. ಈ ಬಾರಿಯೂ ಹಿಂದಿನಂತೆ ನರಿಯೇ ಆಗಿದ್ದರೆ ! ರಾಮಣ್ಣನಿಗೂ ಮೋಂತುವಿನಂತೆ ಭಯದ ಭೂತ ಹಿಡಿದರೆ.... ಎಂದೆಣಿಸಿಕೊಂಡೆ. ಎರಡನೇ ಸಾರಿ ಕಿಣಿಲ್ ಸದ್ದು ಕೇಳಿಸಿದ್ದೇ ತಡ, ರಾಮಣ್ಣ ಹಾಯಿಸಿದ ಬೆಳಕು ದನದ ಕುತ್ತಿಗೆಯತ್ತ ಬಿತ್ತು. ಹೋ, ಅದೇನು ಲೈಟಿನ ಬೆಳಕಿಗೆ ಇಮ್ಮಡಿಯಾಗಿ ಉರಿಯುವ ಕೆಂಡದ ಉಂಡೆಗಳಂತೆ ಕಾಣುವುದು ? ಹೌದು, ಹುಲಿಯದೇ ಕಣ್ಣುಗಳು ! ಬೆಳಕನ್ನು ಕಂಡು

ಸಿಗುರಿನಿಂತ ಹುಲಿಯು ನಮ್ಮತ್ತ ಹಾರಲೋ ಓಡಲೋ ಎಂಬ ಭಾವನೆಯಿಂದಿರುವುದನ್ನು ಕಂಡ ನಾನು ಎದೆಗಾನಿಸಿದ ಕೋವಿಯ ಕುದುರೆಗೆ ಕೈಯಿಕ್ಕಿದೆ. "ಢಾಂ" ಎಂಬ ಸದ್ದು ಆ ಗಾಢಾಂಧಕಾರದಲ್ಲಿ ನಾಲ್ದೆಸೆಗೂ ಪಸರಿಸಿ ಮಾರ್ದನಿಗೊಡುವಾಗ ಹುಲಿಯೂ ಒಮ್ಮೆ ತನ್ನ ಕೊನೆಯ ಅಟ್ಟಹಾಸದ ಗರ್ಜನೆಯನ್ನು ಮಾಡಿ ಹಿಂಗಾಲನ್ನು ಊರಿ, ನಾವು ಕುಳಿತಿದ್ದ ಮರದ ಕಡೆಗೆ ನೆಗೆಯಿತು. ಮತ್ತೊಂದು ಈಡು ಮಾಡೋಣವೆಂದರೆ ನಾವು ಕುಳಿತಿದ್ದ ಅಟ್ಟಳಿಗೆಯು ತಡೆಯಾಗಿದೆ. ಹುಲಿಯ ಉರುಳಾಟ, ನರಳಾಟಗಳನ್ನು ಮರದ ಅಟ್ಟಳಿಗೆಯೆಡೆಯಿಂದ ನೋಡುತ್ತ, ಉಸಿರು ಬಿಗಿಹಿಡಿದು ಕುಳಿತೆವು. ಸ್ವಲ್ಪ ಹೊತ್ತಿನ ಬಳಿಕ ಮರದಡಿಗೆ ಲೈಟ್ ಹಾಯಿಸಿ ನೋಡುವಾಗ ಹುಲಿಯು ನೀಳವಾಗಿ ಮಲಗಿದ್ದು ಕಂಡು, ಅದು ಕೊನೆಯುಸಿರನ್ನು ಎಳೆದಿದೆಯೆಂದು ನಿರ್ಧರಿಸಿದೆವು.

ಅಟ್ಟಳಿಗೆಯಿಂದ ಗೆಲ್ಲನ್ನು ಹಿಡಿದು ಒಂದು ಮಾರು ಕೆಳಗಿಳಿದು ಮತ್ತೊಂದು ತೋಟೆಯನ್ನು ಆ ಹುಲಿಯತ್ತ ಹೊಡೆದು ಅದು ಸತ್ತದ್ದನ್ನು ಖಚಿತಪಡಿಸಿಕೊಂಡೆ ಇಬ್ಬರೂ ಕೆಳಗಿಳಿದು ಬಂದೆವು. ಕಪಿಲೆಯ ಕತ್ತಿನ ಭಾಗದಿಂದ ಹತ್ತು ಬಾಯಿ ಮಾಂಸ ಮುಕ್ಕಿ ಹೊಟ್ಟೆ ತುಂಬಿಸಿಕೊಂಡಿದ್ದ ಹುಲಿ ಬಿದ್ದಿದ್ದ ಅಂದವನ್ನು ನೋಡುತ್ತಾ ನಿಂತಾಗ ಚಳಿ ಮರೆತೇ ಹೋಗಿತ್ತು. ಎರಡು ಈಡಿನ ಸದ್ದನ್ನು ಕೇಳಿದ ಮನೆಯವರು ಹುಲಿಯು ಬಿದ್ದಿರಲೇಬೇಕೆಂಬ ಧೈರ್ಯದಿಂದ ಸೂಟೆ, ಲಾಟಾನು, ಲೈಟುಗಳನ್ನು ಹಿಡಿದುಕೊಂಡು ಹತ್ತಾರು ಜನರು ಗುಂಪಾಗಿ ಬರುತ್ತಿರುವುದನ್ನು ಕಂಡು ನಮ್ಮ ಹೆಮ್ಮೆಗೆ ಪಾರವಿಲ್ಲದಾಯಿತು. ಹುಲಿಯ ಮೀಸೆಯನ್ನು ಕಿತ್ತು ಸೂಡಿಕಟ್ಟಿ ಕಿಸೆಗೆ ಇಳಿಬಿಟ್ಟು ಹುಲಿ ಹೊಡೆದವನೆಂಬ ಹೆಮ್ಮೆಯಿಂದ ಮೀಸೆಯಿಲ್ಲದ ಬೋಳು ಮುಖವನ್ನೊಮ್ಮೆ ಮೀಸೆ ತೀಡುವ ಧಾಟಿಯಲ್ಲಿ ತೀಡಿದೆ.

ಇಷ್ಟರಲ್ಲಿ ಹತ್ತಾರು ಜನ ಹೊಂತಕಾರಿಗಳು ಹತ್ತಿರ ಬಂದಾಯಿತು. ಅಡ್ಡಬಡಿಗೆಯೊಂದನ್ನು ಸಿದ್ಧಪಡಿಸಿ ಹುಲಿಯ ಕಾಲನ್ನು ಅದಕ್ಕೆ ಬಿಗಿದು ಹುಲಿಯನ್ನು ಮನೆಗೆ ಹೊತ್ತೇಬಿಟ್ಟರು. ಎಲ್ಲರಿಗೂ ಮನೆಯ ಯಜಮಾನಿಯಿಂದ ಶಹಭಾಸ್‌ಗಿರಿಯ ಪುರಸ್ಕಾರ ಪಡೆಯುವ ಆಸೆ. ಹುಲಿಯನ್ನು

ಹೊತ್ತವರು ಅದನ್ನು ಅಂಗಳದಲ್ಲಿ ಇಳಿಸಿದರು. ನಾನು ಹೆಗಲಲ್ಲಿ ಕೋವಿಯನ್ನು ಹೊತ್ತು ಮದುವೆಯಾಗಿ ನವವಧುವಿನೊಂದಿಗೆ ಹಿರಿಯರ ಆಶೀರ್ವಾದವನ್ನು ಪಡೆಯಲು ಬರುವ ಮದುಮಗನಂಥ ಗಂಭೀರ ನಡಿಗೆಯಿಂದ ಮನೆಯೊಳಗೆ ಕಾಲಿರಿಸುವುದರಲ್ಲಿದ್ದೆ. ಅಷ್ಟರಲ್ಲೇ "ಅಲ್ಲಿ ನಿಲ್ಲು" ಎಂಬ ಕಟ್ಟಾಜ್ಞೆಯ ಧ್ವನಿ ಅಕ್ಕನಿಂದ ಕೇಳಿಬಂದು ಬೆರಗಾಗಿ ಆ ಕಡೆಗೆ ನೋಡುತ್ತೇನೆ; ಬೆಳಗಿದ ನೀಲಾಂಜನ ಹಿಡಿದ ಅಕ್ಕ, ಕುರುದಿಯನ್ನು ನನ್ನೆಡೆಗೆ ಚೆಲ್ಲಿ, ದೃಷ್ಟಿ ತೆಗೆದು ನನಗೆ ವೀರೋಚಿತವಾದ ಸ್ವಾಗತ ನೀಡಿದರು. ಆ ಸಂತೃಪ್ತ ಮುತ್ತೈದೆಯ ಸುಪ್ರಸನ್ನ ಮುಖಮುದ್ರೆಯು ಇಂದೂ ನನ್ನ ಮನೋಪಟಲದಿಂದ ಮಾಸಿಹೋಗಿಲ್ಲ.



# ದೊಣ್ಣೆಯಿಂದ ಬಡಿದು ಹುಲಿಯನ್ನು ಕೊಂದ ಕುಂಞಿಮೋನು

ಕೊಲ್ಯ ಸುಬ್ರಾಯ ಗೌಡರು ಬಂಟ್ರ ಬೋರ್ಡು ಶಾಲೆಯ ಸಂಸ್ಥಾಪಕ ಉಪಾಧ್ಯಾಯರು; ನನಗೆ ಶ್ರೀಕಾರ ಕಲಿಸಿದ ಪ್ರಥಮ ಗುರುಗಳು. ಊರವರ ಪ್ರೀತಿಪಾತ್ರರು. ನಿರಕ್ಷರಿಗಳಾದ ಬಂಟ್ರ ಗ್ರಾಮದವರ ಯಾವ ರಿಕಾರ್ಡು ಇದ್ದರೂ ಅದು ಮಾಸ್ತರರು ಬರೆದುದೇ! ಮೂಕರ್ಜಿಯೊಂದು ಬಿಟ್ಟರೆ ಊರಿನ ಪ್ರೊ - ನೋಟಸಿಂದ ಹಿಡಿದು, ಗೇಣಿಚೀಟು, ಗೊಬ್ಬರ ಚೀಟು, ಕೈ ಕಾಗದಗಳೆಲ್ಲ ಅವರಿಂದಲೇ ಆಗಬೇಕು. ಆ ಸಮಯಕ್ಕಾಗು ವಾಗ, ಅಂದರೆ ನಾನು ಹೈಸ್ಕೂಲಿಗೆ ಮಣ್ಣು ಹೊತ್ತು ವಿಫಲನಾಗಿ ನೀರ್ಚಾಲಿನ ಮಹಾಜನ ಸಂಸ್ಕೃತ ಶಾಲೆಗೆ 2, 3 ವರ್ಷ ಹೋಗಿ ಕಲಿತು ಸಫಲತೆಯನ್ನು ಕಾಣದೆ ನೇಗಿಲ ಹಿಡಿಯೇ ನನ್ನ ಯೋಗ್ಯತೆಗೆ ತಕ್ಕದ್ದೆಂದು ಹುಟ್ಟಿದ ಮನೆಗೆ ಬಂದು ಬೀಡುಬಿಟ್ಟಿದ್ದೆ. ಮನೆಯಲ್ಲಿ ಕೆಲಸ ಮಾಡದಿದ್ದರೆ ನನ್ನ ತಂದೆಯವರು ಕೈ ಖರ್ಚಿಗೆ ಮುಕ್ಕಾಲು ಕೊಡುವವರಲ್ಲ. ಗರ್ಜಿ ಬಿದ್ದಾಗ ತಂದೆಯವರು ಐದು ಹತ್ತು ರೂಪಾಯಿಗಳನ್ನು ಮಾಸ್ತರರ ಮನೆ ಯಿಂದಲೇ ತರಿಸುತ್ತಿದ್ದರು. ಮಾಸ್ತರರು ಊರಿನಲ್ಲಿ ಆ ಕಾಲದಲ್ಲಿ ಗಟ್ಟಿ ಕುಳವಾರು. ನಾನು ನನ್ನ ಹಲವಾರು ಹೊರ ಚಟುವಟಿಕೆಗಳಿಂದ ಉತ್ತೀರ್ಣ ನಾಗಲಿಲ್ಲವಾದರೂ ಬಡ್ಡು ತಲೆಯವನಲ್ಲವೆಂದು ಅವರು ಬಲ್ಲವರು; ನನಗಾಗಿ ಮರುಗಿದವರು. ಕೈಯಲ್ಲಿ ಕಾಸಿಲ್ಲದಾಗ ಎರಡು, ಮೂರು ರೂಪಾಯಿ ಗಳನ್ನು ಜಾತ್ರೆ ಖರ್ಚಿಗೆಂದು ಕೊಟ್ಟ ನನ್ನ ಹಿತೈಷಿ ಹಿರಿಯರು. ಕೆಲವೊಮ್ಮೆ ತಂದೆಯವರು ಹೇಳಿದ್ದಾರೆಂದು ಸುಳ್ಳು ಹೇಳಿ ಮಾಸ್ತರರಿಂದ ಹಣ ಪಡೆದು ನನ್ನ ಖರ್ಚಿಗೆ ಉಪಯೋಗಿಸುತ್ತಿದ್ದುದೂ ಉಂಟು. ಮಾಸ್ತರರದೂ ತಂದೆಯವರದೂ ಲೆಕ್ಕಾಚಾರ ವರ್ಷಾವಧಿಯದು. ಮಾಸ್ತರರು ಎಂದೂ ಸುಳ್ಳು ಹೇಳುವವರಲ್ಲ ಎಂದು ತಂದೆಯವರು ಈ ನನ್ನ ಮೋಸದ ಲೆಕ್ಕ ವನ್ನೂ, ತಪ್ಪುಗೇ ಮರೆತಿರಬೇಕೆಂದುಕೊಂಡು, ಜಮಾ ಖಾತೆಗೆ ತೆಗೆದು ಕೊಳ್ಳುತ್ತಿದ್ದರು.

ಒಂದು ದಿನ ನಾನು ಏನೋ ನಿಮಿತ್ತದಿಂದ ಮಾಸ್ತರರನ್ನು ಕಾಣಲು ಕೊಲ್ಯಕ್ಕೆ ಹೋಗಿದ್ದೆ. ಪ್ರಾಯಸ್ಥರಾದುದರಿಂದ ಆಗ ಅವರ ಕಾಲಿಗೆ ನೀರು ಬಂದು ಊದಿಕೊಂಡಿತ್ತು. ಮತ್ತೆ ಹೆಚ್ಚು ಸಮಯ ಅವರು ಬದುಕುವುದಿಲ್ಲವೆಂದು ನನಗೆ ಖಾತ್ರಿಯಾಯಿತು. ಮಾತಾಡುತ್ತಾ, ವೈದ್ಯರು ಮುಸುವಿನ ಖಲಿಜವನ್ನು ತಿನ್ನಬೇಕೆಂದು ತಿಳಿಸಿದ್ದಾರೆಂದೂ, ತಾನು ಹೇಳಿದರೆ ರುಗ್ಣ ಶಯ್ಯೆಯಲ್ಲಿರುವ ಈ ಮಾಸ್ತರನ ಮಾತಿಗೆ ಬೆಲೆ ಕೊಡುವವರಾರು ? ಎಂದೂ, ತಮ್ಮ ಎದೆಗುದಿಯನ್ನು ನನ್ನಲ್ಲಿ ತೋಡಿಕೊಂಡರು. ನನಗೆ ತುಂಬಾ ಸಂತಾಪವಾಯಿತು. ಹುಟ್ಟಿದರೆ, ಸತ್ತರೆ, ಮದುವೆ, ಮುಂಜಿ, ಚೌಲೋಪನಯನಗಳಿಗೆ ದಿನ ನೋಡುವುದಕ್ಕೆ, ನಂಬುಗೆಯ ಸಾಕ್ಷಿಗೆ - ಇಂಥ ಹಲವು ತೆರನಾದ ಉಪಕಾರಗಳಿಗೆ ಬೇಕಾಗಿದ್ದ ಮಾಸ್ತರರ ಈ ಕಿರಿಯ ಆಸೆಯೊಂದನ್ನು ನಡೆಸುವ ಸಾಮರ್ಥ್ಯದ ಬೇಟೆಗಾರರು ಬಂಟ್ರಗ್ರಾಮದಲ್ಲಿ ಇಲ್ಲದೆ ಅಲ್ಲ. 'ಸಾಯುವ ಮಾಸ್ತರ, ಇನ್ನೇಕೆ ಬೇಕು ?' ಎಂಬ ಉಪೇಕ್ಷೆ! ಆದರೆ ನನಗೆ ಮಾತ್ರ ಆ ಕ್ಷಣದಲ್ಲಿ ಅವರಿಗೆ ನಾನು ಮಾಡಿದ್ದ ಹಲವು ಮೋಸ, ಇನ್ನೂ ಅವರಿಗೆ ನನ್ನಲ್ಲಿದ್ದ ಅಚಲ ವಿಶ್ವಾಸ - ಜಾಗೃತವಾಗಿ "ನಾಳೆ ಯಾ ನಾಡದು ನಾನು ಒಂದಲ್ಲ, ಎರಡು ಮುಸುವಿನ ಖಲಿಜಗಳನ್ನು ಕಳುಹಿಸಿಕೊಡುತ್ತೇನೆ" ಎಂದು ಭರವಸೆ ನೀಡಿ ತೋಟೆಗಳಿಗಾಗಿ ಅವರಿಂದಲೇ ಎರಡು ರೂಪಾಯಿ ಪಡೆದು ಮನೆಗೆ ಬಂದೆ. ಆಗ ರೂಪಾಯಿಗೆ ಎಂಟು ತೋಟೆ ಸಿಗುತ್ತಿದ್ದ ಕಾಲ !

ಮನೆಗೆ ಬಂದ ಬಳಿಕ ತಡಮಾಡದೆ ಕುಂಞಿಮೋನು ಬ್ಯಾರಿಯನ್ನು ಕರೆದು ಮರುದಿನ ಬೇಟೆಯ ಏರ್ಪಾಡು ಮಾಡಬೇಕೆಂದು ಹೇಳಿದೆ. ಆತ ಇಂಥ ಕಾರ್ಯಕ್ಕೆ ಯಾವಾಗಲೂ ಸಿದ್ಧನೆ! ನನ್ನ ಮಾತುಗಳನ್ನು ಕೇಳಿದ್ದೇ ತಡ, ತಾಯಿಯವರಲ್ಲಿ ಕೇಳಿ ಒಂದು ಲೋಟಾ ಗರಂ ಚಾ ಕುಡಿದು, ತನ್ನ ಕಂಚು ಕಟ್ಟಿದ ದೊಣ್ಣೆಯನ್ನೊಮ್ಮೆ ಅಂಗಳದಲ್ಲಿ ಕುಕ್ಕಿ ಮೀಸೆಯನ್ನು ತಿರುವಿ ಬೇಟೆಯ ಸಂದೇಶವನ್ನೊಯ್ಯಲು ಹೊರಟೇಬಿಟ್ಟ.

ಮರುದಿನ ಮುರ್ದಾಳದಲ್ಲಿ ಬೇಟೆಗಾರರೆಲ್ಲ ಒಟ್ಟು ಸೇರಿದೆವು. ಆಜಣದ ಕಾಡನ್ನು ಮೊದಲು ಹೊಡೆಯುವುದೆಂದು ನಿರ್ಣಯ ಮಾಡಿದೆವು.

ಕುಂಞಿಮೋನುವು ನನ್ನಲ್ಲಿ "ಧನೀ, ಇಂದು ಒಂದು ಕಡವೆಯನ್ನು ಹೊಡೆಯ ಬೇಕು. ನಾನು ನಿಮ್ಮ ಬೆನ್ನ ಹಿಂದೆಯೇ ನಿಂತಿರುತ್ತೇನೆ. ಹೊಡೆದ ಕೂಡಲೇ ಚೂರಿ ಹಾಕದೆ ಬಿಡುವುದಿಲ್ಲ" ಎಂದು ತನ್ನ ಆಸೆಯನ್ನು ತೋಡಿ ಕೊಂಡ. ಒಳ್ಳೊಳ್ಳೆಯ ಆಯಕಟ್ಟಿನ ಗಂಡಿಗಳಲ್ಲಿ ಉತ್ತಮ ಈಡುಗಾರ ರನ್ನು ನಿಲ್ಲಿಸಿದ್ದಾಯಿತು. ಆಜಣದಿಂದ ಕೋಕಳ ಗುಡ್ಡೆಗೆ ಮಧ್ಯೆ ನಾನೂ, ಕುಂಞಿಮೋನುವೂ ಮರವನ್ನು ಮರೆಮಾಡಿ ಮರಸು ಕೂತೆವು. ಮಾರ್ಗ ದತ್ತಣಿಂದ ಸೋವತರ ಕಾ, ಕೂ ಎಂಬ ಎದುರ್ದನಿಯೆದ್ದಿತು. ಬಿಲ್ಲಿನಿಂದ ಒಗೆದ ಅಂಬಿನಂತೆ ಕಾಡುಮೇಕೆಯೊಂದು ಓಡಿ ಬರುವುದು ಕಂಡಿತು. ಕಾಡುಮೇಕೆಗೆ ಹೊಡೆಯುವ ಈಡುಗಾರನು ನಿಷ್ಣಾತನಿರಲೇಬೇಕು. ಅದರ ವೇಗಕ್ಕೆ ಅಂಬಿನ ವೇಗವೊಂದೇ ತುಲನೆ. ಕೋವಿಯನ್ನು ನೀಡಿ ಉದ್ದೇಶಿಸಿದ ಗುರಿಗೆ ಮಿಕವು ಬರುತ್ತಲೇ ಕುದುರೆಯನ್ನು ಮೀಟಿದೆ. ಕೋವಿಯು 'ಢಾಂ' ಎಂದಿತು. ಮೇಕೆಯು ನೀಳ ಹಾರೊಂದನ್ನು ಹಾರಿ ಸುಮಾರು ಐವತ್ತು ಮಾರು ದೂರಕ್ಕೆ ನೆಗೆದು ಬಿತ್ತು. ಇದನ್ನು ಕಂಡ ಕುಂಞಿಮೋನುವು ಸೊಂಟದಲ್ಲಿದ್ದ ಚೂರಿಯನ್ನು ಬಿಡಿಸಿ ಚೂರಿ ಹಾಕಲು ಹವಣಿಸಿದ. ನಾನೆಂದೆ - "ಚೂರಿ ಹಾಕಬೇಡ. ಅದನ್ನು ಸುಬ್ರಾಯ ಮಾಸ್ತರರಿಗೆ ಕಳುಹಿಸಬೇಕಾಗಿದೆ" ಎಂದು. "ಸಾಯುವ ಕಾಲಕ್ಕೂ ಆಸೆ ಮುಗಿದಿಲ್ಲವೆ? ಹೂಂ. ಹಾಗಾದರೆ ನಮಗೆ ಇನ್ನು ಬೇರೆ ಸಿಕ್ಕಿಯೇ ಆಗಬೇಕಷ್ಟೆ?" ಎಂದು ತನ್ನ ಅತೃಪ್ತಿಯನ್ನು ಕುಂಞಿಮೋನು ಸೂಚಿಸಿದ. ಒಂದು ಈಡಾದ ಬಳಿಕ ಆ ಗಂಡಿಗೆ ಬೇರೆ ಮೃಗ ಬರುವ ಸಂಭವ ಕಡಮೆ. ಇದನ್ನು ಅರಿತ ಕುಂಞಿಮೋನು ಸಿಕ್ಕಿದುದು ಕೈತಪ್ಪಿತೆಂಬ ಅತೃಪ್ತಿಯಿಂದ, ಇನ್ನಾವ ಪ್ರಾಣಿಯೂ ಸಿಗುವಂತಿಲ್ಲವೆಂದುಕೊಂಡು ತಾನು ಅಲ್ಲೇ ಹತ್ತಿಪ್ಪತ್ತು ಮಾರು ದೂರದಲ್ಲಿ ಹರಿಯುವ ಕಣಿಯತ್ತ ಹೋಗುವುದಾಗಿ ಹೇಳಿ ಬಹಿರ್ದೆಸೆಗೆ ಹೋದ.

ಒಂದು ಈಡನ್ನು ಕೇಳಿದ ಉಲ್ಲಾಸದಿಂದ ಸೋವತರ ಕಾ, ಕೂ ಇನ್ನಷ್ಟು ಗಟ್ಟಿಯಾಗಿ ಕೇಳಿ ಬರುತ್ತಿದೆ. ಕುಂಞಿಮೋನು ನನ್ನ ಬಳಿ ಯಿಂದ ಹೋಗಿ 5,6 ನಿಮಿಷಗಳು ಕಳೆದಿರಬಹುದು. ನೀರ ಕಣಿಯತ್ತ ಣಿಂದ ಬಂಡೆಗೆ ಹೊಡೆದಂತಹ ಒಂದು ಶಬ್ದದೊಂದಿಗೆ ಹುಲಿಯ ಒಂದು

ಆರ್ಭಟೆಯನ್ನು ಕೇಳಿ ನಾನು ದಂಗಾಗಿ ಮರಗಟ್ಟಿದವನಂತೆ ನಿಂತೆ. ಅಷ್ಟರಲ್ಲಿ "ಯಾ, ಅಲ್ಲಾ" ಎಂಬ ಆರ್ತನಾದವೂ ಕೇಳಿಬಂತು! ನಾನು ಕೂಡಲೇ ಚೇತರಿಸಿಕೊಂಡು ಬೊಬ್ಬೆ ಕೇಳಿದ ಕಡೆಗೆ ಹೋಗಿ ನೋಡಿದೆ. ಕುಂಞಿ ಮೋನುವಿನ ಕಂಚಿನ ಹಿಡಿಯ ದೊಣ್ಣೆಯು ಹುಲಿಯ ಬಾಯಿಯಿಂದ ಹೊಕ್ಕು ಅರ್ಧ ಅಂಶ ಒಳಗೆ ಹೋಗಿ ಹುಲಿಯು ಮರದ ಬೊಡ್ಡೆಯೊಂದಕ್ಕೆ ಒರಗಿದೆ! ಅದು ಮೇಲೇಳದಂತೆ ಕುಂಞಿಮೋನು ತನ್ನೆಲ್ಲ ಶಕ್ತಿಯನ್ನೂ ಪ್ರಯೋಗಿಸಿ ದೊಣ್ಣೆಯಿಂದ ಅತ್ತ ದೂಡುತ್ತಿದ್ದಾನೆ. ಹುಲಿಯೂ ತನ್ನ ಶಕ್ತಿ ಸರ್ವಸ್ವದಿಂದ ಅವನನ್ನು ದೂಡಿ ಮೇಲೆ ಬೀಳಲು ಪ್ರಯತ್ನಿಸುತ್ತಿದೆ! ಅದು ಚಿಟ್ಟೆ ಹುಲಿಯಾದುದರಿಂದ ಆ ಹೋರಾಟದಲ್ಲಿ ಕುಂಞಿಮೋನು ವಿನದೇ ಮೇಲುಗೈಯಾಗಿ ತೋರಿತು. ನನಗೆ ದೂರದಿಂದಲೇ, ಹುಲಿಯ ಎದೆಯ ಬಿಳಿಯ ಭಾಗ ಸ್ಪಷ್ಟವಾಗಿ ಕಾಣುತ್ತಿದೆ. ನಾನು ತಡಮಾಡದೆ ಒಂಟಿ ಗುಂಡಿನ ತೋಟೆಯೊಂದನ್ನು ಗುರಿ ನೋಡಿ ಹುಲಿಗೆ ಈಡು ಮಾಡಿದೆ. ಕುಂಞಿಮೋನಿನ ಜೀವದಾಸೆಯ ಅವುಕುವಿಕೆಯಿಂದ ಮೊದಲೇ ಕಂಗಾಲಾಗಿದ್ದ ಹುಲಿಯು ಗುಂಡಿನೇಟನ್ನು ತಿಂದು ಅತ್ತ ಹೊರಳಿದ್ದೇ ತಡ, ಕುಂಞಿ ಮೋನು ಇತ್ತ ಉರುಳಿದ! ಕಣಿಯಿಂದ ಆತುರಾತುರನಾಗಿ ನೀರು ತಂದು ಆತನ ಮುಖ, ತಲೆಗೆ ಚಿಮುಕಿಸಿದೆ; ಒಂದಿಷ್ಟು ಕುಡಿಸಿದೆ. ಬಿದ್ದಿದ್ದ ಕುಂಞಿಮೋನು ಸುಸ್ಥಿತಿಗೆ ಬರುವಾಗ ಆಚೀಚೆಯಿದ್ದ ಬೇಟೆಗಾರರೂ ಬಂದು ಅಲ್ಲಿ ಸಂದಣಿಸಿದರು.

ನಡೆದ ವಿಚಾರವೇನೆಂದು ಕಾತರತೆಯಿಂದ ಎಲ್ಲರೂ ಬಗೆ ಬಗೆಯಾಗಿ ಪ್ರಶ್ನಿಸಿದರು. ಬೇಟೆಗೆ ಬಂದೂ ಆ ದಿನ ಮಾಂಸವಿಲ್ಲದ ಊಟ ಮಾಡಬೇಕಲ್ಲಾ ಎಂಬ ಬೇಸರದಿಂದ ತನ್ನಲ್ಲೆ ಯೋಚಿಸಿಕೊಂಡು ತಲೆ ಕೆಳಗೆ ಹಾಕಿ ಬಹಿರ್ದೆಸೆಗೆಂದು ಕುಳಿತಿದ್ದ ಕುಂಞಿಮೋನು ಅತ್ತಿತ್ತ ಗಮನಿಸಿರಲಿಲ್ಲ. ಹಾಗಾಗಿ ಎದುರಿನಿಂದ ಬಂದು ತಟ್ಟನೆ ಅಭಿಮುಖವಾದ ಹುಲಿಯನ್ನು ಕಂಡಾಗ ಹಿಂದಿರುಗಲು ಆತನಿಗಾಗಲೀ, ಹುಲಿಗಾಗಲೀ ಅವಕಾಶವಿರಲಿಲ್ಲ. ಹುಲಿಯು ಮೇಲೆ ನೆಗೆವ ಸಿದ್ಧತೆಯಲ್ಲಿದ್ದುದನ್ನು ಅರಿತ ಕುಂಞಿಮೋನು ಅನ್ಯಥಾ ಮಾರ್ಗವಿಲ್ಲದೆ ಕೈಯಲ್ಲಿ ಹಿಡಿದು ಊರಿದ್ದ ಕಂಚು ಕಟ್ಟಿದ ದೊಣ್ಣೆಯಿಂದಲೇ ಹುಲಿಯ ಮಂಡೆಗೆ ಬಲವಾಗಿ ಒಂದೇಟು ಹೊಡೆದೇಬಿಟ್ಟ!

ಪ್ರಾಣದಾಸೆಯನ್ನು ತೊರೆದು "ಆದದ್ದಾಗಲಿ" ಎಂದುಕೊಂಡು ಹೊಡೆದ ವಜ್ರಮುಷ್ಟಿಯಂಥ ಆ ಪೆಟ್ಟು ಹುಲಿಯ ತಲೆಗೆ ಅನಿರೀಕ್ಷಿತವಾಗಿ ಬಿದ್ದಾಗ ಅದು ತತ್ತರಿಸಿತು. ನಾಲ್ಕು ಮಾರು ಹಿಂದೆ ಹೋಗಿ ಪ್ರಾಣೋತ್ಕ್ರಮಣ ಕಾಲದಲ್ಲಿ ವೈರಿಯ ಮೇಲೆ ನೆಗೆದು ಕೊನೆಯ ಬಾರಿಗೆ ಪರಾಕ್ರಮ ಪ್ರದರ್ಶಿಸುವಂತೆ ಅಬ್ಬರಿಸಿ ಬಾಯಗಲಿಸಿ ಮುನ್ನುಗ್ಗುವ ಸಿದ್ಧತೆಯಲ್ಲಿದ್ದ ಹುಲಿಯನ್ನು ಕಂಡ ಕುಂಞಿಮೋನು ತನ್ನ ಅಂತ್ಯಕಾಲ ಸಮೀಪಿಸಿತೆಂದೆಣಿಸಿ ಅಲ್ಲಾನ ಹೆಸರನ್ನು ಉಚ್ಚರಿಸುತ್ತಾ ಹುಲಿಯ ಎದುರಿಗೆ ದೊಣ್ಣೆಯನ್ನು ನೀಡಿದಾಗ 'ಕಾಕತಾಳ ನ್ಯಾಯ'ದಂತೆ ಆ ಬಡಿಗೆಯ ತುದಿ ಹುಲಿಯ ಬಾಯಿಯೊಳಗೆ ಸಿಕ್ಕಿ, ಆತ ತಳ್ಳಿದ್ದರಿಂದ ಅದು ಮುಂದೆ ಗಂಟಲಿನೊಳಗೆ ನುಗ್ಗಿತು!

ಇಷ್ಟು ವಿವರಗಳನ್ನು ಕುಂಞಿಮೋನುವಿನ ಮೂಲಕ ನಾವು ಸಂಗ್ರಹಿಸಿ ಅರಿತುಕೊಂಡೆವು. ನಾನು ಆ ಸ್ಥಳಕ್ಕೆ ಹೋಗಿ ನೋಡುವಾಗ ಕುಂಞಿಮೋನು ಮತ್ತು ಹುಲಿ ಇವರೊಳಗಿನ ಕಾದಾಟ ಆ ಹಂತದಲ್ಲಿತ್ತು. ಜೀವದ ಮೇಲಿನ ಆಸೆಯಿಂದ, ಪ್ರಾಣಭೀತಿಯಿಂದ ಕಂಗೆಟ್ಟ ಸ್ಥಿತಿಯಲ್ಲಿದ್ದ ಕುಂಞಿಮೋನು ಕೊನೆಯ ಶಕ್ತಿಪ್ರದರ್ಶನಕ್ಕೆ ಸಿದ್ಧವಾಗಿದ್ದ ಸಂದರ್ಭವದು. ಆತನ ದೊಣ್ಣೆಯೇ ಅವನಲ್ಲಿದ್ದ ಏಕಮಾತ್ರ ಅಸ್ತ್ರ. ಅದರಿಂದಲೇ ತಿಂದ ಪೆಟ್ಟು ಹುಲಿಗೆ ಮರಣಾಂತಿಕವೆಂಬಂತೆ ಘಾತಿಸಿದೆ. ಸಾಯುವ ಮುನ್ನ ಎದುರಾಳಿಯನ್ನು ಸೀಳುವ ಸಾಹಸ ಅದರದು. ಇಂಥ ದ್ವಂದ್ವ ಯುದ್ಧ ನಡೆಯುತ್ತಿದ್ದ ಸಂದರ್ಭದಲ್ಲೆ ಅಲ್ಲಿಗೆ ತಲಪಿದ ನನಗೆ ಕಂಡ ಆ ದೃಶ್ಯ ಬದುಕಿನಲ್ಲೇ ಅಪೂರ್ವ, ಅಸದೃಶವೆನಿಸಿದೆ. ನಾನು ಸಮಯವನ್ನು ವ್ಯರ್ಥವಾಗಿ ಕಳೆಯದೆ ಗುಂಡು ಹಾರಿಸಿದ್ದರಿಂದ ಹುಲಿ ಒಡನೆಯೇ ಅಸುನೀಗಿತ್ತು. ಬಿದ್ದ ಹುಲಿಯನ್ನು ಸಮೀಪಿಸಿ ಗಮನಿಸಿದೆ - ಕುಂಞಿಮೋನುವಿನ ಬಡಿಗೆಯ ಹೊಡೆತದಿಂದ ಅದರ ತಲೆಯೋಡು ಒಡೆದು ಪುಡಿಯಾಗಿ ತಲೆಯ ಮೇಲೆ ಕೈಯಾಡಿಸಿದಾಗ 'ಗುಜು ಗುಜು' ಎಂದು ಸಪ್ಪಳವಾಗುತ್ತಿತ್ತು! ಹುಲಿಯನ್ನು ಇಬ್ಬರು ಕಟ್ಟಾಳುಗಳ ಮೂಲಕ ಮನೆಗೆ ಸಾಗಿಸುವ ವ್ಯವಸ್ಥೆ ಮಾಡಿದೆ. ಚರ್ಮ ಸುಲಿಸಿ ಕಾಡುಮೇಕೆಯನ್ನು ಇಡಿಯಾಗಿಯೇ ಸುಬ್ರಾಯ ಮಾಸ್ತರರ ಮನೆಗೆ ಕಳುಹಿಸಿದೆ.

ಬಸವಳಿದಿದ್ದ ಕುಂಞಿಮೋನುವನ್ನು ಮನೆಗೆ ಕಳುಹಿಸಿ ಆತನಿಗಾಗಿ ರಾತ್ರಿಗೆ ಕೋಳಿಯೊಂದಕ್ಕೆ ಚೂರಿ ಹಾಕುವ ಏರ್ಪಾಡು ಮಾಡಿ ಮುಂದಿನ ಕಾಡು ಸೋವ ಕೆಲಸ ನಡೆಸಿದೆವು. ನಾನು ಹೊಳೆಯ ಬದಿಯಲ್ಲಿ ನಿಂತೆ. ನನ್ನಿಂದ ಸುಮಾರು 500 ಮಾರು ದೂರದಲ್ಲಿ ನಿಂತ ಅಜ್ಜ ಕೊರಗಪ್ಪ ರೈಗಳು ಕಡವೆಯೊಂದನ್ನು ಹೊಡೆದ ಸುದ್ದಿಗೆ ಗಾಬರಿಗೊಂಡಾಗ ಬಂದ ಮುಸುವೊಂದನ್ನು ನಾನು ಹೊಡೆದುರುಳಿಸಿ ಅದನ್ನೂ ಮಾಸ್ತರರಿಗೆ ಕಳುಹಿಸಿದೆ. ನಮಗೆ ದೊಡ್ಡ ಕಡವೆಯೊಂದು ದಕ್ಕಿತು. ಮಾಂಸವೆಂದರೆ ಜೀವ ಬಿಡುವಷ್ಟು ಆಶೆಯುಳ್ಳ ಕುಂಞಿಮೋನುವಿಗೆ ಮಾತ್ರ ಭೀಮನ ಹೊಟ್ಟೆಗೆ ಕಾಸಿನ ಮಜ್ಜಿಗೆಯೆಂಬಂತೆ ಕಿರಿಯ ಕೋಳಿಮರಿ ! ಆದರೆ ಅಂದಿನ ಬೇಟೆಯಲ್ಲಿ ಅನಿರೀಕ್ಷಿತವಾಗಿ ಹುಲಿಯನ್ನೆದುರಿಸಬೇಕಾಗಿ ಬಂದು ಆತ ತೋರಿದ ಸಾಹಸದಿಂದಾಗಿ 'ದೊಣ್ಣೆಯಿಂದ ಹುಲಿಯನ್ನು ಹೊಡೆದ ಕುಂಞಿ ಮೋನು ಬ್ಯಾರಿ' ಎಂದು ಅವನ ಹೆಸರು ಉದ್ದವಾಯಿತು; ಪ್ರಸಿದ್ಧಿ ಬಂತು !

ನಮ್ಮ ಅಜ್ಜ ಪಟೇಲ ಕೊರಗಪ್ಪ ರೈಗಳೂ, ನನ್ನ ತಂದೆಯವರೂ ಕುಂಞಿಮೋನುವಿನ ಬಿಸ್ರಾತಿಗೆಗೆ ಮೆಚ್ಚಿ ಒಂದೊಂದು ಮುಡಿ ಅಕ್ಕಿ, ಹದಿನೈದು, ಹದಿನೈದು ತೆಂಗಿನಕಾಯಿಗಳನ್ನು ಮೆಚ್ಚು ಕೊಟ್ಟರು. ಆದರೆ ಅಂದು ರಾತ್ರಿ ಕೋಳಿ ರೊಟ್ಟಿ ತಿಂದು ಮಲಗಿದ ಕುಂಞಿಮೋನು ಹತ್ತು ಗಂಟೆ ರಾತ್ರಿಗೆ ಜ್ವರ ಹಿಡಿದು ನಡುಗತೊಡಗಿದ. ಮತ್ತೆ ಅವನು ಸುಧಾರಿಸಿ ಕೊಂಡದ್ದು ಗುರುವ ಮೇರನ ಮಂತ್ರವಾದ, ವಿಭೂತಿ, ಕುರ್ದಿ, ಕೋಳಿ ಬಲಿಗಳ ಫಲವಾಗಿ - ಮೂರು ದಿನಗಳ ಬಳಿಕವೆ !

# ಕತ್ತಲಲ್ಲಿ ವಿಪತ್ತು

ತಂದೆಯವರು ಮಾಳಿಗೆಯಿಂದ ಕರೆದು ಹೇಳುವುದು ನನಗೆ ಮಲಗಿದಲ್ಲಿಗೆ ಕೇಳುತ್ತಿತ್ತು - "ಸುಂದರೀ, ನಾಳೆ ಜತ್ತು ಪುತ್ತೂರಿಗೆ ಹೋಗಿ ವಿಷುಸಂಕ್ರಮಣಕ್ಕೆ ನಾರಾಯಣನನ್ನೂ, ಸಂಜೀವಿಯನ್ನೂ, ಮಗುವನ್ನೂ ಬರುವಂತೆ ಹೇಳಿಬರಲಿ". ನನ್ನಲ್ಲಿ ಅಸಮಾಧಾನಗೊಂಡಿದ್ದ ತಂದೆಯವರು ನನ್ನೊಂದಿಗೆ ಮಾತಾಡುತ್ತಿದ್ದುದು ಅಷ್ಟಕ್ಕಷ್ಟೆ. ನನ್ನಿಂದ ಏನಾದರೂ ಕೆಲಸ ಮಾಡಿಸಬೇಕಿದ್ದರೆ ನಮ್ಮ ಚಿಕ್ಕತಾಯಿಯ ಮಧ್ಯಸ್ಥಿಕೆಯ ಮುಖಾಂತರ. ಚಿಕ್ಕತಾಯಿಯವರು ತಂದೆಯವರ ಎರಡನೇ ಹೆಂಡತಿ. ನಮ್ಮ ಅಮ್ಮನ ಖಾಸಾ ತಂಗಿ. ನಮ್ಮನ್ನು ಮಾತೃವಾತ್ಸಲ್ಯದಿಂದಲೇ ಕಾಣುತ್ತಿದ್ದುದರ ಫಲವಾಗಿ ನಾವು ಅಮ್ಮನೆಂದೇ ಕರೆಯುತ್ತಿದ್ದೆವು. ನಮ್ಮಣ್ಣ ನಾರಾಯಣ ರೈಗಳು ಆ ಸಮಯ ಪುತ್ತೂರಿನಲ್ಲಿ ಪ್ರಸಿದ್ಧಿಗೆ ಬರುತ್ತಿದ್ದ ಕ್ರಿಮಿನಲ್ ವಕೀಲರಾಗಿದ್ದರು. ನನಗಂತೂ ನಾಳೆ ಪುತ್ತೂರಿಗೆ ಹೋಗಲಿದೆ ಎಂದು ತಿಳಿದು ಸಿದ್ದೆಗಣ್ಣಿನವನನ್ನು ಹಾಸಿಗೆಗೆ ದೂಡಿದಂತಾಯಿತು. ಹೋಗುವಾಗ ತಂದೆಯವರು ಖರ್ಚಿನ ಹಣವನ್ನು ಕೊಟ್ಟೇಕೊಡುತ್ತಾರೆ. ಇದು ಸಾಲದೆಂದು ತಾಯಿಯ ಎದುರಿನಲ್ಲಿ ಮುಖ ಬಾಡಿಸಿ ನಿಂತರೆ ಅವರೂ - ಅವರ ಸಾಸಿವೆ ಡಬ್ಬದ ಗೋಡ್ರೆಜ್ಜಿನಿಂದ ಒಂದೆರಡು ರೂಪಾಯಿಗಳನ್ನಾದರೂ ಕೊಡದಿರರು. ಹೋಗುವಾಗ ಅಣ್ಣನಿಗೆ ಒಂದು ಮೊಲವನ್ನೋ, ಬರಿಂಕವನ್ನೋ ಹೊಡೆದುಕೊಂಡು ಹೋದರೆ ಅವರಿಂದಲೂ ಒಂದೆರಡು ರೂಪಾಯಿ ಕೀಳಬಹುದು. ಅತ್ತಿಗೆಯನ್ನೂ ಪುಸಲಾಯಿಸಿದರೆ ಸ್ವಲ್ಪ ಕಾಸು ದಕ್ಕೀತು ಎಂಬ ಆತುರದಿಂದ ಮರುದಿನ ಹೊರಡುವ ಸಿದ್ಧತೆಯನ್ನು ಮಾಡತೊಡಗಿದೆ. ನನ್ನಲ್ಲಿ ಶಿಕಾರಿ ತೋಟೆ ಮುಗಿಯುತ್ತಾ ಬಂದಿದೆ. ಬರೇ ಮೂರು ನಾಲ್ಕು ತೋಟೆಗಳು ಮಾತ್ರ ಜಮಾಖಾತೆಯಲ್ಲಿವೆ. ವಿಷುಸಂಕ್ರಮಣದ ಮರುದಿನ ಊರ ಕೂಡುವಿಕೆಯಿಂದ ಗಡದ್ದಿನ ಶಿಕಾರಿಯಿದೆ. ಇನ್ನು ವಿಷುಸಂಕ್ರಮಣಕ್ಕೆ ಉಳಿದಿರುವುದು ಮೂರು ನಾಲ್ಕು ದಿನಗಳು ಮಾತ್ರ.

ತಾಯಿಯೊಡನೆ "ನಾಳೆ ರಾತ್ರಿ ನಾನು ಎಂಜಿರಕ್ಕಾಗಿ ಪುತ್ತೂರಿಗೆ ಹೋಗುತ್ತೇನೆ. ಹೋಗುವಾಗ ಲೈಟಿಗೆ ಬರಿಂಕವೋ ಮೊಲವೋ ಸಿಕ್ಕಿದರೆ ಪುತ್ತೂರಲ್ಲಿ ಬಿಡಾರದವರು ತಿನ್ನಲಿಕ್ಕಾದೀತು" ಎಂದೆ. ಆ ದಿನಗಳಲ್ಲಿ ಹನ್ನೆರಡು ಗಂಟೆ ರಾತ್ರಿಗೆ ಘಟ್ಟದಿಂದ ಎಂಜಿರ ಉಪ್ಪಿನಂಗಡಿಗಾಗಿ ಬಾಣಾವರ ಸರ್ವಿಸ್ಸೆಂಬ ಹೆಸರಿನ ಬಸ್ಸೊಂದು ಇತ್ತು. ಇದರ ಚಾಲಕ ಸೈದಲಾಬಿಯು ನಮ್ಮೆಲ್ಲರ ದೋಸ್ತ. ಸತ್ತ ಮೃಗವನ್ನು ಬಿಡಿ, ಸಾಧಾರಣದ ಎಮ್ಮೆಯನ್ನೂ ಬಸ್ಸಿಗೆ ಹತ್ತಿಸಿದರೂ ಬೇಡವೆನ್ನುವ ಜನವಲ್ಲ; ಕಾರಣ ಅವರದು ದೊಡ್ಡ ಕುಟುಂಬ. ಮದುವೆ ಮುಂಜಿಯ ಸಮಯ; ರಮ್ಜಾನ್ ಕಾಲದಲ್ಲಿ ಬೇಕಾದ ತೆಂಗಿನಕಾಯಿ, ಅಕ್ಕಿ ನಮ್ಮಲ್ಲಿಂದಲೂ ಆ ಡ್ರೈವರರಿಗೆ ಸರಬರಾಜು ಆಗುತ್ತಿತ್ತು. ಆ ಹನ್ನೆರಡು ಗಂಟೆ ರಾತ್ರಿಗೆ ಅನಿವಾರ್ಯವಾಗಿ ಯಾರಾದರೂ ನಾಲ್ಕೈದು ಮಂದಿ ಘಟ್ಟದ ಪ್ರಯಾಣಿಕರು ಇದ್ದರೆ ಹೆಚ್ಚು. ಆದುದರಿಂದ ಏನನ್ನು ಬಸ್ಸಿನಲ್ಲಿ ಕೊಂಡುಹೋಗುವುದಕ್ಕೂ ಡ್ರೈವರ-ಕ್ಲೀನರರ ತಕರಾರು ಇರುತ್ತಿರಲಿಲ್ಲ. ಏನಾದರೂ ಬೇಟೆಯ ಮೃಗ ಸಿಕ್ಕಿದರೆ ಮಗನೂ ಸೊಸೆಯೂ ತಿನ್ನಲೆಂದು ತಾಯಿಯವರು ತಂದೆಯವರೊಂದಿಗೆ ವಕಾಲತ್ತು ನಡೆಸಿ ಮರುದಿನದ ಸಂಜೆ ಏಳೂವರೆ ಗಂಟೆಯ ಅನಂತರ ಪುತ್ತೂರಿಗೆ ಹೋಗಲು ನನಗೆ ಅನುಮತಿ ದೊರಕಿಸಿಕೊಟ್ಟರು.

ಇದ್ದ ತೋಟೆಗಳನ್ನು ಆ ರಾತ್ರಿಯೇ ಒಲೆಯ ಮೇಲಿನ ದೆಂಗದ ಮೇಲಿರಿಸಿ ಪಸೆ ಆರಿಸಿ ಡಬ್ಬಿಯಲ್ಲಿ ಲೈಟಿಗೆ ಹಾಕುವರೆ ಕಾರ್ಬೈಡ್ ಎಷ್ಟು ಉಂಟೆಂದು ನೋಡಿ, ಎಂಜಿರದ ತನಕ ಹೋಗಿ ಬರುವ ದಾಸ್ತಾನನ್ನು ಕಂಡು ಸಂತೋಷದಿಂದ ನಿದ್ರಿಸಿದೆ.

ಮರುದಿನ ಬೆಳಿಗ್ಗೆ ತಾಯಿಯವರು ಮೂರು ಸಲ ಕರೆದು ಎಚ್ಚರಿಸುವ ಕರೆಗೆ ಬೇಸರಗೊಂಡು ಎಂಟು ಗಂಟೆಗೆ ಎದ್ದು ಮುಖ ತೊಳೆದ ಶಾಸ್ತ್ರ ಮಾಡಿ, ಒತ್ತಾಯಕ್ಕೆ ಕಾಫಿ ಕುಡಿಯುವವನಂತೆ, ಮುಖ ಸಿಂಡರಿಸಿಕೊಂಡೇ ಕಾಫಿ ಕುಡಿದೆ. ಬೈಸಾರಿಗಾಗುವಾಗ ಅವರಿಂದ ಕಾಸು ಕೀಳಬೇಡವೇ ?ಅವರ ಕೆಲಸಕ್ಕಾಗಿಯೇ ನಾನು ಪುತ್ತೂರಿಗೆ ಹೋಗುವವನೆಂಬ ಅಭಿಪ್ರಾಯವುಂಟಾಗುವಂತೆ ವರ್ತಿಸಿದೆ! ಆದರೂ ಬೇಟೆಯ ಸಿದ್ಧತೆಯಲ್ಲಿ ಅಜಾಗರೂಕತೆ

ತೋರಲಿಲ್ಲ. ಕೋವಿಗೆ ತ್ರೀ – ಇನ್ - ವನ್ ಎಣ್ಣೆ ಪೂಸಿ ನಳಿಗೆಯನ್ನು ಬ್ರೈಶ್ಶಿನಿಂದ ಚೆನ್ನಾಗಿ ಉಜ್ಜಿ ಸ್ವಚ್ಛಗೊಳಿಸಿ ಸಂದುಗೊಂದುಗಳಿಗೆ ಎಣ್ಣೆ ಬಿಟ್ಟು ತಿಕ್ಕಿ ಇದ್ದ ತೋಟಾಗಳನ್ನು ಕ್ರಮದಂತೆ ಬೆಲ್ಟಿಗೆ ಸಿಕ್ಕಿಸಿ, ಕಾರ್ಬೈಡ್ ಲೈಟನ್ನೂ ಸ್ವಚ್ಛಗೊಳಿಸಿ, ಕಾರ್ಬೈಡ್ ಡಬ್ಬಿಗೆ ಕಾರ್ಬೈಡ್ ತುಂಬಿಸಿ ಹೊರಡುವ ಸನ್ನಾಹವನ್ನು ಮಾಡಿಕೊಂಡೆ. ನನ್ನ ಸೋಮಾರಿ ಸಂಘದ ಸರಪಂಜರಲ್ಲೊಬ್ಬನಾದ ಸೋಮಪ್ಪನನ್ನು ಎಂಜಿರದ ತನಕ ನನ್ನೊಂದಿಗೆ ಒಡನಾಡಿಯಾಗಿ ಬರುವಂತೆ ನಿರ್ದೇಶನ ಕೊಟ್ಟು, ಮಧ್ಯಾಹ್ನದ ಊಟವನ್ನು ಗಡದ್ದಾಗಿ ಹೊಡೆದು, ರಾತ್ರಿ ನಿದ್ರೆ ಕೆಡಬೇಕಾದುದರಿಂದ ಒಂದು ನಿದ್ರೆಯನ್ನು ತೆಗೆಯೋಣವೆಂದು ಹಾಸಿಗೆಯಲ್ಲಿ ಅಡ್ಡಾದೆ.

ನಾಲ್ಕೂವರೆ, ಐದು ಘಂಟೆಗೆ ಎದ್ದು ನೋಡುತ್ತೇನೆ-ಪ್ರಶಾಂತವಾದ ಗಾಳಿ - ತಂಪಾದ ಹವೆಯನ್ನು ಆ ಸುಡು ಸೆಖೆಯ ಕಾಲದಲ್ಲಿ ಅನುಭವಿಸಿದ ನನಗೆ ಎಲ್ಲಿಲ್ಲದ ಆಶ್ಚರ್ಯ. ನಾನು ಮಲಗಿದೊಡನೆಯೇ ಹದ ಮಳೆಯೊಂದು ಸುರಿದು ಭೂಮಿಯು ತಂಪಾದುದೇ ಇದಕ್ಕೆ ಕಾರಣ. ನನ್ನ ಉಲ್ಲಾಸಕ್ಕೆ ಎಲ್ಲೆಯಿಲ್ಲ. ಇಂದು ಹೋಗುವಾಗ ಮೊಲ , ಬರಿಂಕವೇಕೆ ? ಕಡವೆ, ಹಂದಿಯೇ ಎದುರಾಗಬಹುದು. ಪ್ರಥಮ ಮಳೆ ಬಂದ ದಿನ ಕಾಡು ಮೃಗಗಳಿಗೂ ತುಂಬಾ ಉಲ್ಲಾಸ. ಅವು ಕಾಡಿನಲ್ಲಿ ನಿಲ್ಲದೆ ಬಯಲು ಪ್ರದೇಶದ ಕಡೆಗೆ ಬಂದೇ ತೀರಬೇಕು. ಮಳೆ ಹನಿಯ ನೀರು ಎಲೆಗಳೆಡೆಯಿಂದ ತೊಟ್ಟಿಕ್ಕುತ್ತಿದ್ದರಂತೂ ಕಾಡು ಅವಕ್ಕೆ ಬೇಸರ. ಅಲ್ಲದೆ ಲೈಟಿನಲ್ಲಿ ಹುಡುಕುತ್ತಾ ಹೋಗುವಾಗ ತರಗೆಲೆಗಳು ನೆನೆದಿರುವುದರಿಂದ ಅದರ ಪರಪರ ಸದ್ದಿಗೆ ಎಚ್ಚರಗೊಂಡು ಓಡುವ ಸಂದರ್ಭವೂ ಕಡಿಮೆ. ಇದನ್ನೆಲ್ಲಾ ಊಹಿಸಿ ಕತ್ತಲೆಯಾಗುವುದನ್ನೇ ಕಾಯುತ್ತಿದ್ದೆ.

ಅಂತೂ ಸೂರ್ಯನು ಅಸ್ತಂಗತನಾದನು. ಏಳು ಏಳೂವರೆ ಗಂಟೆಗೆ ಊಟವನ್ನು ಮುಗಿಸಿ ಸ್ವಲ್ಪ ವಿಶ್ರಾಂತಿಯನ್ನು ಪಡೆದು ಎಂಟು ಗಂಟೆಗೆ ತಲೆಗೆ ಲೈಟನ್ನು ಬಿಗಿದು ಸೊಂಟದ ಬೆಲ್ಟಿಗೆ ಲೈಟಿನ ಇತರ ಪರಿಕರಗಳನ್ನು ಜೋಡಿಸಿಕೊಂಡೆ. ನೀರಿನ ಬಿರಡೆಯನ್ನು ತಿರುಗಿಸಿ ಕಾರ್ಬೈಡಿಗೆ ನೀರು ಹನಿ ಹನಿಯಾಗಿ ಬೀಳುವ ವ್ಯವಸ್ಥೆಯನ್ನು ಮಾಡಿ ಲೈಟಿನ ಬರ್ನರಿಗೆ ಬೆಂಕಿ ಕಡ್ಡಿಯನ್ನು ... ಲೈಟಿನ ... ಕಸ್ಸಿಗೆ

ಅಣಿಗೊಳಿಸಿ ಹೊರಟೆ. ನಮ್ಮ ಪಿಲಿಮಜಲಿನ ಮಜಲು ಗದ್ದೆಯ ತುದಿಗೆ ಬಂದೆವು. ಅದೇನು ಕತ್ತೆತ್ತಿ ಎರಡು ಕಾಲಿನಿಂದ ನಿಗುರಿ ನಿಂತು ನೋಡು ತ್ತಿರುವುದು? ಕತ್ತೆಮೊಲ! ಪಳಗಿದ ಕೈಗೆ ಹೇಳಬೇಕೆ ಕುದುರೆಯನ್ನು ಮೀಟಿತು. 'ಛಟೀಲ್' ಎಂಬ ಕಟ್ಟೆದ ತೋಟೆಯ ಸದ್ದು ಕೇಳಿ ಮನೆಯ ನಾಯಿಗಳು ನಾಗಾಲೋಟದಿಂದ ನಮ್ಮಲ್ಲಿಗೆ ಬಂದೂ ಆಯಿತು. ಕಟ್ಟೆದ ತೋಟೆಯ ಅರೆ ಪೆಟ್ಟನಿಂದ ಬಿದ್ದ ಮೊಲವನ್ನು ನಾಯಿಗಳು ಕತ್ತಿನಲ್ಲಿ ಹಿಡಿದು ಪ್ರಾಣ ತೆಗೆದೂ ಆಯಿತು. ಈಡಿನ ಶಬ್ದವನ್ನು ಕೇಳಿದ ಮನೆಯ ಆಳು ಸಾಂತಣ್ಣನು ಬಂದು ಇಲ್ಲಿ ಸಿಕ್ಕಿದುದನ್ನು ಪುತ್ತೂರಿಗೆ ಕೊಂಡು ಹೋಗುವುದು ಬೇಡವೆಂದೂ, ಇನ್ನು ದಾರಿಯಲ್ಲಿ ಖಂಡಿತಾ ಶಿಕಾರಿಯಾಗು ವುದೆಂದೂ, ಮನೆಯಲ್ಲಿ ಹೇಳಿದರೆಂದೂ ತಿಳಿಸಿದ. ಇದನ್ನು ಎಂಜಿರದ ತನಕ ಹೊರುವುದಾರೆಂಬ ಉದಾಸೀನತೆಯಿಂದ ಮೊಲವನ್ನು ಬಂದ ಆಳಿನೊಡನೆ ಮನೆಗೆ ಕಳುಹಿಸಿದೆ. ಪ್ರಯಾಣ ಮುಂದುವರಿಯಿತು.

ಪಿಲಿಮಜಲಿನಿಂದ ತೊಡಗಿದ ಪ್ರಯಾಣವನ್ನು ನಮ್ಮ ಹಿರಿಯರ ಮನೆ - ಮುಂಡ್ರಾಡಿ ಅಳೇರಿಯ ಸಂದಿಗೆ ಬರುವಾಗ ಸ್ವಲ್ಪ ತಡೆಹಿಡಿಯ ಬೇಕಾಯಿತು. ಅಳೇರಿಯ ಸ್ಮಶಾನ ಗದ್ದೆಯತ್ತ ಲೈಟಿನ ಬೆಳಕನ್ನು ಬೀರಿ ನೋಡುತ್ತೇನೆ. ದೊಡ್ಡ ಮೊಲವೊಂದು ಬಿಟ್ಟ ಕಣ್ಣನ್ನು ಮುಚ್ಚದೆ ಕಕ ಮಕನೆ ನನ್ನತ್ತ ನೋಡುತ್ತಿದೆ. ಆದರೆ ಅದು ಕಣ್ಣು ಕೊಡುತ್ತಿರುವು ದೆಲ್ಲಿಂದ? ನನಗೆ ಪ್ರಾಯದಲ್ಲಿ ತಂಗಿ, ವಾವೆಯಲ್ಲಿ ಚಿಕ್ಕತಾಯಿ, ನಮ್ಮೆಲ್ಲರ ಮುದ್ದಿನ ಕಣಿ, ರೂಪದಲ್ಲಿ ನಿಜವಾಗಿ ಚೆಲುವೆಯಾಗಿದ್ದ ಸುಂದರಿಯು ಅಕಾಲ ಮರಣ ಹೊಂದಿ ನಮ್ಮನ್ನು ದುಃಖಸಾಗರದಲ್ಲಿ ಅದ್ದಿ ಚಿರನಿದ್ರಿತ ಳಾದ ಗೋರಿಯ ಬದಿಯಿಂದ! ಈಡು ಮಾಡಿದೆನೇ, ಮೊಲದಿಂದ ಜಾರಿದ ಚರೆಗಳು ಆ ಗೋರಿಗೆ ಬಿದ್ದರೆ? ಅಷ್ಟು ಮುತುವರ್ಜಿಯಿಂದ ಆಕೆಯ ಸದ್ಗುಣದ ಚಿರಸ್ಮಾರಕವಾಗಿ ಕಟ್ಟೆದ ಗೋರಿಗೆ ಎರಡು ಚರೆಯು ತಾಗಿ ಅದು ಹಾಳಾದರೂ ನನ್ನ ಹೃದಯಕ್ಕೆ ತಾಗಿದಂತೆ ಎಂಬ ಭಾವನೆ. ಕುಳಿತ ಮೊಲವು - ಕಲ್ಲಿನಂತೆ - ಅಲುಗಾಡುವುದೇ ಇಲ್ಲ. ಅವಳ ಗೋರಿಗೆ ಪೆಟ್ಟಾಗ ಬಾರದೆಂದು ಆಯ ತಪ್ಪಿಸಿ ಹೊಡೆದರೆ ಅತ್ತಿತ್ತ ಇರುವ ಹಿರಿಯರ ಗೋರಿಗೆ ತಾಗುವ ಸಂದರ್ಭ. ಹಾಗಾಗಬಹುದೆ? ಅಂತೂ ನನ್ನ ಪರಿಸ್ಥಿತಿಯು

ಅಡಕ್ಕೊತ್ತಿನಲ್ಲಿ ಸಿಕ್ಕ ಅಡಕೆಯಂತಾಯಿತು. 'ಇಂದು ಬದುಕಿಕೊಳ್ಳಲಿ. ನನ್ನ ನೆರೆಯಲ್ಲಿದ್ದುದು ಎಲ್ಲಿ ಹೋದೀತು ? ನಾಳೆ ನಾಡಿದ್ದರಲ್ಲಿ ಧಾನ್ಯದ ಗದ್ದೆಯಲ್ಲಿ ಸಿಗಬಹುದು' ಎಂದು ಮನಸ್ಸಿಗೆ ಸಮಾಧಾನ ಮಾಡಿಕೊಂಡೆ. ಎಂಜಿರದ ಪ್ರಯಾಣವನ್ನು ಮುಂದುವರಿಸಿದೆವು. ಮೊಲವು ತಪ್ಪಿದ ಲೈಟಿನ ಬೆಳಕಿಗೆ ದಿಗಿಲುಗೊಂಡು ಎತ್ತ ಹಾರಿ ಓಡಿ ಪೊದೆಯಲ್ಲಿ ಮಾಯವಾಯಿತೋ ತಿಳಿಯದು.

ಮುಂದೆ ಅರ್ಧ, ಮುಕ್ಕಾಲು ಮೈಲು ಮಾರ್ಗ ಕ್ರಮಿಸಿದ ಅನಂತರ ಕಾಲು ಹಾದಿಯಲ್ಲಿ ಎಂಜಿರದ ಮಾರ್ಗ ಕ್ರಮಿಸಬೇಕು. ಅದು ಒಳ ಹಾದಿ. ಮಾರ್ಗದಲ್ಲಿ ಹೋದರೆ ಮೂರು ನಾಲ್ಕು ಫರ್ಲಾಂಗು ಸುತ್ತು. ಗಾಡಿಯಲ್ಲಿ ಹೋಗುವುದಿದ್ದರೆ ಮಾತ್ರ ಮಾರ್ಗವನ್ನೇ ಹಿಡಿಯದೆ ಬೇರೆ ಉಪಾಯ ವಿಲ್ಲ. ಕಾಲುದಾರಿಯಲ್ಲಿ ಹೋದರೂ ರೆಂಜಲಾಡಿ ಪಟೇಲರ ಮನೆಯ ಎದುರಿಗೆ ಮಾರ್ಗವೂ ಕಾಲುದಾರಿಯೂ ಬಂದು ಸೇರುವ ಸ್ಥಳ. ಕಾಡು ಮಾರ್ಗವಾದುದರಿಂದ ಬರಿಂಕ, ಮೊಲವೇಕೆ ? ಕಡವೆ, ಜಿಂಕೆಯೂ ಇರ ಬಹುದು. ಎಂಬ ಆತುರದಿಂದ ಕೋವಿಯ ಎರಡು ನಳಿಗೆಗೂ ಕಂಪೆನಿಯ ಹೊಸ ತೋಟೆಗಳನ್ನೇ ಇಟ್ಟುದಾಯಿತು. ಸ್ವಲ್ಪ ಮುಂದೆ ಹೋಗುವಾಗ ಪೊದೆಯ ಎಡೆಯಿಂದ ನಸುಗೆಂಪಿನ ಕಣ್ಣನ್ನು ಮಿಟುಕಿಸುತ್ತಿರುವುದೇನು ? ಬರಿಂಕ ! ಈಡು ಬಿರಿಯಿತು. ಬರಿಂಕ ಉರುಳಿತು. ಸೋಮಪ್ಪನು ಸಂತೋಷದಿಂದ ಅದನ್ನು ಎತ್ತಿಕೊಂಡು ಬಂದ. ದೊಡ್ಡ ಗಾತ್ರದ ಬರಿಂಕ. ಅಳಿಲಿನಂತಹ ಅದರ ಮೈಮೇಲಿನ ಮೂರು ಗೆರೆಯನ್ನು ನೋಡಿದರೆ ದೇವರ ಕಲಾನೈಪುಣ್ಯಕ್ಕೆ ತಲೆದೂಗಬೇಕು ! ಅಂದು ಪಾಪ - ಪುಣ್ಯ, ದೇವರು - ದಿಂಡರ ನೆನಪಿಲ್ಲದೆ - 'ನಾಲಿಗೆಯ ರುಚಿಯೇ ಕಲೆ - ಹೊಟ್ಟೆಯೇ ದೇವರೆ'ಂದು ಭಾವಿಸಿದ್ದ ನನಗೆಲ್ಲಿಂದ ಆ ಜ್ಞಾನವು ಬರಬೇಕು ? ಇಂದು 'ಆ ಅಂದದ ಬರಿಂಕದ ಸಂತಾನವೇ ನಿರ್ಮೂಲವಾಗಿರುವುದಕ್ಕೆ ನಾನೂ ಕಾರಣ ನಾಗಿದ್ದೆನಲ್ಲಾ' ಎಂಬುದನ್ನು ಯೋಚಿಸುವಾಗ ಪಶ್ಚಾತ್ತಾಪವಾಗುತ್ತದೆ. ಆದರೇನು ಮಾಡಲಿ ? ಕಾಲವು ಮಿಂಚಿದೆ. ಸೋಮಪ್ಪನು ಬರಿಂಕದ ನಾಲ್ಕು ಕಾಲನ್ನೂ ಒಗ್ಗೂಡಿಸಿ ಕಟ್ಟಿ ಜೋತಾಡಿಸಿಕೊಳ್ಳುವ ವ್ಯವಸ್ಥೆ ಯನ್ನು ಮಾಡಿದನು. ಅದನ್ನು ನೇತಾಡಿಸಿಕೊಂಡು ಬರುವಾಗ ಅದರ

ಕೋರೆ ಹಲ್ಲುಗಳು ಕಾಲಿಗೆ ಗೀರಿದರೆ ಹರಿತವಾದ ಕತ್ತಿಯಿಂದ ಕಡಿದಂತಹ ಗಾಯವಾಗುವುದೆಂದು ನಾನು ಅರಿತವನು. ಆದುದರಿಂದ ಅದರ ಕೋರೆ ಹಲ್ಲನ್ನು ಬೇಟೆಕತ್ತಿಯಿಂದ ಬಡಿದು ಉರುಳಿಸಿ, ಪುತ್ತೂರಲ್ಲಿ ಅಣ್ಣನನ್ನು ಸಂತೋಷಪಡಿಸಬಹುದಲ್ಲಾ ಎಂಬ ಉತ್ಸಾಹದಿಂದ ಒಂದೆರಡು ಫರ್ಲಾಂಗು ಕ್ರಮಿಸಿರಬಹುದು. ಅದೇನು ಲೈಟಿನ ಬೆಳಕಿಗೂ ಕಣ್ಣು ಕೊಡದೆ ಜೀವದಾಸೆ ಯನ್ನು ತೊರೆದು ಕಾಲ ಬಳಿಗೇ ಓಡಿ ಬರುತ್ತಿದೆ? ಮೊಲವೇ? ಅಲ್ಲ. ಮೊಲದ ಗಾತ್ರದ ಹೆಗ್ಗಣ! "ಛೀ, ಇದರ ಮುಖಕ್ಕೆ ಬೆಂಕಿ ಹಾಕಲಿ"ಎಂದು ಶಪಿಸಿ ಹತ್ತು ಹದಿನೈದು ಹೆಜ್ಜೆ ಮುಂದರಿಸಿರಬಹುದು.

ಕೇಪಳಹಣ್ಣಿನ ಗಾತ್ರದ ಕೆಂಗಣ್ಣುಗಳೆರಡು ಸಾಧಾರಣ ನಾಲ್ಕು ಅಂಗುಲ ಎಡ ಬಲಗಳ ಅಂತರದಲ್ಲಿ; ನೂರು ಗಜ ದೂರದಲ್ಲಿ ಉರಿಯುವ ಕೆಂಡದುಂಡೆಯಂತೆ ಹೊರಳುತ್ತಿವೆ. ಮೊಲವಾಗಿದ್ದರೆ ಅಷ್ಟು ಕೆಂಪಗಾದ ಕಣ್ಣು ಹೊಳೆಯುತ್ತಿರಲಿಲ್ಲ. ಬರಿಂಕದ ಕಣ್ಣು ತುಸು ಹಳದಿ ಬೆರೆತ ಕೆಂಪು. ಹಾಗಾದರೆ ಇಷ್ಟು ಕುಳ್ಳಾದ, ನಾಲ್ಕು ಅಂಗುಲ ಅಂತರದ ದೊಡ್ಡ ತಲೆಯ ಚಿಕ್ಕ ಮೃಗವು ಯಾವುದಾಗಿರಬಹುದು? ಮಲಗಿ ಮೆಲುಕು ಹಾಕುತ್ತಿರುವ ಕಡವೆ, ಜಿಂಕೆಯಾಗಿದ್ದರೆ ಅದರ ಕೊಂಬು ಕಿವಿಯು ಇಷ್ಟರಲ್ಲೇ ಕಾಣ ಬೇಕಿತ್ತು. ಜಿಂಕೆ, ಕಡವೆಗಳಾದರೋ ಬಹು ಚೂಟಿಯಾದ ಪ್ರಾಣಿಗಳು. ಈ ವೇಳೆಗಾಗಲೇ ಎದ್ದು ನಿಲ್ಲುತ್ತಿದ್ದವು. ಆದರೆ ಅದು ನಿಧಾನವಾಗಿ ಮುಂದೆ ಸರಿದು ಬರುವಂತೆ ಕಾಣುತ್ತಿದೆ. ಅಲ್ಲದೆ ಇಂದಿನ ತನಕ ಲೈಟಿನ ಬೆಳಕನ್ನು ಕಾಣದ ಪ್ರಾಣಿಯೇ ಆಗಿರಬೇಕು. ಏನಾಗಿರಬಹುದು? ಸರಿ, ಇಂತಹ ಕಣ್ಣುಳ್ಳ ಮೊದ್ದು ಜಂತುವು ಮುಳ್ಳುಹಂದಿಯಲ್ಲದೆ ಬೇರೇನು? ಎಂದು ನಿರ್ಧರಿಸಿ ಒಂದನೇ ನಂಬ್ರದ ಚರೆಯ ತೋಟೆಯನ್ನು ಇರಿಸಿದ ಎಡದ ನಳಿಗೆಯನ್ನು ಮಿೂಟಿದೆ. ನಾನೇನೂ ಇಂಥ ಕ್ಷುದ್ರ ಪ್ರಾಣಿಗಳನ್ನು ಕಂಡು ಭೀತಿ ಪಡುವ ಬೇಟೆಗಾರನಲ್ಲವಾದುದರಿಂದ, ಗುರಿಯು ಸರಿಯಾಗಿ ಕಣ್ಣಿನ ಮಧ್ಯಕ್ಕೆ ಬಿದ್ದಿದೆ ಎಂಬುದರಲ್ಲಿ ನನಗೆ ಸಂಶಯವೇನೂ ಉಳಿದಿರ ಲಿಲ್ಲ. "ಢಿಂ" ಎಂದು ಕೋವಿಯ ದನಿಯಾಯಿತು. ಸೋಮಪ್ಪನು ಆತುರಾತುರವಾಗಿ, ಬಿದ್ದುದೇನೆಂದು ನೋಡಲು ಮುಂದುವರಿಯು ತ್ತಿದ್ದಾನೆ. ಖಾಲಿಯಾದ ನಳಿಗೆಗೆ ನಾನು ಮತ್ತೊಂದು ತೋಟೆಯನ್ನು ತುಂಬಿಸಿ ಮುಂದುವರಿಯುವ ಸಿದ್ಧತೆಯಲ್ಲಿದ್ದೇನೆ.

ಅದೇನು ? 'ಡನ್ ಲಪ್' ಟಯರ್ ಬಿರಿದಂತಹ ಸದ್ದಿನೊಂದಿಗೆ ಅವಿಶ್ರಾಂತವಾದ ಗಾಳಿಯ ಸುಯ್ಲು ? ಲೈಟನ್ನು ಹಾಕಿ ನೋಡುತ್ತೇನೆ ಹಿಂದೆ ಕಂಡ ಒಂದಡಿ ಎತ್ತರವಲ್ಲಿದ್ದ ಕೆಂಡದಂತಹ ಕಣ್ಣುಗಳು ಕಾಣುವುದಿಲ್ಲ. ಎರಡು ಮೂರು ಮಾರು ಎತ್ತರಕ್ಕೆ ಮೊರದಗಲದ ಬಿಳುಪಾದ ಪ್ರಾಣಿಯೊಂದು ಸುಯ್ಗುಡುತ್ತಾ ಮೇಲು ಮೇಲಕ್ಕೆ ಏರುತ್ತಾ ಹೋಗುವುದು ಕಾಣುತ್ತಿದೆ ! ಅದು ಎತ್ತರಕ್ಕೆ ಬೆಳೆಯುತ್ತಲೇ ಹೋಗುತ್ತಿದೆ ! ಬಿರಿದ ಟಯರಿನಿಂದ ಹೊರಡುವಂತೆ ಸುಯ್ಲಿನ ಶಬ್ದವು ಕೇಳುತ್ತಲೇ ಇದೆ. ಮುಂದೊತ್ತಿ ಹೋಗಿದ್ದ ಸೋಮಪ್ಪ ಈಗ ನೋಡಿದರೆ ನನ್ನಿಂದ ಹತ್ತು ಮಾರು ಹಿಂದಿದ್ದಾನೆ. ನನ್ನಲ್ಲಿ ಬಾರು ಮಾಡಿ ಎಡೆಗಾನಿಸಿದ ಕೋವಿಯು ಸಿದ್ಧವಾಗಿಯೇ ಇದೆ. ನನಗರ್ಥವಾಯಿತು. ಇದು ಮುಳ್ಳುಹಂದಿಯಲ್ಲ. ಹೆಗ್ಗಣವನ್ನು ಓಡಿಸಿಕೊಂಡು ಬಂದ ಹೆಬ್ಬಾವು ! ಇಲ್ಲವೇ ಸಂಕವಾಳ ಎಂದು ! ಹೆಬ್ಬಾವು ಮೊದ್ದು. ಸಂಕವಾಳನು ಸರ್ಪಗಳಲ್ಲಿ ಅತಿ ಕ್ರೂರಿ. ನಾನು ಅತಿ ದೊಡ್ಡ ಹೆಬ್ಬಾವನ್ನು ನಾವೂರಲ್ಲಿ ಡಾ| ಪಿ. ಎ. ಅದ್ಯಂತಾಯರು ಹೊಡೆದುದನ್ನು ನೋಡಿದ್ದೆ. ಆ ಶಿಕಾರಿಯಲ್ಲಿ ಪಾಲ್ಗೊಂಡಿದ್ದೆ. ಹೆಬ್ಬಾವಾಗಿದ್ದರೆ ಇಷ್ಟೊಂದು ಭೀಕರವಾಗಿ ಫೂತ್ಕರಿಸುತ್ತಿರಲಿಲ್ಲ. ಇದು ಸಂಕವಾಳನೇ ಇರಬೇಕು. 'ಆದುದಾಗಲಿ' ಎಂದು ಆ ಮೊರದ ಗಾತ್ರದ ಬಿಡಿಸಿದ ಹೆಡೆಗೆ ಮತ್ತೊಂದು ಗುಂಡನ್ನು ಬಾರಿಸಿದೆ. ಈಗ ಅದರ ಎತ್ತರವು ಸುಮಾರು ಆರೇಳು ಆಳು ಮಿಕ್ಕಿತ್ತು ! ಸರಿಯಾದ ಜಾಗಕ್ಕೆ ಎರಡನೆಯ ಈಡು ತಗುಲಿರಲೇಬೇಕು. ಬುಡಕಡಿದ ಬಾಳೆಯ ದಿಂಡು ಉರುಳುವಂತೆ ದಡೀಲೆಂದು ನೆಲಕಪ್ಪಳಿಸಿದಂತಹ ಸದ್ದಿನೊಂದಿಗೆ ಪ್ರಾಣಿಯು ಮೊದಲಿನ ಸ್ಥಿತಿಗೇ ಬಂದು ಬಿತ್ತು. ಇದೆಲ್ಲಾ ಒಂದು ನಿಮಿಷದೊಳಗೆ ನಡೆದ ಸಂಗತಿ. ಬದುಕಿದೆಯಾ ಬಡಜೀವವೇ ಎಂದು ಹಿಂದಿರುಗಿಯೂ ನೋಡದೆ ಏಳುವ ಬೀಳುವ ಗೊಡವೆಯೂ ಇಲ್ಲದೆ ಓಟಕಿತ್ತ ನಾವು ನಿಂತುದು ಆಳೇರಿ ಮುಂಡ್ರಾಡಿ ಮಧ್ಯೆ ಕಟ್ಟಿರುವ ಸುಂಕದಕಟ್ಟೆಯಲ್ಲಿ ! ಸುತ್ತೊಮ್ಮೆ ಲೈಟಿನ ಪ್ರಕಾಶವನ್ನು ಬೀರಿ ನೆಮ್ಮದಿಯ ಉಸಿರೊಂದನ್ನು ಎಳೆದು ಸಿಗರೇಟು ಹಚ್ಚಿ, ಸೋಮಪ್ಪನ ಕೂಡೆ "ಬರಿಂಕವೆಲ್ಲಿ ?" ಎಂದು ಕೇಳಿದೆ. "ಜೀವ ಉಳಿದರೆ ಸಾಕೆಂದು ಓಡಿ ಬರುವ ಭರದಲ್ಲಿ ಆ ಹೆಣವನ್ನು ಹೊರಲಿಕ್ಕೆ ನನಗೇನು ಜೀವ ಭಾರವಾಗಿದೆಯೇ ? ನಾನು ಬರಿಂಕವನ್ನು ಅಲ್ಲೇ ಪೊದೆಗೆ ಎಸೆದು ಬಂದಿದ್ದೇನೆ"

ಎಂದನು. ನನಗೂ ಓಟದೆತ್ತಿನಂತೆ ಓಡಿ ಬಂದು ಶ್ವಾಸವು ತಿದಿಯೊತ್ತಿನಿಂದ ಹೊರಡುವಂತೆ ಆಗುತ್ತಿತ್ತು. ಇನ್ನು ಪುತ್ತೂರಿಗೆ ಹೋಗದೆ ಅರ್ಧ ದಾರಿಯಿಂದ ಮನೆಗೆ ಬಂದುದಕ್ಕೆ ಕಥೆ ಕಟ್ಟಿಯೇ ಆಗಬೇಕಷ್ಟೆ! ಹೊಡೆದುದು ಹೆಬ್ಬಾವನ್ನಾದರೆ ಚಿಂತಿಲ್ಲ. ಸಂಕವಾಳನಾದರೆ ತುಳು ನಾಡವ, ಬಂಟ, ನಾಗಾರಾಧಕರ ಕುಟುಂಬಿಕನಾದ ನಾನು ಮಾಡಿದುದು ಅಕ್ಷಮ್ಯ ಅಪರಾಧ. ಇದಕ್ಕೆ ಪ್ರಾಯಶ್ಚಿತ್ತವಾಗಿಯೇ ತೀರಬೇಕು. ತಂದೆಯವರಿಗೆ ಇದು ಗೊತ್ತಾದರಂತೂ ಹೇಳುವುದೇಬೇಡ. ನನ್ನ ಗುಣನಾಮ ನೂರಕ್ಕೆ ಇದೊಂದು ಎದ್ದು ಕಾಣುವ ತಲೆಬರಹವಾದೀತು. ನನ್ನ 'ಮಂಗಲ ಗುಣಗಾನ'ವನ್ನು ಬಂದು ಹೋದವರ ಕೂಡೆ ಮಾಡದಿರುವರೇ? ನಿಷ್ಕಲಂಕ ಕುಟುಂಬ ಒಂದಕ್ಕೆ ಮಾಯದ ಕಲಂಕವನ್ನು ಬಳಿದ ಸಾಹಸಿ; ಎಂಬ ಬಿರುದು ದಕ್ಕಿದ್ದೇ ಎಂದು ಕೊಂಡು ಸೋಮಪ್ಪನೊಡನೆ ಮೋಳದ ಹುಲಿಗಳನ್ನು ನೋಡಿ ಹಿಂದಿರುಗಿ ಬಂದೆವೆನ್ನಬೇಕೆಂದೂ, ತಪ್ಪಿಯೂ ಯಾರೊಡನಾದರೂ ಈ ವಿಚಾರವನ್ನು ಹೇಳಿದರೆ ಪರಿಣಾಮ ಒಳಿತಾಗದೆಂದೂ ಹೇಳಿ ಹೆದರಿಸಿದೆ. ಮನೆಗೆ ಬಂದು ನನ್ನ ಸುಳ್ಳಿನ ಬಂಡವಾಳಕ್ಕೆ ಮತ್ತೊಂದು ದಿವ್ಯರತ್ನವನ್ನು ಸೇರಿಸಿ ಸತ್ಯವೆಂದೇ ಮನೆಯವರಿಗೆ ಮನದಟ್ಟಾಗುವಂತೆ ಮೋಳದ ಹುಲಿಗಳನ್ನು ಕಂಡ ಪ್ರಸಂಗವನ್ನು ಉಪ್ಪು, ಖಾರ ಬಳಿದು ಹೇಳಿ ಮಲಗಿದುದಾಯಿತು. ದುಃಸ್ವಪ್ನದಿಂದ ರಾತ್ರಿ ಇಡೀ ಹಾಸಿಗೆಯಲ್ಲಿ ಹೊರಳುವುದೇ ಕೆಲಸ.

ಮಾರನೆಯ ದಿನ ಪುತ್ತೂರಿಗೆ ಉಪ್ಪಿನಂಗಡಿಗಾಗಿ ಹೋಗುವುದೆಂದು ಹೇಳಿ ಮನೆಯಲ್ಲಿಯೇ ಉಳಿದೆ. ಮಧ್ಯಾಹ್ನಕ್ಕೆ ವರ್ತಮಾನ ಬಂತು. ರೆಂಜಲಾಡಿ ಬೀಡಿನ ಬಳಿ ಕಳೆದ ರಾತ್ರಿ ಲೈಟಿಗೆ ಹೋದ ಯಾರೋ ದುರಾತ್ಮರು ಬನದಲ್ಲಿ ವಾಸಿಸುತ್ತಿದ್ದ ತೆಂಗಿನ ಮರದ ಗಾತ್ರದ ಸಂಕವಾಳವನ್ನು ಗುಂಡಿಕ್ಕಿ ಕೊಂದಿದ್ದಾರೆಂದು!

ಅದು ದೈವದೇವರ ಮೇಲಿನ ಅತಿಶ್ರದ್ಧೆಯ ಕಾಲ. ಅದೂ ರೆಂಜಲಾಡಿ ಬೀಡಿನ ಆಸ್ತಿಯಲ್ಲಾದ ಅನಾಹುತ! ಪ್ರಾಯಶ್ಚಿತ್ತ ಮಾಡದಿದ್ದರೆ ಆ ಭೂಮಿಗೆ ದೋಷವೆಂಬ ಮನೋಭಾವನೆಯ ಕಾಲ. ರೆಂಜಲಾಡಿ ಬೀಡಿನ ಯಜಮಾನರು ಆ ಕಾಲದಲ್ಲಿ ಊರಿನ ದೊಡ್ಡ ಜಮೀನುದಾರ ಜೈನರು.

ಶಾಸ್ತ್ರೀಯ ರೀತಿಯಲ್ಲಿ ಗುಳಿ ತೋಡಿಸಿ ಸಂಕವಾಳನ ಹೆಣಕ್ಕೆ ಹೊಸ ವಸ್ತ್ರ ವನ್ನು ಹೊದಿಸಿ ದಫನ ಕಾರ್ಯವನ್ನು ಪುರೋಹಿತರ ನೇತೃತ್ವದಲ್ಲಿ ಮಾಡಿಸಿ ದರಂತೆ. ನಾನು ಮಾಡಿದ ಪಾಪಕಾರ್ಯಕ್ಕೆ ಹಾವಿನ ಸೂತಕವನ್ನು ಅವರು ಆಚರಿಸಿ, ನೂರಾರು ಜನಕ್ಕೆ ಭೂರಿ ಭೋಜನವನ್ನು ಕೊಟ್ಟು ಪ್ರಾಯಶ್ಚಿತ್ತ ಮಾಡಿಸಿಕೊಂಡರೆಂದು ಊರವರಿಂದ ತಿಳಿದೆ. ಆಲಿಗೆ ಜ್ವರ ಬಂದಿತೆಂದು ಮಾಲಿನಿಗೆ ಮದ್ದು ಕುಡಿಸಿದಂತಾಯಿತು. ನಾನು ಮಾತ್ರ ನನ್ನ ದಿನಚರಿಯಲ್ಲಿ ಈ ವಿಚಾರವನ್ನು ನಮೂದಿಸದೆ ಹಾಳೆಯಲ್ಲಿ ಹರಿಯುವ ಹಾವೊಂದರ ಚಿತ್ರವನ್ನು ಬಿಡಿಸಿ ತೆಪ್ಪಗಿದ್ದೆ. 

# ಬ್ರಿಟಿಷ್ ಕುಟುಂಬದೊಡನೆ ಕುದುರೆಮುಖದಲ್ಲಿ

ಬಾಲ್ಯ ಕಳೆದು ತಾರುಣ್ಯವುದಿಸಿದ ಕಾಲ. ವಯಸ್ಸೇರುತ್ತ ಬಂದಂತೆ ಬೇಟೆಯ ಹುಮ್ಮಸ್ಸು ಉಕ್ಕುತ್ತಿತ್ತಲ್ಲದೆ, ಬೌದ್ಧಿಕ ಬೆಳವಣಿಗೆಯಾಗಲೀ ಜ್ಞಾನಾಸಕ್ತಿಯಾಗಲೀ ನನ್ನಲ್ಲಿ ಹೆಚ್ಚಾಗಲಿಲ್ಲ. ಇದನ್ನು ಕಂಡ ಹಿರಿಯರು ಬುದ್ಧಿ ಹೇಳಿ ಫಲವಿಲ್ಲವೆಂದು ನನ್ನಷ್ಟಕ್ಕೇ ನನ್ನನ್ನು ಬಿಟ್ಟಿದ್ದರು. ನನ್ನ ಬೇಟೆಯ ಕಳ ಹಿಂದೆ ಉಪ್ಪಿನಂಗಡಿಯಿಂದ, ಸುಬ್ರಹ್ಮಣ್ಯದ ಕುಮಾರ ಪರ್ವತಕ್ಕೆ ಸೀಮಿತವಾಗಿತ್ತು. ದಿನ ಕಳೆಯುತ್ತಾ ಹೋದಂತೆ ಅದು ಪಶ್ಚಿಮ ಘಟ್ಟದ ತಪ್ಪಲು, ಬೆಳ್ತಂಗಡಿ, ಬಂಗಾಡಿ, ಎಳನೀರುಘಾಟಿಯಿಂದ ಸಂಸೆ, ಕಡ್ತಿಕಲ್ಲಘಾಟಿ, ಹಿರಿಮಾರ ಹುಪ್ಪೆ, ನಸೆ ಹಡ್ಲು, ಕುದುರೆಮುಖ, ಕಾರ್ಕಳದ ಮುನಿಯಾಲ, ವರಂಗ, ಹೆಬ್ರಿ, ಮುಡುಬಾ ಇಲ್ಲಿಯ ತನಕ ವಿಸ್ತರಿಸಿದ್ದು - ದಕ್ಷಿಣ ಕನ್ನಡದ ಬೇಟೆಗಾರರ ಕೂಟಕ್ಕೆ ನಾನಿಲ್ಲದೆ ಬೇಟೆಯಾಡುವುದೇ ದುಸ್ಸಾಧ್ಯವೆಂಬ ಮಟ್ಟಕ್ಕೆ ಬಂದಾಗ, ಮನೆಯವರಿಗೆ ಈತ ಇನ್ನು ಕೈಗೆ ಬರುವುದಿಲ್ಲವೆಂಬ ನಿರ್ಧಾರವಾಯಿತು. ನನ್ನ ಹಿಂದಿನಿಂದ ತಂದೆಯವರು, ಹಿರಿಯರು 'ಇವನನ್ನು ಹೀಗೆಯೇ ಬಿಟ್ಟರೆ ಹೇಗೆ? ಎಂಬ ಎದೆಗುದಿಯಲ್ಲಿ, ಆಗತಾನೆ ಇಂಗ್ಲೆಂಡಿನಿಂದ ತಮ್ಮ ವೈದ್ಯಕೀಯ ವೃತ್ತಿಯಲ್ಲಿ ಪರಿಣತರಾಗಿ ಬಂದು ಮದ್ರಾಸಿನಲ್ಲಿದ್ದ ನನ್ನ ಮಾವ ಡಾ| ಕೆ. ಎಂ. ರೈ ಇವರಿಗೆ ನನ್ನ ಚಟುವಟಿಕೆಯ ಕುರಿತು ಬರೆದು ತಿಳಿಸಿದರೆಂದು ಕಾಣುತ್ತದೆ. ಅವರು ಬೆಳ್ಳಾರೆಗೆ ಬಂದರು. ನನ್ನನ್ನು ಕರೆಸಿ - ಅವರು ಕೆಲವು ವರ್ಷಗಳ ಹಿಂದೆ ಬೆಳ್ತಂಗಡಿಗೆ ಸಮೀಪದ 'ನಾವೂರ' ಸುಳ್ಯೋಡಿಯಲ್ಲಿ ಮಾಡಿದ ದೊಡ್ಡ ಆಸ್ತಿಯ ಉಸ್ತುವಾರಿಗೆ ನಾನು ಹೋಗಬೇಕೆಂದು ತಿಳಿಸಿದರು. ಆ ಆಸ್ತಿ ಅಲ್ಲಿ ಹಡಿಲು ಬಿದ್ದಿರುವುದರಿಂದ ಅದನ್ನು ಸಾಗುವಳಿಗೆ ಬೇಕಾದಂತೆ ಜೀರ್ಣೋದ್ಧಾರ ಮಾಡುವ ಹೊಣೆಯನ್ನು ನನ್ನ ಮೇಲೆ ಹೊರಿಸಿದರು. ಅದಕ್ಕೆ ಬೇಕಾದ ಆರ್ಥಿಕ ಸೌಲಭ್ಯದ ಹೊಣೆಯನ್ನು ತಾವೇ ಹೊತ್ತರು.

ನಾವು ಅಳಿಯಕಟ್ಟನ್ನು ಆಚರಿಸುವವರಾದುದರಿಂದ ಆ ಕಾಲದಲ್ಲಿ ಮಾವನ ಆಸ್ತಿಯು ಅಳಿಯಂದಿರಿಗೆ. ಅಲ್ಲದೆ ಮಾವನ ಘನವ್ಯಕ್ತಿತ್ವಕ್ಕೆ ಹೆದರಿ 'ಇಂತಹ ಬಹುಭಾರವನ್ನು ಹೊರಲಾರೆ' ಎಂದು ಹೇಳುವ ಧೈರ್ಯವೂ ನನಗಿರಲಿಲ್ಲ. ಅಷ್ಟಲ್ಲದೆ ಇದು ಮಲೆನಾಡು. ಆಗಿನ ಮದ್ರಾಸು ಸಂಸ್ಥಾನದ ದಕ್ಷಿಣ ಕನ್ನಡ ಜಿಲ್ಲೆಯ ಪುತ್ತೂರು ತಾಲೂಕಿನ ಒಂದನೇ ಮಲೆನಾಡ ಗ್ರಾಮ. ಇದು, ನಾನು ಈ ಹಿಂದೆ ವಿವರಿಸಿದ ಉಪ್ಪಿನಂಗಡಿ ಆಸುಪಾಸಿಗಿಂತಲೂ ವಿಪರೀತವಾಗಿ ವನ್ಯ ಮೃಗಗಳು ಇದ್ದ ಊರು. ಇಂಥಲ್ಲಿ ನೆಲೆಯೂರಬೇಕೆಂಬುದನ್ನು ಕೇಳಿ ಸಂತಸವಾಯಿತು. ಮಾವನವರು ತಂದೆಯವರಿಗೆ ಹೇಳಿ ಕಳುಹಿಸಿ ಬೆಳ್ಳಾರೆಯಿಂದಲೇ ಗಾಡಿ, ಗಾಡಿ ಸಾಮಾನಿನೊಂದಿಗೆ ನಮ್ಮ ಚಿಕ್ಕಪ್ಪ ನಾರಾಯಣಶೇಖರ ಮೇಲುಸ್ತುವಾರಿಯಲ್ಲಿ ನನ್ನನ್ನು ನಾವೂರಿಗೆ ಕಳುಹಿಸಿಯೇಬಿಟ್ಟರು. ನನಗೆ ಆಗ ಪ್ರಾಯ ಹದಿನೆಂಟು, ಹತ್ತೊಂಬತ್ತು ಇರಬಹುದು.

ಬೆಳ್ತಂಗಡಿಯಿಂದ ನಾವೂರಿಗೆ ಏಳು ಮೈಲು. ಬೆಳ್ತಂಗಡಿಯಲ್ಲಿ ಆಗ ಕೆಲವೇ ಅಂಗಡಿಗಳು. ಸಂಕವನ್ನು ದಾಟಿದರೆ ಬೆಳ್ತಂಗಡಿ, ಲ್ಯಾಲ, ನಡ, ನಾವೂರು. ಈ ಗ್ರಾಮಗಳನ್ನು ದಾಟಿ ನಮ್ಮ ಆಸ್ತಿಯ ನಾವೂರು ಸುಳ್ಯೋಡಿಯನ್ನು ಮುಟ್ಟಬೇಕು. ಕುದುರೆಮುಖಕ್ಕೆ ವಿಹಾರಾರ್ಥ ಹೋಗುವ ಪ್ರಯಾಣಿಕರಿಗಾಗಿ ಕೊರಕಲು ಗಾಡಿಯ ಮಾರ್ಗ. ಇಕ್ಕಡೆಗಳಲ್ಲಿ ಹಾಲೆ, ಮರುವ, ಮಾವು, ಧೂಪವೇ ಮೊದಲಾದ ದೈತ್ಯಾಕೃತಿಯ ಮರಗಳ ನೆರಳಿನಿಂದ ಹಗಲೋ ಕತ್ತಲೆಯೋ ಎಂಬ ಭ್ರಮೆಯಾಗುವಂಥ ವಾತಾವರಣ. ನಮ್ಮೂರು ಕಡಬದಲ್ಲಾದರೆ, ಕಣ್ಣಿಗೆ ಕಾಣುವಷ್ಟು ದೂರವಾದರೂ ಒಂದೊಂದು ಮುಳಿಹುಲ್ಲಿನ ಮನೆಗಳಿದ್ದವು. ಇಲ್ಲಿ ಮೈಲಿಗೊಂದು ಮನೆಯೂ ಮಾರ್ಗದ ಬದಿಯಲ್ಲಿ ಕಾಣಸಿಗುವುದು ಅಪೂರ್ವ. ಸೂರ್ಯನ ಬೆಳಕನ್ನು ಕಾಣದ ಕೊರಕಲು ದಾರಿಯು ಜೌಗು. ಕಾಲಿಟ್ಟಲ್ಲಿ ನೀರೊಸರುವಂತೆ ಇದ್ದುದರಿಂದ ಇಂಬಳದ ಹಾವಳಿಯು ವಿಪರೀತ. ಇದಲ್ಲದೆ ವಿವಿಧ ಜಾತಿಯ ವಿಷಹಾವುಗಳೂ ಬಹಳ. ಎಂತೂ ಗಾಡಿಯೊಂದಿಗೆ ಬಂದು ನಾವೂರನ್ನು ಮುಟ್ಟಿಯಾಯಿತು. ಈ ಹಿಂದೆಯೆ ನಮ್ಮ ಭಾವ ಡಾ। ಅಡ್ಯಂತಾಯರ ಉಸ್ತುವಾರಿಯಲ್ಲಿದ್ದ ಈ ಆಸ್ತಿಯಲ್ಲಿ ನಮ್ಮ

 

ವಾಸ್ತವ್ಯಕ್ಕೆ ತಕ್ಕುದಾದ ಬಂಗಲೆಯು ಸಿದ್ಧವಾಗಿಯೇ ಇತ್ತು. ಇಲ್ಲಾದರೆ ಹಗಲು ಹೊತ್ತಿನಲ್ಲೂ ಮನೆಯಲ್ಲಿದ್ದೇ ಹಿಂಡುಹಿಂಡು ಜಿಂಕೆ, ಕಡವೆ, ಕಾಡುಕೋಣಗಳನ್ನು ಕಾಣುವುದು ಅಪೂರ್ವವಲ್ಲ. ಹಾಗಾಗಿ ನನ್ನ ಉತ್ಸಾಹಕ್ಕೆ ಎಣೆಯಿಲ್ಲ. ಆದರೆ ಇಲ್ಲಿ ಬೆಳಗ್ಗೆ ವಿಪರೀತ ಚಳಿ. ಮಧ್ಯಾಹ್ನಕ್ಕೆ ಸೂರ್ಯನ ಪ್ರಖರವಾದ ಬಿಸಿಲು, ಕತ್ತಲೆಗೆ ಸಹಿಸಲಸಾಧ್ಯವಾದ ಸೆಕೆ. ಇದು ಒಂದು ದಿನದ ಇಪ್ಪತ್ತನಾಲ್ಕು ಗಂಟೆಯಲ್ಲಿ ಅನುಭವಿಸಬೇಕಾದ ಹವಾಮಾನಗಳ ವೈವಿಧ್ಯವಾಗಿತ್ತು. ಕಾರಣವೆಂದರೆ ಎದುರಿಂದ ಕಾಣುವ ಕುದುರೆಮುಖ, ಹಿಂದಿನಿಂದ ಆವರಿಸಿ ನಿಂತಿರುವ ಜಮಲಾಬಾದು ಕಲ್ಲಿನ ಬಂಡೆ.

ನಮ್ಮ ಈ ನಾವೂರು ಸುಳ್ಯೋಡಿ ಆಸ್ತಿಯ ವ್ಯಾಪ್ತಿಯು ನೂರು ಎಕ್ರೆಯಾಗಿದ್ದರೆ ಇಲ್ಲಿನ ಭೂತಗಳು ನೂರವೊಂದು ಎಂದು ಪ್ರತೀತಿ! ವರ್ಷಾವಧಿ ಕೋಲ, ತಂಬಿಲವಾಗಲೇಬೇಕೆಂದು ನಿಯಮ. ಆದರೆ ಭೂಮಿಯು ಹೇರಳವಾಗಿದ್ದರೂ, ಆಗ ಕೃಷಿಯ ಉತ್ಪತ್ತಿ ಬಹಳ ಕಡಿಮೆ ಸಿಗುತ್ತಿತ್ತು. ಅದಾದರೂ ಬಿದಿರ ಮೆಳೆಯಿಂದ ಆವರಿಸಿತ್ತು. ಗದ್ದೆಯನ್ನು ಸಾಗುವಳಿ ಮಾಡಬೇಕಿದ್ದರೆ ಬಿದಿರ ಮೆಳೆಯನ್ನು ಕಡಿದು ಸುಟ್ಟೇ ಆಗಬೇಕು. ಹೀಗೆ ಕೂತಲ್ಲಿಯೇ ಬೇಟೆಗೆ ವಿಪುಲ ಅವಕಾಶ! ಜೀವನೋಪಾಯವು ಅಲ್ಲಿಂದಲೇ ಎಂಬ ಪರಿಸ್ಥಿತಿಯಲ್ಲಿ ನಾವೂರಲ್ಲಿ ಟಿಕಾಣಿ ಹೂಡಿದ್ದಾಯಿತು. ಆಸುಪಾಸಿನವರ ಗುರುತು ಪರಿಚಯವೂ ಆಯಿತು. ಮದ್ರಾಸಿನಿಂದ ಮಾವಯ್ಯನವರು ಪೆಟ್ಟಿಗೆ ಪೆಟ್ಟಿಗೆ ತೋಟಾ ಕಳುಹಿಸುತ್ತಿದ್ದರು. ಬೆಳ್ತಂಗಡಿಯಲ್ಲಿ ನನಗೆ, ಪ್ರಾರಂಭದಲ್ಲಿ ಪರಿಚಿತರಾದವರು ಮುಗ್ಗದ ಕುಂಜಿರ ಪೂಜಾರಿ, ಕೃಷ್ಣಪ್ಪ ಪೂಜಾರಿ - ಇವರ ಮಾವ ನಾರಣಪ್ಪ ಪೂಜಾರಿ. ಇವರ ಸಖ್ಯದಿಂದ ನಾನು ಬೇಕಾದಾಗ ಇವರ ತೋಟಾ ಕೋವಿಗಳಲ್ಲಿ ಪಾಲು ಪಡೆಯುವ ಒಬ್ಬ ಪಾಲುಗಾರನೇ ಆದೆ. ದಿನಗಳು ಉರುಳಿದವು. ವರುಷವು ಸಂದಿತು. ಆಸುಪಾಸಿನ ಕಳಸಾ ಸಂಸೆಯ ತನಕ ನಿಕಟ ಪರಿಚಯ ಬೆಳೆಯಿತು.

ಬೆಳ್ತಂಗಡಿಯಿಂದ ನಾವೂರನ್ನು ಮುಟ್ಟಬೇಕಿದ್ದರೆ ಹಗಲೂ ಜೀರುಂಡೆಗಳ 'ಟಿರಿ ಟಿರಿ' ರಾಗದ ಸ್ವಾಗತ ಸ್ವಾಭಾವಿಕ. ಹಳ್ಳಿಗಳಲ್ಲಿ ಕೂಡಾ

ಮನೆಗಳು ವಿರಳ. ನಾವೂರು ಗ್ರಾಮದಲ್ಲಿ ಮೈಲಿಗೊಂದು ಮನೆಯಿದ್ದರೆ ನಾವೂರ ಬಂಗಲೆ ಕಾಸ್ರೋಳಿಯನ್ನು ಕಳೆದ ಅನಂತರ, ಮೂರು ಮೈಲಿಗಳಿಗೊಂದರಂತೆ ಗೊಂಡಾರಣ್ಯದಲ್ಲಿ ಕೆಲವು ಮಣ್ಣಿನ, ತಡಿಕೆಯ ಮನೆಗಳು. ಇದರ ಆಸುಪಾಸಿನಲ್ಲಿ ಅವರ ಸಾಗುವಳಿ ಗದ್ದೆಗಳು. ಒಂದೆರಡು ತೆಂಗು ಕಂಗು ಮರಗಳು. ಕೆಲವು ಮನೆಗಳ ಮುಂಭಾಗದಲ್ಲಿ ಕೋಂಕಣಗಳ 'ಕಕ್, ಕಕ್, ಕಕ್', ಕಾಡುಕೋಳಿಗಳ ಕೆಲೆತ. ಏಲಕ್ಕಿ, ಬಾಳೆ, ನಿಂಬೆಯ ಗಿಡಗಳು ಬೆಳೆದು ನಿಂತು ಕಣ್ಣಿಗೆ ಹಬ್ಬವನ್ನುಂಟುಮಾಡುವ ನೋಟ. ಸಮತಟ್ಟು ಮಾಡಿದ ಜಾಗವನ್ನು ಬಿಟ್ಟರೆ ಬಾನೆತ್ತರಕ್ಕೆ ತಲೆಯೆತ್ತಿ ನಿಂತ ಜಾತಿಯ ಮರಗಳು. ಇದರೆಡೆಯನ್ನು ಆವರಿಸಿ ನಡೆಯಲು ಸಾಧ್ಯವಿಲ್ಲದಂತೆ ಬೆಳೆದು ನಿಂತ ಬಿದಿರ ಹಿಂಡಿಲು. ಮನೆಯ ಅಂಗಳಕ್ಕೆ ಹತ್ತಿದಾಗಲೇ ಕಾಣಬೇಕು ಮನೆಯ ನಾಯಿಗಳನ್ನು. ನಮ್ಮಂಥ ನಾಗರಿಕರನ್ನು ಕಂಡರೆ ಬೆದರಿ ಮನೆಯ ಒಳಗೇ ನುಗ್ಗಲು ಹವಣಿಸುವ ಮಲೇರಿಯಾ ಪೀಡಿತ ಗಂಡಸರು. ಸ್ವಲ್ಪ ಧೈರ್ಯದಿಂದ ಬಂದವರನ್ನು ವಿಚಾರಿಸಬೇಕಿದ್ದರೆ ಮನೆಯ ಹೆಂಗಸರೇ ಆಗಬೇಕಿತ್ತು ! ಹೆಂಗಸರಿಗೆ ಮಲೇರಿಯಾ ಜ್ವರವು ಅಷ್ಟಾಗಿ ಅಂಟುತ್ತಿರಲಿಲ್ಲ. ಕಾರಣ ಅವರ ದೇಹ ಪ್ರಕೃತಿಯ ಲಕ್ಷಣವಾಗಿರಬೇಕು. ಇವರ ವೇಷವನ್ನು ನೋಡಿದರೆ ಚರಿತ್ರೆಯಲ್ಲಿ ಕಲಿತ ಹಿಂದಿನ ತೋಡರ ನೆನಪು ಬರುತ್ತಿತ್ತು. ಮೊಣಕಾಲ ಮೇಲೆ ದಟ್ಟಿಯುಟ್ಟು ಅದರ ಮೇಲೆ ಎದೆ ಮುಚ್ಚುವಂತೆ ಸೊಂಟಕ್ಕೂ ಕುತ್ತಿಗೆಗೂ ಗೆಂಟೆಯನ್ನು ಬಿಗಿಯುತ್ತಿದ್ದರು. ಬಾಚದೆ ಕೆದರಿದ ತಲೆ, ಕಿವಿಯಲ್ಲಿ ಸುರುಳಿ ಮಾಡಿದ ತಾಳೆಗರಿಯ ಓಲೆ, ಕೈತುಂಬ ಕಂಚಿನ ಬಳೆ. ಒಂದೋ ಎರಡೋ. ಹಿಂದೆ ಕೆಂಪಾಗಿದ್ದರೂ ಈಗ ಕೈಗೆ ತೊಡಿಸಿ ಕಾಲ ಕಳೆದುದರಿಂದ ಕಪ್ಪು ಬಣ್ಣಕ್ಕೆ ತಿರುಗುತ್ತಿರುವ - ದಪ್ಪನಾದ ಮಣ್ಣಿನ (ಗಾಜಿನ) ಬಳೆ. ಮುಖವು ಲಕ್ಷಣವಾಗಿದ್ದರೂ - ಮೀಯದೆ, ಕೆದರಿದ ತಲೆಯಿಂದ - ಕಾಣಲು ಕೊಳಕಾದ ದೇಹ. ಇನ್ನು ಗಂಡಸರು ? ಹುರಿಹಗ್ಗದ ನೇವಳ, ನಾಲ್ಕು ಬೆರಳು ಅಗಲ ಗೇಣುದ್ದ ಇಳಿಬಿಟ್ಟ ಲಂಗೋಟಿ. ಸೊಂಟಕ್ಕೆ ಸುತ್ತಿದ ತೊಡಂಕಿಗೆ ನೇತುಬಿಟ್ಟ ನಾರೆಕತ್ತಿ. ಮಾತು ಮಿತ. ಆದರೂ ಅವರನ್ನು ಭೇಟಿಮಾಡಲು ಹೋದವರಿಂದ ಅಪಾಯವಿಲ್ಲವೆಂದಾದರೆ ತುಂಬು ಸಹಕಾರ, ಸನ್ಮಾನ ಸಿಗುತ್ತಿದ್ದುವು.

ಸಮ್ಮಾನವೆಂದರೆ ಇವರೇ ಇಳಿಸಿದ ಬೈನಿ ಮರದ ಕಳ್ಳು! ನೆಂಜಿ ಕೊಳ್ಳಲು ಉಪ್ಪು ಹಾಕಿ ಬೇಯಿಸಿದ ನರಿ, ಈಯೆರು ಗಡ್ಡೆಗಳು. ತುಸು ಮುಂದುವರಿದ ಮಲೆಕುಡಿಯನಾದರೆ ಹೆಂಡದ ಸತ್ಕಾರ ನೀಡುತ್ತಿದ್ದ. ಇದೊಂದು ತರದ ಹುಳಿಯಲು ಒಲೆಯ ಮೇಲಿಟ್ಟ ಹಜೆಗಿಡದ ಅಮಲು ಪಾನೀಯ. ಕುಡಿಯಲು ಬಲು ರುಚಿಕರ. ಇದನ್ನು ಅವರು ತಯಾರಿಸು ತ್ತಿದ್ದ ಬಗೆ ಹೀಗೆ - ಬತ್ತವನ್ನು ಬೆರಳುದ್ದ ಮುಂಗೆ ಬರಿಸಿ, ಅದನ್ನು ಬಿಸಿಲಲ್ಲಿ ಒಣಗಹಾಕಿ ಕುಟ್ಟಿ ಹೊಟ್ಟು ತೆಗೆದು ಸೇರಿಗೆ ಬಳ್ಳನೀರು ಸೇರಿಸಿ ಒಲೆಯ ಮೇಲಿಟ್ಟು ಚೆನ್ನಾಗಿ ಬೇಯಿಸಿದ ಗಂಜಿಯ ಅಂಬಲಿಯನ್ನು ತಂಪಾದ, ಬೆಳಕು ಸೋಕದ, ಜಾಗದಲ್ಲಿ ಬಾಯಿಕಟ್ಟಿ ನಾಲ್ಕು ದಿನ ಇಟ್ಟರೆ, ಅದು ಹುಳಿತು ಮೇಲೆ ಬರುವ ರಸವೇ ಈ ಹೆಂಡ. ಇದು ತುಂಬ ಹುಳಿ ಸಿಹಿ ಯೊಂದಿಗೆ ಕೂಡಿ ದ್ರಾಕ್ಷಾರಸಕ್ಕಿಂತಲೂ ರುಚಿಕರವಾದ, ಹದ ಅಮಲಿನಿಂದ ಕೂಡಿದ ಪಾನೀಯ. ಇನ್ನು ಏನಾದರೂ ಮಾಂಸ, ಮೀನು ಇದ್ದರೆ ಬೇರೆಯೇ! ಸರಾಯಿ ಸರಬರಾಜು. ಇದನ್ನು ಯಾವ ಖರ್ಚಿಲ್ಲದೆಯೆ ಮಾಡಬಹುದು ಎಂಬುದು ಅವರ ಅಂಬೋಣ. ಎಲ್ಲಾ ವಿಷಯದಲ್ಲಿಯೂ ನಮ್ಮನ್ನು, ಅಂದರೆ ಹೋದವರನ್ನು, ಅವರ ವಿಶ್ವಾಸದ ಆಳವಿಗೆ ತೆಗೆದು ಕೊಳ್ಳುತ್ತಿದ್ದರೂ ಈ ಪಾನೀಯಗಳನ್ನು ಮಾಡುವ ಗುಟ್ಟನ್ನು ಬಿಟ್ಟುಕೊಡು ತ್ತಿರಲಿಲ್ಲ. ಖರ್ಚಿಲ್ಲದೆ ಮಾಡಲಾಗುವ ಬೆಲ್ಲ, ಬಾಳೆಹಣ್ಣು, ಅನನಾಸು ಇವೇ ಮೊದಲಾದ ಭಟ್ಟಿಗೆ ಬೇಕಾದ ಸಾಮಾನುಗಳ ಅಗತ್ಯವಿಲ್ಲದೆ, ಬರೇ ನಾಲ್ಕು ಹಿಡಿ ಮರದ ಜಜ್ಜಿದ ತೊಗಟೆ, ಒಂದು ಸೇರು ಊರ ಬೆಲ್ಲ, ಇವಿಷ್ಟನ್ನೇ ಆರು ಕೊಡ ನೀರಿನಲ್ಲಿ ಹುಳಿಯಲು ಇರಿಸಿದರೆ ಮೂರು ಕೊಡ ಸರಾಯಿ ದೊರೆಯುತ್ತಿತ್ತು ಎನ್ನಲಾಗುತ್ತಿದ್ದ ಅಂದಿನ ಅವರ ಸರಾಯಿ ಮಾಡುವ ಕ್ರಮವನ್ನು ಅವರು ಯಾರಿಗೂ ತಿಳಿಸುವವರಲ್ಲ. ಸರಾಯಿ ತಯಾರಿಯ ಈ ರೀತಿ ಅಲ್ಲಿನ ಮಲೆಕುಡಿಯರಿಗೆ, ಅವರ ನೆರೆಕರೆಯ ಕೆಲವೇ ಮಂದಿಗೆ ಮಾತ್ರ ಗೊತ್ತಿದ್ದ ಗುಟ್ಟು. ನನಗೂ ಈ ಗುಟ್ಟನ್ನು ಹೇಳಿಕೊಡಿ ಎಂದರೆ "ಕಷ್ಟಕರವೂ ಮಾನವಿಲ್ಲದ್ದೂ ಆದ ಈ ಕೆಲಸ ನಿಮಗೇಕೆ? ನಿಮಗೆ ಬೇಕಿದ್ದರೆ ಆಳುಗಳನ್ನು ಕಳುಹಿಸಿ; ಪಾತ್ರೆ ಕಳುಹಿಸಿ. ಬೇಕಿದ್ದಷ್ಟು ನಾವೇ ಕಳುಹಿಸುತ್ತೇವೆ" ಎಂದು ನಮ್ಮ ಬಾಯಿ ಮುಚ್ಚಿಸುತ್ತಿದ್ದರು.

ಅಂದಿನ ಮಲೆಕುಡಿಯರು ವಿಶ್ವಾಸಾರ್ಹರು. ನಾರೆಕತ್ತಿಯನ್ನು ಹಿಡಿದು ಬೆಂಗಾವಲಾಗಿ ಒಬ್ಬ ಮಲೆಕುಡಿಯ ಬರುತ್ತಿದ್ದರೆ ಮುಂದೆ ಹೋಗುವವನಿಗೆ ಮೃಗದ ಭೀತಿಯಾಗಲೀ, ವಿಷದ ಹಾವಿನ ಭಯವಾಗಲೀ ಬೇಕಿಲ್ಲ. ಇಂತಹ ಸಂದರ್ಭದಲ್ಲಿ, ಬೆಂಗಾವಲಿನ ಮಲೆಕುಡಿಯರೇ ಮುಂದಾಗಿ ಅಪಾಯಕ್ಕೆ ಬಲಿಯಾದ ಪ್ರಸಂಗಗಳು ನನ್ನ ಅನುಭವದಲ್ಲಿ ಹಲವು. ವಿಶ್ವಾಸಘಾತಕನಿಗೆ ಇವರು ಮರಣ ಭಯವಿಲ್ಲದೆ ಪ್ರತೀಕಾರ ಮಾಡುತ್ತಿದ್ದರು. ಶೀಲದ ವಿಚಾರದಲ್ಲಿ ಹೆಂಗಸರದು ತುಸು ಸಡಿಲ ಸ್ವಭಾವ. ಇದನ್ನು ಯಾರಾದರೂ ಹೊರಗಿನಿಂದ ಬಂದವನು ಉಪಯೋಗಿಸಿಕೊಂಡುದನ್ನು ಮನೆಯ ಗಂಡಸು ತಿಳಿದನೆಂದಾದರೆ, ಅವನ ನಾರೆಕತ್ತಿಯ ತಿವಿತಕ್ಕೆ ಬಲಿಯಾದಂತೆಯೆ! ಹೆಣ ಬಿದ್ದರೆ ಸದ್ದಿಲ್ಲದೆ ಸಮೀಪದಲ್ಲಿ ಹರಿಯುವ ನೇತ್ರಾವತಿಯಲ್ಲಿ ಕಲ್ಲು ಕಟ್ಟಿ ಮುಳುಗಿಸಿದರೆ ಆಯಿತು. ಆ ಮಲೆನಾಡ ಕೊಂಪೆಗೆ ಯಾರು ಹುಡುಕಿಕೊಂಡು ಹೋಗುವವರು? ವಿಶ್ವಾಸ ತೋರಿದರೆ ಅವನು ತನ್ನ ಮನೆಯ ಹೆಂಗಸನ್ನೂ, ಹೋದ ಅತಿಥಿಯನ್ನೂ ಬಿಟ್ಟು ಬೈನಿಯ ಕಳ್ಳನ್ನು ತೆಗೆಯಲೋ ಅತಿಥಿಗೆ ಸಮ್ಮಾನ ಮಾಡಲು ಜೇನು ತೊಟ್ಟಿಯನ್ನು ಹುಡುಕಲೋ, ಸಾರ್ತಿಯ ಬೇಟೆಗೆ-ತನ್ನ ಬಿರುಪಗರಿಯನ್ನು ಹಿಡಿದುಕೊಂಡು ಸಿಗಬಹುದಾದ ಬರಿಂಕ, ಮುಳ್ಳುಹಂದಿ, ಅಲಂಕು, ಮನುಷ್ಯ ಗಾತ್ರದ ಉಡಗಳನ್ನು ಹೊಡೆದುಕೊಂಡು ಬರಲೋ ಹೋಗುವುದು ಇತ್ತು. ಹಾಗೆ ಬೆಳಗ್ಗೆ ಹೋದರೆ ಹಸಿವಿನ ಪರಿವೆಯೂ ಇಲ್ಲದೆ ಕಾಡಿನಲ್ಲಿ ಸಿಗುವ ಎಳೆ ಬೈನಿಯ ಸಸಿಗಳನ್ನು ಕಡಿದು ಅದರ ತಿರುಳನ್ನು ತಿಂದು ಝರಿಯ ನೀರನ್ನು ಕುಡಿದು ಹೊಟ್ಟೆ ತುಂಬಿಸಿಕೊಂಡು, ಸೂರ್ಯನು ಕಂತಿದ ಮೇಲೆಯೇ ಹಿಂದಿರುಗುತ್ತಿದ್ದುದು.

ಪ್ರತಿ ಮನೆಗೂ ಕಡ್ತಿಕಲ್ಲ ಘಾಟಿಯ ನೆತ್ತಿಯಿಂದ ಸುರಿಯುವ ನೇತ್ರಾವತಿಯು ಉಟ್ಟ ಸೀರೆಯ ಸೆರಗೋ ಎಂಬಂತೆ ಕಾಣುತ್ತಿತ್ತು. ಬೈಗು ಹೊತ್ತು, ಬಿಸಿಲು ಕಾಲದಲ್ಲಿ, ಸೂರ್ಯ ಪ್ರಕಾಶ ಬಿದ್ದು ವಿವಿಧ ಝರಿಗಳಿಂದ ನಿರ್ಮಿಸಿದ, ಸೀರೆಯನ್ನು ನಾಚಿಸುವಂತಹ ನೀರಿನ ಸೆರಗಾಗಿ ಕಾಣುವ ನೇತ್ರಾವತಿಯ ವೈವಿಧ್ಯಮಯ ನೋಟ ಇದು ಕುದುರೆಮುಖ, ಹಿರಿಮಾರ ಹುಪ್ಪೆ, ಕಡ್ತಿಕಲ್ಲ ಘಾಟಿ, ಜವಳಿ ಗುಡ್ಡಗಳ ಎಡೆಯಿಂದ ಬೇಸಿಗೆ ಕಾಲದಲ್ಲಿ

ಆಗಾಗ ಕಾಣುವ ಸುಂದರ ಮನಮೋಹಕ ದೃಶ್ಯ. ಮಳೆಗಾಲದಲ್ಲಾದರೆ ಅತಿವೃಷ್ಟಿಯ ದೆಸೆಯಿಂದ ಕೇಳುವ ಕರ್ಣ ಕರ್ಕಶ 'ಘೋ ಘೋ' ಶಬ್ದ. ಇದು ಪಶ್ಚಿಮ ಘಟ್ಟದ ತಪ್ಪಲಾದ ಕುದುರೆಮುಖದ ಸುತ್ತುಮುತ್ತಲಿನ ಒಂದು ಕಿರುಪರಿಚಯ.

ಎರಡನೆಯ ಮಹಾಯುದ್ಧದ ಕೆಲವು ವರ್ಷಗಳಿಗೆ ಮೊದಲು ಕಳಸ ಸಂಸೆಯಲ್ಲಿ ಕೆಂಟ್ ಎಂಬ ಬ್ರಿಟಿಷ್ ದೊರೆಯು ದೊಡ್ಡ ಕಾಫಿ ಪ್ಲಾಂಟರ ರಾಗಿದ್ದರು. ಅವರ ಮಗ ವಿಲಿಯಂ ಕೆಂಟ್ ಮತ್ತು ನಾನು ಸಮ ಪ್ರಾಯಸ್ಥರು. ಅವನು ಇಂಗ್ಲೆಂಡಿನಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದ. ಈ ಊರಿಗೆ ಅವನು ಬಂದ ದಿನ ಒಮ್ಮೆ ಕುದುರೆಮುಖಕ್ಕೆ ಹವಾ ಬದಲಾವಣೆ ಗೆಂದು ಬಂದಿದ್ದ. ಅಲ್ಲಿ ಸೈಮನ್ ಲೋಬೋರ ಮನೆಯಲ್ಲಿ ನನಗೂ ಅವನಿಗೂ ಭೆಟ್ಟಿಯಾಯಿತು. ಸೈಮನರಿಂದ ನನ್ನ ಬೇಟೆಗಾರಿಕೆಯ ಪ್ರಶಂಸೆಗೆ ಮೆಚ್ಚಿ ನನ್ನ ನೆಚ್ಚಿನ ಮಿತ್ರನಾದ. ಅನಂತರ ಅವನ ಜೀವನದ ಮೂರು ನಾಲ್ಕು ವರುಷಗಳಲ್ಲಿ ಇತ್ತ ಬಂದರೆ ನನ್ನನ್ನು ಕಾಣದೆ, ನನ್ನೊಂದಿಗೆ ಬೇಟೆಯಲ್ಲಿ ಸಹಭಾಗಿಯಾಗದೆ ಹೋದವನಲ್ಲ. ಅವನ ತಂದೆ ತಾಯಿ ಗಳಲ್ಲೂ ನನ್ನ ವಿಷಯದಲ್ಲಿ ಒಳ್ಳೆಯ ಅಭಿಪ್ರಾಯವನ್ನೇ ಮೂಡಿಸಿ, ಆ ಕುಟುಂಬದ ಆಗು ಹೋಗುಗಳಲ್ಲಿ ನಾನೂ ಒಬ್ಬ ಪಾಲುಗಾರನೆಂಬ ಅಭಿಪ್ರಾಯ ಉಂಟಾಗುವಂತೆ ಮಾಡಿದ್ದ. ಬಳಿಕ ಇಂಗ್ಲೆಂಡಿಗೆ ಹೋದವನು ಎರಡನೆಯ ಮಹಾಯುದ್ಧದಲ್ಲಿ ಭಾಗಿಯಾಗಿ ಮಾತೃಭೂಮಿಗಾಗಿ ಅಸು ನೀಗಿದನೆಂಬ ದುರಂತ ವಾರ್ತೆಯನ್ನು ಹಿರಿಯ ಕೆಂಟ್ ದಂಪತಿಗಳು ನನಗೆ ಕಣ್ಣೀರಿಂದ ಮಸುಕಾದ ಬರೆಹದಿಂದ ತಿಳಿಸಿದರು. ಅಗಲಿದ ಮಿತ್ರನಿಗೆ ನಾನೂ ಅಶ್ರುತರ್ಪಣವನ್ನರ್ಪಿಸಿ ಸ್ವರ್ಗವಾಸಿಯಾದ ಅವನ ಆತ್ಮಕ್ಕೆ ಚಿರ ಶಾಂತಿಯು ದೊರೆಯಲೆಂದು ಪರಮಾತ್ಮನಲ್ಲಿ ಪ್ರಾರ್ಥಿಸಿದ್ದೆ.

ಐದಾರು ತಿಂಗಳು ಕಳೆದಿರಬಹುದು. ವಿಲಿಯಂನ ತಂಗಿ ರೋಸ್ಲಿಯ ಒಂದು ಕಾಗದ ಬಂತು. ಆ ಕಾಗದದಲ್ಲಿ "ಪ್ರೀತಿಯ ರೈ, ತಂದೆಯೂ ತಾಯಿಯೂ ಅಣ್ಣನ ಸಾವಿನಿಂದ ಇನ್ನೂ ಚೇತರಿಸಿಕೊಂಡಿಲ್ಲ. ಇದರಿಂದ ನನಗೆ ತುಂಬಾ ಕಳವಳವಾಗುತ್ತಿದೆ. ಆದುದರಿಂದ ನೀನು ಅವರನ್ನು ಕುದುರೆಮುಖಕ್ಕೆ ಹವಾ ಬದಲಾವಣೆಗೆ ಆಹ್ವಾನಿಸಿ ಅವರು ಕೆಲದಿನ

ಬೇಟೆಯ ನೆವದಿಂದ ನಿನ್ನೊಂದಿಗಿದ್ದು ಮನಸ್ಸನ್ನು ಸ್ಥಿಮಿತಗೊಳ್ಳುವಂತೆ ಮಾಡಿದರೆ ನಿನ್ನ ಉಪಕಾರವನ್ನು ಮರೆಯಲಾರೆ. ಸದ್ಯ ನಮಗಿಲ್ಲೇನೂ ಕೆಲಸದ ತುರ್ತು ಇಲ್ಲ. ಕಾಫಿಯ ಕೆಲಸವೆಲ್ಲಾ ಮುಗಿದಿದೆ. ಆದುದರಿಂದ ಪದೇ ಪದೇ ಅಣ್ಣನನ್ನೇ ಜ್ಞಾಪಿಸುತ್ತಾರೆ. ದಯವಿಟ್ಟು ಆ ದುಃಖವನ್ನು ಅವರು ಮರೆಯಲು ಸಹಕರಿಸು"– ಹೀಗೆ ಬರೆದಿದ್ದಳು. ಸೆಕೆಯ ಸಮಯ. ಕುದುರೆಮುಖದ ಆಹ್ಲಾದಕರ ಹವೆ. ವಿದ್ಯಾವಂತ ಬ್ರಿಟಿಷ್ ಕುಟುಂಬದ ಸಹವಾಸ. ಬೇಡವೆನ್ನುವ ಮನೋವೃತ್ತಿ ನನ್ನದೂ ಅಲ್ಲ. ರೋಸ್ಲಿಯು ಒಳ್ಳೆಯ ಚೂಟಿಯಾದ ಹುಡುಗಿ. ವಿದ್ಯಾಭ್ಯಾಸಕ್ಕೆ ಶರಣು ಹೊಡೆದು ತಂದೆ ತಾಯಂದಿರೊಂದಿಗೆ ಕಳಸದ ಬಂಗಲೆಯಲ್ಲಿಯೇ ಇದ್ದಳು. ಬೇಟೆಗೆ ಹೊರಟರೆ ಗಂಡು ಮಕ್ಕಳಂತೆಯೇ ಅರ್ಧ ಚಡ್ಡಿ ಹಾಕಿ ಫೆಲ್ಟ್ ಹೇಟ್ ತಲೆಗಿಟ್ಟು ಕೋವಿ ರೈಫಲನ್ನು ಹೆಗಲಿಗೇರಿಸಿ ನಿಂತ ಠೀವಿಯ ಚಿತ್ರವು ಇಂದೂ ನನ್ನ ಮನಸ್ಸಿನಿಂದ ಮಾಸಿ ಹೋಗಿಲ್ಲ. ನಿಸ್ಸಂಕೋಚ ಪ್ರಕೃತಿ. ತಂದೆ ತಾಯಿಯವರೂ ಆಕೆ ನನ್ನೊಂದಿಗೆ ಸಲಿಗೆಯಿಂದ ಇರುವುದನ್ನು ಎಂದೂ ಆಕ್ಷೇಪಿಸಿದವರಲ್ಲ.

ಅವಳ ಕಳಕಳಿಯ ಪತ್ರವನ್ನು ಕಂಡವನೇ ಶ್ರೀ ಕೆಂಟರಿಗೊಂದು ಪತ್ರ ಬರೆದೆ - 'ನಿಮಗೆ ಕಾಫಿ ಸಂಗ್ರಹದ ಕೆಲಸವು ಮುಗಿದಿರಬೇಕು. ಘಟ್ಟದ ಕೆಳಗೆ ಈಗ ಸೆಕೆಯು ವಿಪರೀತ. ಕುದುರೆಮುಖದಲ್ಲಿ ಈಗ ಸೊಗಸಾದ ಹವೆ. ಅಲ್ಲದೆ ಮಲೆಗೆ ಬೆಂಕಿ ಬಿದ್ದು ಒಣಗಲು ಹುಲ್ಲು ಸುಟ್ಟು ಸೊಗಸಾದ ಚಿಗುರು ಹುಲ್ಲು ಮೊಳೆಯುವ ಸಮಯ. ಕಡವೆ - ಕಾಡು ಕೋಣಗಳು ಧಾರಾಳ ಕಾಣಸಿಗುತ್ತವೆ. ಬೇಟೆಯಿಂದ ನಿಮ್ಮ ಮನಸ್ಸಿಗೆ ನೆಮ್ಮದಿಯೂ ಸಿಗಬಹುದು. ಬರುವಿರಾ' ಎಂದು. ಈ ಸಂಗತಿಗೆ ಅವರನ್ನು ಮೊದಲೇ ಪಳಗಿಸಿದ್ದ ರೋಸ್ಲಿಯಿಂದ ಕೂಡಲೇ ಮಾರೋಲೆ ಬಂತು. "ರೈ - ನಿನ್ನ ಉಪಕಾರಕ್ಕೆ ಕೃತಜ್ಞಳು. ತಂದೆಯವರೂ ತಾಯಿಯೂ ಬರುತ್ತಾರೆ. ಎಂಟು ದಿನ ಕುದುರೆಮುಖ ಬಂಗಲೆಯಲ್ಲಿರುವುದಾಗಿ ನಿರ್ಣಯಿಸಿದ್ದಾರೆ. ಅದಕ್ಕೆ ಬೇಕಾಗುವ ಏರ್ಪಾಡು ಮಾಡು. ತಾಯಿಗೆ ಹನ್ನೆರಡು ಮೈಲು ಕುದುರೆಮುಖವನ್ನು ಏರಲು ಸಾಧ್ಯವಿಲ್ಲ. ಆದುದರಿಂದ ಒಂದು ಮೇನೆಯ ಏರ್ಪಾಡು ಮಾಡು. ನಾನು ಬರದಿದ್ದರೆ ನಿನಗೆ

ಅದರಲ್ಲಿ ಜೋತು ಹಾಕಿದ ಆಧಾರವನ್ನು ಹಿಡಿದ ಶ್ರೀಮತಿಯವರ ಪ್ರಯಾಣ ತೊಡಗಿತು. ಮೇನೆ ಹೊರುವ ಜನರ ಜಾನಪದ ಹಾಡು ಸುಮಧುರವಾಗಿ ಆರಂಭವಾಯಿತು. ನಾವೂ ನಡೆಯಲು ತೊಡಗಿದೆವು. ಸ್ವಲ್ಪ ಪ್ರಾಯಸ್ಥರಾದ ಶ್ರೀ ಕೆಂಟರು ಕುದುರೆಮುಖದ ಏಳನೇ ಸುತ್ತಿಗಾಗು ವಾಗ ತುಸು ಹಿಂದೆ ಉಳಿದರು. ನಾನೂ ರೋಸ್ಲಿಯೂ ಹಿಂದೆ ನೋಡವೆ ಸೀದಾ ಬಂದವರು ಏಳನೇ ಸುತ್ತಿಗೆ ತಲುಪಿದೆವು. ಅದು ಆರೋಹಿಗಳಿಗೆ ಮೊದಲನೆಯ ವಿಶ್ರಾಂತಿ ಸ್ಥಾನವಾದುದರಿಂದ ಶ್ರೀ ಕೆಂಟರೂ ಬರಲೆಂದು ಬಳಿಯಲ್ಲೇ ಇರುವ ಕಲ್ಲಿನಲ್ಲಿ ಕುಳಿತೆವು. ನಾನು ಸಿಗರೇಟು ಹಚ್ಚಿ ಸೇದು ವಾಗ ಆಯಾಸಗೊಂಡ ರೋಸ್ಲಿಯು ನನ್ನ ಹೆಗಲ ಮೇಲೆ ಕೈ ಹಾಕಿ ಕುಳಿತುದನ್ನು ಕಂಡ ಮೇನೆ ಹೊರುವ ಆಳುಗಳು ಮನದಲ್ಲೇ ಮುಗುಳು ನಗುವುದನ್ನು ಗಮನಿಸಿ ನನಗೆ ಸ್ವಲ್ಪ ಬೇಸರವಾದರೂ ಇಂಥದು ರೂಢಿಯೇ ಆಗಿದ್ದ ರೋಸ್ಲಿಯು ಆ ಕಡೆ ಗಮನ ಕೊಟ್ಟಂತೆಯೇ ಕಾಣಲಿಲ್ಲ. ದೂರ ದಿಂದ ಶ್ರೀ ಕೆಂಟರು ಬರುವುದು ಕಾಣುತ್ತಿತ್ತು. ಈ ಸಂದರ್ಭದಲ್ಲಿ ಅತಿಥಿ ಗಳ ಮತ್ತು ನನ್ನ ಸಂವಾದವು ಹೆಚ್ಚಾಗಿ ಇಂಗ್ಲೀಷಿನಲ್ಲಿಯೇ ನಡೆಯು ತ್ತಿದ್ದುದರಿಂದ ಹಳ್ಳಿಗರಾದ ಮೇನೆ ಹೊರುವ ಕೂಲಿಗಳು ಆ ಇಂಗ್ಲಿಷ್ ಕುಟುಂಬದವರಿಗೆ ತುಳು, ಕನ್ನಡ ಬರುವುದಿಲ್ಲವೆಂಬ ಸಿರ್ಧಾರಕ್ಕೆ ತಮ್ಮಲ್ಲೇ ಬಂದಿರಬೇಕು! ಹಾಗಾಗಿ ಮೇನೆ ಹೊರುವಾಗ ಅಶ್ಲೀಲವಾಗಿ ತಮಾಷೆಯ ಮಾತುಗಳನ್ನು ತಮ್ಮ ಭಾಷೆಯಲ್ಲಿ ಧಾರಾಳ ಬಳಸುತ್ತಿದ್ದರೆಂದು ನನಗೆ ಅನಂತರ ತಿಳಿಯಿತು. ನೂರಾರು ಮಂದಿ ಘಟ್ಟದ ಕೆಳಗಿನ ಆಳುಗಳನ್ನು ದುಡಿಸುತ್ತಿದ್ದ ದೊರೆ ದಂಪತಿಗಳಿಗೆ ಕನ್ನಡ, ತುಳು ಚೆನ್ನಾಗಿ ಬರುತ್ತಿತ್ತು. ಆದರೆ ಮಾತಿನ ಧಾಟಿಯು ಮಾತ್ರ ಇಂಗ್ಲಿಷಿನಂತೆಯೇ ಇದ್ದು ಕೇಳಲು ವಿಚಿತ್ರವೆನಿಸುತ್ತಿತ್ತು. ಮೇನೆಯನ್ನು ಹೊತ್ತ ಕೂಲಿಗಳು ಸುಮಾರು ಅರ್ಧ ಗಂಟೆ ವಿಶ್ರಾಂತಿಯನ್ನು ಹೊಂದಿ, ಎಲೆಯಡಕೆ ತಿಂದು ಅಲ್ಲಿಂದ ಹೊರಡ ಬೇಕೆಂದೂ, ನಾವು ಒಳದಾರಿಯಿಂದ ಮುಂದೆ ಹೋಗಿ ಸೈಮನ್ ಲೋಬೋರ ಮನೆಯಲ್ಲಿರುವುದಾಗಿಯೂ ಅವರಿಗೆ ಹೇಳಿ, ಕಾಲಿಗೆ ಕಟ್ಟಿದ ಇಂಬಳಗಳನ್ನು ಕಿತ್ತೊಗೆದು ಮೂವರೂ ಮತ್ತೆ ಮುನ್ನಡೆದೆವು.

ತೃಪ್ತಿಯಾಗದು. ಆದುದರಿಂದ ನಾನೂ ಬರುತ್ತೇನೆ. ನಮಗೆ ಬೇಕಾದ ವಸ್ತುಗಳನ್ನು ನಾನು ತರುತ್ತೇನೆ. ಬಾಕಿ ಅಲ್ಲಿಂದ ದೊರೆಯುವ ವಸ್ತುಗಳನ್ನು ನೀನು ಸಂಗ್ರಹಿಸಿ ಇಡು. ನಾವು ಮೂವರೂ ಕಾಲ್ನಡಿಗೆಯಿಂದಲೇ ಕುದುರೆಮುಖವನ್ನು ಏರೋಣ. ತಾಯಿಯವರು ಮಾತ್ರ ಮೇನೆಯಲ್ಲಿ ಬರಲಿ ಆಗದೇ" ಎಂದು ಬರೆದಿದ್ದಳು.

ಆ ಸಮಯದಲ್ಲಿ ಕುದುರೆಮುಖ ಬಂಗಲೆಯು ಸಾಧಾರಣ ಸುವ್ಯವಸ್ಥಿತ ಸ್ಥಿತಿಯಲ್ಲಿತ್ತು. ಆಗಾಗ್ಗೆ ಮಂಗಳೂರಿನ ಇಂಗ್ಲಿಷ್ ಅಧಿಕಾರಿಗಳೂ, ಹೊರದೇಶದಿಂದ ಬಂದ ಅವರ ನೆಂಟರಿಷ್ಟರೂ ಶಿಕಾರಿಗೆ - ಹವಾ ಬದಲಾವಣೆಗೆ ಕುದುರೆಮುಖಕ್ಕೆ ಹೋಗುವ ವಾಡಿಕೆ ಇತ್ತು. ಅದಕ್ಕಾಗಿ ಹನ್ನೆರಡು ಮೈಲು ನಿಡಿದಾದ ಬೆಟ್ಟವನ್ನು ಏರಲು ಅಶಕ್ತರಾದವರಿಗಾಗಿ, ನಾವೂರ ಬಂಗಲೆಯಲ್ಲಿ ಮೇನೆಯ ವ್ಯವಸ್ಥೆ ಇತ್ತು. ಬಂಗಲೆಯ ಮಾಲಿಯು ನನ್ನ ಹಂಗಿಕನಾಗಿದ್ದುದರಿಂದ ನನಗೆ ಮೇನೆಯನ್ನು ಉಪಯೋಗಿಸುವರೆ ತತ್ಕಾಲಕ್ಕೆ ಮೇಲಾಧಿಕಾರಿಗಳ ಒಪ್ಪಿಗೆಯನ್ನು ಪಡಕೊಳ್ಳುವ ಅವಶ್ಯಕತೆಯೂ ಇರಲಿಲ್ಲ. ಮೇನೆಯನ್ನು ಹೊರುವ ನೆರೆಕರೆಯ ಮಲೆಕುಡಿಯರೂ ನಾನು ಕರೆದರೆ ಬಾರೆನೆನ್ನುವವರಲ್ಲ. ಆದುದರಿಂದ ಶ್ರೀ ಕೆಂಟ್ ಸಕುಟುಂಬಿಕರಾಗಿ ಬರುವ ದಿನವನ್ನು ನಿಶ್ಚಯಿಸಿ, ಬೇಕಾದ ಸಾಮಾನನ್ನು ಆಳುಗಳ ಮೂಲಕ ಕುದುರೆಮುಖಕ್ಕೆ, ಸ್ಟೈಮನ್ ಲೋಬೋರ ಮನೆಗೆ ಕಳುಹಿಸಿದೆ. ಅವರ ತಮ್ಮ ದುಮಿಂಗ ಲೋಬೋರವರು ಒಳ್ಳೆಯ ಶಿಕಾರಿ ಅಲ್ಲದೆ ಕುದುರೆಮುಖದಲ್ಲಿ ಮೃಗಗಳು ಮೇಯುವ ತಾವನ್ನು ಖಚಿತವಾಗಿ ಅರಿತು ಪಳಗಿದವರು. ನಮ್ಮ ಬರವನ್ನು ಕಾದು ಇರುವಂತೆ ದುಮಿಂಗರಿಗೆ ಹೇಳಿ ಕಳುಹಿಸಿ, ಇಂಗ್ಲಿಷ್ ಅತಿಥಿಗಳಿಗೆ ಬೇಕಾದ ಸರಾಯಿ, ಊರಹೆಂಡ, ಬೈನಿಕಳ್ಳನ್ನು ಒದಗಿಸುವ ಏರ್ಪಾಡನ್ನು ಮಾಡಿ ಅತಿಥಿಗಳ ಆಗಮನವನ್ನು ಕಾಯುತ್ತಾ ನಾವೂರ ಬಂಗಲೆಯಲ್ಲೇ ನಿಂತೆ.

ಸಂಸೆಯಿಂದ ಮೋಟಾರಿನಲ್ಲಿ ಬಂದ ಅತಿಥಿಗಳು ಬೆಳ್ತಂಗಡಿಯಿಂದ ಎತ್ತಿನ ಬಂಡಿಯಲ್ಲಿ ಬಂದು ಇಳಿದರು. ಆ ರಾತ್ರಿ ನಾವೂರು ಬಂಗ್ಲೆಯಲ್ಲಿಯೇ ವಿಶ್ರಾಂತಿಯನ್ನು ಪಡೆದು ಮರುದಿನದ ಟೀ ಮುಗಿಸಿ ಪರ್ವತಾರೋಹಣ ಮಾಡುವುದೆಂದು ನಿರ್ಣಯಿಸಿದೆವು. ನಾನು ನೀಡಿದ ಬಂಟರ

ಪದ್ಧತಿಯ ಊಟವನ್ನು ಮನಸೇಚ್ಛೆ ಹೊಗಳಿದ ಅತಿಥಿಗಳು ಸುಖ ನಿದ್ರೆಯನ್ನು ಮಾಡಿದರು. ಮರುದಿನ ಏಳೂಮುಕ್ಕಾಲು ಗಂಟೆಗೆ ಮೇನೆ ಹೊರುವ ಕೂಲಿಗಳಿಗೂ ಚಾ ತಿಂಡಿ ಕೊಟ್ಟು ಹೊರಡಲು ಅನುವಾದೆವು. ಶ್ರೀ ಕೆಂಟರ 'ರ್‍ಯಾಫಲ್', ಕೋವಿಗಳನ್ನೂ ಶ್ರೀಮತಿ ಕೆಂಟರು ಮೇನೆಯಲ್ಲಿ ತರಬೇಕೆಂದು ನಿರ್ಧಾರವಾಯಿತು. ನಾನೂ ರೋಸ್ಲಿಯೂ ದಾರಿಯಲ್ಲಿ ಏನಾದರೂ ಬೇಟೆ ಸಿಕ್ಕಿದರೆ ಹೊಡೆಯುವ ಉದ್ದೇಶದಿಂದ ನನ್ನ B. S. A. ಕೋವಿಯನ್ನೂ ಅವಳ ರೈಫಲನ್ನೂ ಹೆಗಲಿಗೇರಿಸಿ ಸಾಮಾನು ಸರಂಜಾಮುಗಳೊಂದಿಗೆ ಹೊರಡಲು ಸಿದ್ಧರಾದೆವು. ಶ್ರೀಮತಿ ಕೆಂಟ್ ಎರಡು ಮಕ್ಕಳ ತಾಯಿ. ಲಂಗ ಹಾಕಿಕೊಂಡಿದ್ದರಿಂದಲೂ ಅಚ್ಚಬಿಳಿಯ ವರ್ಣವಾದುದರಿಂದಲೂ ಚಿಕ್ಕ ಪ್ರಾಯದ ಹೆಂಗಸರಂತೆ ತೋರುತ್ತಿದ್ದರು. ಆಕರ್ಷಕವಾದ ಮೈಕಟ್ಟಿನವರಾಗಿದ್ದ ಆಕೆ ಯಾರಾದರೂ ನೋಡಿ ಮೆಚ್ಚುವಂತಹ ಸ್ಫುರದ್ರೂಪದ ನಗುಮೊಗದ ಸುಂದರಿ. ರೋಸ್ಲಿಯು ನಿಷ್ಕಲ್ಮಶ ಹೃದಯದ ಚೆಲ್ಲು ಸ್ವಭಾವದ ಹುಡುಗಿ. ಶ್ರೀ ಕೆಂಟರು ಗಂಭೀರವದನದ ದರ್ಪಯುಕ್ತ ಮುಖದ ಸದ್ಗೃಹಸ್ಥ. ಇವರು ನನ್ನೊಂದಿಗೆ ವ್ಯವಹರಿಸುವ ರೀತಿಯನ್ನು ಕಂಡು ಮೇನೆಯನ್ನು ಹೊರಲು ಬಂದವರು ಆ ಹೆಂಗಸರ ವಿಚಾರದಲ್ಲಿ ತುಸು ಹಗುರ ಭಾವನೆಯನ್ನು ತಳೆದಿದ್ದರೆಂದು ಅವರ ಅಣಕದ ಮುಖಚರ್ಯೆಯಿಂದಲೇ ನನಗೆ ವೇದ್ಯವಾಗಿತ್ತು. ನನ್ನ ಮೇಲೆ ಆ ಕೆಲಸದಾಳುಗಳಿಗೆ ಸ್ವಲ್ಪ ಗುಮಾನಿಯಿತ್ತೆಂದೂ ಇದರಿಂದ ನಾನು ತಿಳಿದಿದ್ದೆ. ಆದರೆ ಈ ವಿಚಾರ ನಾನಾಗಿ ಅವರಿಗೆ ವಿವರಣೆ ಕೊಡುವುದೆಂದರೆ ನನ್ನ ಘನಸ್ಥಿಕೆಗೆ ಕುಂದೆಂದು ನಾನು ಅರಿತೂ ಅರಿಯದವನಂತಿದ್ದೆ.

ಮೇನೆಯು ಸುತ್ತು ಸುತ್ತಾಗಿ ಕಾಡು ಮಾರ್ಗವಾಗಿಯೇ ಬರಬೇಕು. ಸರದಿಯಂತೆ ನಾಲ್ಕು ಜನರು ಹೊತ್ತೇ ಸಾಗಬೇಕು. ದಾರಿಯಲ್ಲಿ ಮೃಗಗಳ ಹೆದರಿಕೆಯಿಲ್ಲ. ಶ್ರೀಮತಿ ಕೆಂಟರೂ ಕುಶಲ ಈಡುಗಾರ್ತಿ. ಬಾರು ಮಾಡಿದ ರೈಫಲ್ ಬಳಿಯೇ ಇದೆ. ಎಂಟು ಮಂದಿ ಹೊಂತಕಾರಿಗಳೂ ಪಳಗಿದವರೂ ಆದ ಯುವಕರು ಮೇನೆಯೊಂದಿಗಿದ್ದಾರೆ. ಮತ್ತೆಲ್ಲಿಯ ಹೆದರಿಕೆ ? ಅವರನ್ನು ಮೇನೆಗೆ ಹತ್ತಿಸಿ ನಾನೂ ಶ್ರೀ ಕೆಂಟರೂ ರೋಸ್ಲಿಯೊಂದಿಗೆ ಪರ್ವತಾರೋಹಣಕ್ಕೆ ಅಣಿಯಾದೆವು. ಮೇನೆಯಲ್ಲಿ ಆಸೀನರಾಗಿ

ಅದರಲ್ಲಿ ಜೋತು ಹಾಕಿದ ಆಧಾರವನ್ನು ಹಿಡಿದ ಶ್ರೀಮತಿಯವರ ಪ್ರಯಾಣ ತೊಡಗಿತು. ಮೇನೆ ಹೊರುವ ಜನರ ಜಾನಪದ ಹಾಡು ಸುಮಧುರವಾಗಿ ಆರಂಭವಾಯಿತು. ನಾವೂ ನಡೆಯಲು ತೊಡಗಿದೆವು. ಸ್ವಲ್ಪ ಪ್ರಾಯಸ್ಥರಾದ ಶ್ರೀ ಕೆಂಟರು ಕುದುರೆಮುಖದ ಏಳನೇ ಸುತ್ತಿಗಾಗುವಾಗ ತುಸು ಹಿಂದೆ ಉಳಿದರು. ನಾನೂ ರೋಸ್ಲಿಯೂ ಹಿಂದೆ ನೋಡದೆ ಸೀದಾ ಬಂದವರು ಏಳನೇ ಸುತ್ತಿಗೆ ತಲುಪಿದೆವು. ಅದು ಆರೋಹಿಗಳಿಗೆ ಮೊದಲನೆಯ ವಿಶ್ರಾಂತಿ ಸ್ಥಾನವಾದುದರಿಂದ ಶ್ರೀ ಕೆಂಟರೂ ಬರಲೆಂದು ಬಳಿಯಲ್ಲೇ ಇರುವ ಕಲ್ಲಿನಲ್ಲಿ ಕುಳಿತೆವು. ನಾನು ಸಿಗರೇಟು ಹಚ್ಚಿ ಸೇದುವಾಗ ಆಯಾಸಗೊಂಡ ರೋಸ್ಲಿಯು ನನ್ನ ಹೆಗಲ ಮೇಲೆ ಕೈ ಹಾಕಿ ಕುಳಿತುದನ್ನು ಕಂಡ ಮೇನೆ ಹೊರುವ ಆಳುಗಳು ಮನದಲ್ಲೇ ಮುಗುಳು ನಗುವುದನ್ನು ಗಮನಿಸಿ ನನಗೆ ಸ್ವಲ್ಪ ಬೇಸರವಾದರೂ ಇಂಥದು ರೂಢಿಯೇ ಆಗಿದ್ದ ರೋಸ್ಲಿಯು ಆ ಕಡೆ ಗಮನ ಕೊಟ್ಟಂತೆಯೇ ಕಾಣಲಿಲ್ಲ. ದೂರದಿಂದ ಶ್ರೀ ಕೆಂಟರು ಬರುವುದು ಕಾಣುತ್ತಿತ್ತು. ಈ ಸಂದರ್ಭದಲ್ಲಿ ಅತಿಥಿಗಳ ಮತ್ತು ನನ್ನ ಸಂವಾದವು ಹೆಚ್ಚಾಗಿ ಇಂಗ್ಲೀಷಿನಲ್ಲಿಯೇ ನಡೆಯುತ್ತಿದ್ದುದರಿಂದ ಹಳ್ಳಿಗರಾದ ಮೇನೆ ಹೊರುವ ಕೂಲಿಗಳು ಆ ಇಂಗ್ಲಿಷ್ ಕುಟುಂಬದವರಿಗೆ ತುಳು, ಕನ್ನಡ ಬರುವುದಿಲ್ಲವೆಂಬ ನಿರ್ಧಾರಕ್ಕೆ ತಮ್ಮಲ್ಲೇ ಬಂದಿರಬೇಕು ! ಹಾಗಾಗಿ ಮೇನೆ ಹೊರುವಾಗ ಅಶ್ಲೀಲವಾಗಿ ತಮಾಷೆಯ ಮಾತುಗಳನ್ನು ತಮ್ಮ ಭಾಷೆಯಲ್ಲಿ ಧಾರಾಳ ಬಳಸುತ್ತಿದ್ದರೆಂದು ನನಗೆ ಅನಂತರ ತಿಳಿಯಿತು. ನೂರಾರು ಮಂದಿ ಘಟ್ಟದ ಕೆಳಗಿನ ಆಳುಗಳನ್ನು ದುಡಿಸುತ್ತಿದ್ದ ದೊರೆ ದಂಪತಿಗಳಿಗೆ ಕನ್ನಡ, ತುಳು ಚೆನ್ನಾಗಿ ಬರುತ್ತಿತ್ತು. ಆದರೆ ಮಾತಿನ ಧಾಟಿಯು ಮಾತ್ರ ಇಂಗ್ಲಿಷಿನಂತೆಯೇ ಇದ್ದು ಕೇಳಲು ವಿಚಿತ್ರವೆನಿಸುತ್ತಿತ್ತು. ಮೇನೆಯನ್ನು ಹೊತ್ತ ಕೂಲಿಗಳು ಸುಮಾರು ಅರ್ಧ ಗಂಟೆ ವಿಶ್ರಾಂತಿಯನ್ನು ಹೊಂದಿ, ಎಲೆಯಡಕೆ ತಿಂದು ಅಲ್ಲಿಂದ ಹೊರಡಬೇಕೆಂದೂ, ನಾವು ಒಳದಾರಿಯಿಂದ ಮುಂದೆ ಹೋಗಿ ಸೈಮನ್ ಲೋಬೋರ ಮನೆಯಲ್ಲಿರುವುದಾಗಿಯೂ ಅವರಿಗೆ ಹೇಳಿ, ಕಾಲಿಗೆ ಕಚ್ಚಿದ ಇಂಬಳಗಳನ್ನು ಕಿತ್ತು [illegible]

ಮೇನೆ ಪ್ರಯಾಣದ ಶ್ರೀಮತಿ ಕೆಂಟರು ಪುನಃ ಹಿಂದಾದರು. ದಣಿವಾರಿಸಿ ಚೇತರಿಸಿದ ಕೂಲಿಗಳಿಗೆ ಮೋಜು ಮಾಡಬೇಕೆಂಬ ಇಚ್ಛೆ ಉದಿಸಿತೆಂದು ಕಾಣುತ್ತದೆ. ಮೇನೆ ಹೊತ್ತವರಲ್ಲೊಬ್ಬ ಇತರರೊಡನೆ ತುಳುವಿನಲ್ಲಿ ಮಾತಾಡುತ್ತ ಶ್ರೀಮತಿ ಕೆಂಟರ ಸೊಬಗನ್ನು ಮೆಚ್ಚಿಕೊಂಡು 'ಮೇನೆಯನ್ನು ಕಾಡಿಗೆ ಹೊತ್ತರೆ ಹೇಗೆ?' ಎಂದ. ಈ ಮಾತು ಅರ್ಥವಾದ ಶ್ರೀಮತಿ ಕೆಂಟರು ರೈಫಲನು ಬಳಿಗೆ ಎಳಕೊಂಡರಲ್ಲದೆ ತನಗೆ ಎಳ್ಳಷ್ಟೂ ಅರ್ಥವಾಗಿದೆ ಎಂಬ ಭಾವನೆಯನ್ನು ತೋರ್ಪಡಿಸಲಿಲ್ಲ "ಹುಂ, ಸ್ಟಾರ್ಟ್" ಎಂದರು ಎಂದಿನ ಗಾಂಭೀರ್ಯದಿಂದ! ಮೇನೆಯು ಸೈಮನ್ ಲೋಬೋರ ಮನೆಗೆ ಬಂತು. ಎರಡನೇ ಮಜಲಿನ ವಿಶ್ರಾಂತಿಯನ್ನು ಅಲ್ಲಿ ಅನುಭವಿಸಿ, ಅವರ ಟೀ-ಸತ್ಕಾರವನ್ನು ಪಡೆದು ಮತ್ತೆ ಬಂಗ್ಲೆಗಿರುವ ಮೂರು ಮೈಲು ದಾರಿಯನ್ನು ಶ್ರೀಮತಿಯವರೂ ನಡೆದೇ ಹೋಗುವುದೆಂದು ತೀರ್ಮಾನಿಸಿದೆವು. ಕೆಲಸದವರ ಸಂಬಳ ಬಟವಾಡೆಯನ್ನು ಮಾಡಿ ನಾನೂ ಶ್ರೀಮತಿ ಕೆಂಟರೂ ಒಟ್ಟಿಗೆ ಬರುವುದಾಗಿಯೂ ಶ್ರೀ ಕೆಂಟರೂ ರೋಸ್ಲಿಯೂ ದುಮಿಂಗ ಲೋಬೋರೊಂದಿಗೆ ಸಿಧಾನವಾಗಿ ಬಂಗಲೆಗೆ ನಮ್ಮಿಂದ ಮೊದಲೇ ಹೋಗುವುದೆಂದೂ ಅಭಿಪ್ರಾಯವಾಗಿ ಅವರನ್ನು ಮುಂದೆ ಕಳುಹಿಸಿಯಾಯಿತು.

ಇಷ್ಟರವರೆಗೆ ಇಂಗ್ಲಿಷಿನಲ್ಲೇ ಮಾತಾಡುತ್ತಿದ್ದ ಶ್ರೀಮತಿ ಕೆಂಟರು ಥಕ್ಕನೆ ನನ್ನಲ್ಲಿ ತುಳುವಿನಲ್ಲಿ ಸಂಭಾಷಣೆಗೆ ತೊಡಗಿ ಮೇನೆ ಹೊತ್ತಿದ್ದ ಆಳುಗಳು ದಾರಿಯಲ್ಲಿ ನುಡಿದ ಕುಚೇಷ್ಟೆಯನ್ನು ಬಯಲಿಗೆಳೆದರು! ಕೆಲಸದಾಳುಗಳ ಮುಖ ಕಪ್ಪಿಟ್ಟಿತು. ಕೈಕಾಲುಗಳು ನಡುಗತೊಡಗಿದವು. ಅವರು ತಗ್ಗಿಸಿದ ತಲೆಯನ್ನು ಮೇಲೆತ್ತಲಿಲ್ಲ. ಆಳುಗಳನ್ನು ಆ ಬಗೆಗೆ ಒಂದಿಷ್ಟೂ ಶಿಕ್ಷಿಸದೆ ಬರಿಯ ಮಾತಿನ ಮೊನೆಯಿಂದಷ್ಟೇ ಚುಚ್ಚಿ ಶುದ್ಧಗೊಳಿಸುತ್ತ ನಗುಸೂಸಿ ಮಾತಾಡಿದ ಆಕೆಯ ವ್ಯಕ್ತಿತ್ವ ಮರೆಯುವಂಥದಲ್ಲ. ಕೂಲಿಯಾಳುಗಳನ್ನು ಕೆಳಗಡೆಗೆ ಕಳುಹಿಸಿ, ನಾವು ಕರೆ ಕಳುಹಿಸಿದೆಂದು ಮೇನೆ ಹೊರಲು ಪುನಃ ಬರಬೇಕೆಂದು ಹೇಳಿ ಬೀಳ್ಕೊಟ್ಟೆವು. ನಾನೂ ಶ್ರೀಮತಿ ಕೆಂಟರೂ ಸೈಮನ್ ಲೋಬೋರವರ ಮುಂದಾಳುತ್ವದಲ್ಲಿ ಕುದುರೆಮುಖದತ್ತ ನಡೆಯತೊಡಗಿದೆವು.

ಕುದುರೆಮುಖದ ಬಂಗ್ಲೆಯನ್ನು ನಾವು ತಲಪುವಾಗ ಸಂಜೆ ಗಂಟೆ ಆರಾಗಿತ್ತು. ಆ ಮೊದಲೇ ಅಲ್ಲಿಗೆ ತಲಪಿದ್ದ ರೋಸ್ಲಿಯೂ ದೊರೆಗಳೂ ವಿಶ್ರಾಂತಿಯನ್ನು ಪಡೆಯಲು ಬಂಗಲೆಯ ಪ್ರಾಂಗಣದಲ್ಲಿದ್ದ ಪಶ್ಚಿಮಾಭಿ ಮುಖ ಆಸನದಲ್ಲಿ ಸುಖಾಸೀನರಾಗಿ ಅಸ್ತಂಗತ ಸೂರ್ಯನ ಸೊಬಗನ್ನು ಸವಿಯುತ್ತಿದ್ದರು. ನಾವೂ ಅವರ ಬಳಿಯಲ್ಲೆ ಕುಳಿತೆವು. ಆಗ ತಾನೇ ಮುಳುಗುತ್ತಿದ್ದ ಸೂರ್ಯಬಿಂಬದ ಸೊಗಸಿಗೂ, ಪಶ್ಚಿಮಾಕಾಶದ ವರ್ಣ ಸಂಗಮದ ಮೋಡಿಗೂ ಮಾರುಹೋದೆವು. ನಮ್ಮ ಅಸ್ತಿತ್ವವನ್ನೇ ಮರೆ ಯಿಸುವ ತಾದಾತ್ಮ್ಯವನ್ನು ಆ ಚೆಲುವಿನ ನೋಟ ಒದಗಿಸಿತ್ತು. ಅಂದು ಹುಣ್ಣಿಮೆ. ಸೂರ್ಯಾಸ್ತಮಾನವಾಗುತ್ತಲೆ ಪೂರ್ವದಿಗಂತದಲ್ಲಿ ಚಂದ್ರೋ ದಯದ ಚೆಲ್ವಿಕೆಯ ದರ್ಶನ! ಆ ಕಡೆಗೆ ಮುಖ ಮಾಡಿ ಕುಳಿತ ನಮಗೆ ಮತ್ತೆ ಅಖಂಡ ಸೌಂದರ್ಯಾಸ್ವಾದನೆ! ಮಂಜು ಸುರಿಯತೊಡಗಿ ಚಳಿಯ ಬಾಧೆಯ ಅರಿವಾದಾಗ ನಾವು ಅಲ್ಲಿಂದ ಎದ್ದು ಬಂಗಲೆಯೊಳಗೆ ನಡೆಯಲೇ ಬೇಕಾಯಿತು.

ಆ ಇಂಗ್ಲಿಷ್ ಕುಟುಂಬಕ್ಕೆ ಬೇಕಾದ ತುರ್ತಿನ ಊಟವು - ಪೆಟ್ಟಿಗೆ ಯಲ್ಲಿಯೇ ಸಿದ್ಧವಿತ್ತು. ಗಾಳಿ ಸೇರದಂತೆ ಮುಚ್ಚಿದ್ದ ಪಾತ್ರೆಗಳಲ್ಲಿ ಕೆಡದಂತೆ ಕಾಪಿಟ್ಟ ಬೆಂದ ಮಾಂಸ, ಮೀನು, ಕೊಂಚ ಶಾಖಕ್ಕೆ ಇರಿಸಿ ಉಪ್ಪು ಮೆಣಸು ಸಾಂಬಾರ ಹುಡಿಯನ್ನು ಅದಕ್ಕೆ ಉದುರಿಸಿಕೊಂಡರೆ ಅವರಿಗೆ ಬೇಕು ಬೇಕಾದ ಖಾದ್ಯವು ಸಿದ್ಧವಾದಂತೆ. ಇನ್ನು ದೇವದಾರು ಪೆಟ್ಟಿಗೆಯಲ್ಲಿದ್ದ ಬ್ರೆಡ್ಡಿನ ಕಟ್ಟನ್ನು ತೆಗೆದು ಹರಿತ ಕತ್ತಿಯಿಂದ ಕ್ಯೊದು, ಆ ತುಂಡುಗಳನ್ನು ಕಾವಲಿಯಲ್ಲಿಟ್ಟು ಹುರಿದರೆ ಗಮಗಮಿಸುವ ಹೊಸ ರೊಟ್ಟಿ ಸಿದ್ಧ. ಅದಕ್ಕೆ ಬೆಣ್ಣೆ ಸವರಿ ತಿಂದು ಒಂದು ಲೋಟ ಚಾ ಕುಡಿದರೆ ಅವರ ಊಟವಾದಂತೆ.

ನನಗಾದರೊ ರಾತ್ರಿ ಒಂದು ಹಿಡಿ ಅನ್ನ ಇಲ್ಲವಾದರೆ ಏನು ತಿಂದರೂ ಉಪವಾಸವಿದ್ದಂತೆ! ಅವರ ಕರಂಡದ ಮಾಂಸವನ್ನು ನಾನು ತಿನ್ನುವವನಲ್ಲ. ಅವರು ತಿನ್ನೆಂದು ಹೇಳಲಿಕ್ಕೂ ಇಲ್ಲ. ಕಾರಣ ಅದು ಹೊರದೇಶದಿಂದ ಬಂದ ಯಾವ ಪ್ರಾಣಿಯ ಮಾಂಸವೊ? ಏನೊ? ಆದರೆ ಮೀನು ತಿನ್ನ ಬಹುದಲ್ಲವೇ? ಅದರ ತುಂಡುಗಳನ್ನು ನೋಡುತ್ತೇನೆ. ನೀರಿನಲ್ಲಿ ತೊಳೆದು ಪದಾರ್ಥಕ್ಕೆ ಸಿದ್ಧಪಡಿಸಿದ ತುಂಡಿನಂತಿದೆ. ಇದನ್ನು ತಿಂದರೆ ಖಂಡಿತಾ

ವಾಂತಿಯಾದೀತು ಎಂದುಕೊಂಡು ನಯವಾದ ಮಾತಿನಲ್ಲಿ ಅವರೊಂದಿಗೆ ಊಟ ಮಾಡುವುದನ್ನು ನಿರಾಕರಿಸಿ, ದುಮಿಂಗರೊಡನೆ ಎರಡು ಪಾವು ಅಕ್ಕಿ ಒಲೆಗಿಡುವಂತೆ ಹೇಳಿದೆ. ಬಂಗಲೆಯ ಬಳಿಯಿರುವ ಪುದಿನಾ ಸೊಪ್ಪನ್ನು ಆರಿಸಿ ಅದರಿಂದ ನನಗೆ ತಕ್ಕಂತೆ ಖಾರವಾದ ಚಟ್ನಿಯನ್ನು ಮಾಡಲೂ ಹೇಳಿದೆ. ನಾವು ಹೀಗೆ ಮಾತಾಡುತ್ತಿರುವಾಗ ಶ್ರೀಮತಿ ಕೆಂಟರಿಗೆ ಕಣ್ಣು ಸನ್ನೆ ಮಾಡಿ ಒಳಗೆ ಹೋದ ಹಿರಿಯ ಕೆಂಟರನ್ನೂ ಹಿಂಬಾಲಿಸಿದ ತಾಯಿ ಯನ್ನೂ ನೋಡಿ ರೋಸ್ಲಿ ಮುಗುಳ್ನಗೆ ನಕ್ಕಳು. ಅವರು ತುಸು ಮದ್ಯ ಸೇವನೆಗಾಗಿ ಒಳಹೋದುದೆಂದು ಕಣ್ಣುಸನ್ನೆಯಲ್ಲಿ ನನಗೆ ಸೂಚಿಸಿ ಮತ್ತೆ ನಕ್ಕಳು. ನಾವು ಇಬ್ಬರೇ ಹೊರಕೋಣೆಯಲ್ಲಿ ಕುಳಿತು ಹತ್ತು ಹದಿನೈದು ನಿಮಿಷಗಳಷ್ಟು ಕಾಲ ಮರುದಿನದ ನಮ್ಮ ಬೇಟೆಯ ಕಾರ್ಯಕ್ರಮವನ್ನು ಕುರಿತು ಮಾತಾಡುತ್ತಿದ್ದೆವು. ಆಗ ಆ ಇಂಗ್ಲಿಷ್ ದಂಪತಿಗಳು ಹೆಗಲಿಗೆ ಕೈಹಾಕಿ ತಬ್ಬಿಕೊಂಡು ತೂರಾಡುತ್ತಾ ಹೊರಗೆ ಬಂದರು. ಎಡಗೈಯಲ್ಲಿ ಶ್ರೀ ಕೆಂಟರು ಭದ್ರವಾಗಿ ದ್ರಾಕ್ಷಾರಸದ ಕುಪ್ಪಿ ಹಿಡಿದಿದ್ದರು. ಊಟಕ್ಕೆ ಮೊದಲು ಇದನ್ನು ಜೀರ್ಣರಸವೆಂಬಂತೆ ಮಕ್ಕಳೂ ತೆಗೆದುಕೊಳ್ಳಲು ಇಂಗ್ಲಿಷ್ ಜನರಲ್ಲಿ ನಿಷೇಧವಿಲ್ಲವೆಂದು ರೋಸ್ಲಿಯು ನನಗೆ ತಿಳಿಸಿದಳು.

ರುಚಿಯಾದ ವೈನನ್ನು ಅರ್ಧ ಲೋಟದಷ್ಟು ಹಿರಿಯರೇ ನಮಗೆ ಕೊಟ್ಟು ಅವರೂ ತಮ್ಮ ಗ್ಲಾಸುಗಳಿಗೆ ಹೊಯ್ದುಕೊಂಡರು. ಒಬ್ಬರ ಲೋಟಕ್ಕೆ ಮತ್ತೊಬ್ಬರ ಲೋಟವು ಮುತ್ತಿಕ್ಕುವಂತೆ ಮೆಲ್ಲನೆ ತಾಗಿಸಿ ಹಿರಿ ಯರು "ಕಿರಿಯರ ಆರೋಗ್ಯ ಭಾಗ್ಯವನ್ನು ಆಶಿಸಿ" ಎಂದು ಕುಡಿಯಲು ಆರಂಭಿಸಿದರು. ಈ ತನಕ ಹಿರಿಯರೆದುರಿಗೆ ಯಾವೊಂದು ಮಾದಕ ಪೇಯ ವನ್ನೂ ಮುಟ್ಟಿನೋಡಿಯೂ ನನಗೆ ಅಭ್ಯಾಸವಿಲ್ಲ. ನಾನು ಸಂಕೋಚ ಪಡುತ್ತಿರುವುದನ್ನು ಕಂಡ ರೋಸ್ಲಿಯು ಅವಳ ಗ್ಲಾಸನ್ನು ನನ್ನ ಗ್ಲಾಸಿಗೆ ಸೋಕಿಸಿ ದ್ರಾಕ್ಷಾರಸವನ್ನು ಹೀರಲು ಆರಂಭಿಸಿದಳು. ದ್ರಾಕ್ಷಾರಸವನ್ನು ನಿಧಾನವಾಗಿ ಸೀಪಿದರೆ ಅದರ ರುಚಿಯೇ ಬೇರೆ ಎಂದೂ ಅದರಲ್ಲಿ ಅಮಲಿನ ಅಂಶ ಅತಿ ಕಡಿಮೆಯೆಂದೂ ನನಗೆ ತಿಳಿಸಿದಳು. ಹೆತ್ತವರು ಹೊರಗೆ ಹೋಗಿದ್ದ ಸಮಯ ಸಾಧಿಸಿ ನನಗರಿಯದಂತೆ ನಮ್ಮಿಬ್ಬರ ಲೋಟಾಗಳನ್ನು ಬದಲಿಸಿ ಇರಿಸಿದ್ದು ಆ ಗಳಿಗೆಯಲ್ಲಿ ಅವಳು ಮಾಡಿದ ಚಮತ್ಕಾರವಾಗಿತ್ತು.

ನಾನು ಅವಳ ಎಂಜಲು ಕುಡಿದೆನೆಂದು ಒಮ್ಮೆ ನಕ್ಕರೂ ಅವರ ಸಂಪ್ರದಾಯದಲ್ಲಿ ಮೇಲು ಕೀಳೆಂಬ ಭಾವನೆಯನ್ನು ತೊಡೆದ ದ್ಯೋತಕವು ಅದೆಂದು ಸ್ಪಷ್ಟೀಕರಿಸಿದಳು. ನಾನು ಸಿಡುಕದೆ ಅವಳ ಸಂತೋಷದಲ್ಲಿ ಭಾಗಿಯಾದೆ. ಅಷ್ಟರಲ್ಲಿ ನನಗಾಗಿ ಗಂಜಿಯೂ ಚಟ್ನಿಯೂ ಸಿದ್ಧವಾಯಿತು. ರೋಸ್ಲಿಯು ಪ್ಲೇಟುಗಳನ್ನು ತಿಕ್ಕಿ ನಮ್ಮೆಲ್ಲರ ಮುಂದಿಟ್ಟು ತಂದೆ ತಾಯಿಗಳೊಂದಿಗೆ "ನಾನೂ ಕೈಯ ಊಟವನ್ನೇ ಉಣ್ಣುತ್ತೇನೆ" ಎಂದು ನನಗೆ **Company** ಕೊಟ್ಟಳು. ಹಿರಿಯರು ತಮಗೆ ಬೇಕಾದುದನ್ನು ತೆಗೆದುಕೊಂಡು ಊಟಕ್ಕೆ ಆರಂಭಿಸಿದರು. ನಾನೂ ರೋಸ್ಲಿಯೂ ಗಂಜಿ ಬಳಸಿಕೊಂಡು ಚಟ್ನಿಯನ್ನು ನೆಂಜಿಕೊಳ್ಳುತ್ತಾ ಉಣ್ಣತೊಡಗಿದೆವು. ನಾನು ಬದಿಯಲ್ಲಿದ್ದ ಮೀನಿನ ಪಾತ್ರೆಯಿಂದ ಒಂದು ಮೀನಿನ ತುಂಡನ್ನು ಮುಳ್ಳು ಚಮಚೆಯಿಂದ ತೆಗೆದು ಚಟ್ನಿಯಲ್ಲಿ ಅದ್ದಿ ತಿಂದು ನೋಡುತ್ತೇನೆ; ನಮ್ಮ ಮಸಾಲೆಯ ಸೇರುವಿಕೆಯಿಂದ ಮೀನು ತುಂಬಾ ರುಚಿಯಾಗಿದೆ! ರೋಸ್ಲಿಗೆ ತಿಂದು ನೋಡೆಂದು ಹೇಳಿದೆ. ಅವಳೂ ನನ್ನನ್ನು ಅನುಸರಿಸಿ ಬಾಯಿ ಚಪ್ಪರಿಸುವುದನ್ನು ಕಂಡು ಹಿರಿಯರೂ ನಮ್ಮ ಸಾಲಿಗೇ ಬಂದು ನನ್ನ ಈ ಆಯ್ಕೆಯನ್ನು ಬಾಯಿ ತುಂಬಾ ಹೊಗಳಿದರು.

ನಾವು ಊಟ ಮುಗಿಸಿ ವೆರಾಂಡಕ್ಕೆ ಬರುವಾಗ ಗಂಟೆ ಸುಮಾರು ಒಂಬತ್ತು ಒಂಬತ್ತೂವರೆಗೆ ಬಂದಿತ್ತು. ಕೆಳಗೆ ದೂರದಿಂದ ಸೈಮನ್ ಲೋಬೋರ ಮನೆಯ ಹತ್ತಿರವಿಟ್ಟ ಸುಡುಮಣ್ಣು ಉರಿದು ಮನೆಯ ಮಾಡು ಹಟ್ಟಿ ಕೊಟ್ಟಿಗೆಗಳು ಹಾಲಿನಂತೆ ಸುರಿಯುತ್ತಿರುವ ಬೆಳದಿಂಗಳಲ್ಲಿ ಸ್ಪಷ್ಟವಾಗಿ ಕಾಣುತ್ತಿದ್ದವು. ಕುದುರೆಮುಖದ ಪೂರ್ವಕ್ಕಿರುವ ಹಿರಿಮಾರ ಹುಪ್ಪೆಯು ತಲೆ ಎತ್ತಿ ಆಕಾಶವನ್ನು ಚುಂಬಿಸಲು ಹವಣಿಸುವಂತೆ ಕಾಣುತ್ತದೆ. ಅದರ ಆಚೆಗಿರುವ ಜನವಳಿಗುಡ್ಡೆ, ಕದ್ರಿ ಕಲ್ಲಘಾಟಿಯು ದಿಗಂತದತ್ತ ಬಾಗಿದಂತೆ ಗೋಚರಿಸುತ್ತಿವೆ. ಹಿರಿಯರು ಆಗಾಗ್ಗೆ ಒಂದೊಂದು ಪ್ರಶ್ನೆಯನ್ನು ಕೇಳುತ್ತಿದ್ದರು. ನಾನು ತಡವರಿಸಿ ಉತ್ತರಿಸುವುದನ್ನು ಕಂಡ ರೋಸ್ಲಿಯು ಅಭ್ಯಾಸವಿಲ್ಲದ ನಾನು ದಾಕ್ಷಾರಸದ ಅಮಲಿನಿಂದ ತಬ್ಬಿಬ್ಬಾಗಿ ಉತ್ತರಿಸುವುದು ಎಂಬ ಭಾವನೆಯಿಂದ ನಗುತ್ತಿದ್ದಳು. ಆ ಮುಗ್ಧ ಹೆಣ್ಣಿಗೇನು ಗೊತ್ತು? ನಾನು ಸೈಮನ್ ಲೋಬೋರವರ ಮನೆಯಲ್ಲಿ ಮೊಗೆ

ಗಟ್ಟಲೆ ಹೆಂಡ ಕುಡಿದು ಕುಣಿದವನೆಂದು ? ಬಂಗಲೆಯ ತೋಟದ ಮಲ್ಲಿಗೆ, ಜಾಜಿ, ಬಿರಿದ ಗುಲಾಬಿಯ ಕಂಪೂ, ಸುತ್ತಲ ಪರಿಸರದ ನೋಟವೂ ನನ್ನ ಮನ ಸೆಳೆದಿದ್ದವೆಂದು ಅರಿಯುವ ಪ್ರಬುದ್ಧೆ ಅವಳಾಗಿರಲಿಲ್ಲ. ಆದರೆ ಆ ಹಿರಿಯರು ನನ್ನ ತಲ್ಲೀನತೆಯನ್ನು ಕಂಡು ಮೆಚ್ಚಿ 'ರೈ ನಿನ್ನ ವೈವಿಧ್ಯಮಯ ಅಭಿರುಚಿಗೆ ನಮ್ಮ ವಂದನೆಗಳು. ಇನ್ನು ಹಾಲು ಕುಡಿದು ಮಲಗೋಣವೇ?' ಎನ್ನುವಾಗ ದೂರದಿಂದ ಹುಲಿಯ ಮೊರೆಯುವಿಕೆ ಕೇಳಿಬಂತು. ನನ್ನಿಂದ ದೂರ ಕುಳಿತಿದ್ದ ರೋಸ್ಲಿ ಒಡನೆ ಕಂಪಿಸಿ ಮೆಲ್ಲಗೆ ನನ್ನನ್ನು ಒತ್ತಿ ಕುಳಿತು ದನ್ನು ಕಂಡು ನಾನು ಅವಳ ಭೀರುತನಕ್ಕೆ ನನ್ನಲ್ಲೆ ನಕ್ಕೆ. ನಾನು ಒಮ್ಮೆ ನಿಧಾನವಾಗಿ ಆಕಳಿಸಿ ನಿದ್ರಿಸಲು ಸಿದ್ಧನೆಂದು ಸೂಚಿಸಿದೆ. ಎಲ್ಲರೂ ಎದ್ದು ರಾತ್ರಿಯ ನಮಸ್ಕಾರ ವಿನಿಮಯ ಗೈದು ಮಲಗಲು ತಮತಮಗೆ ಸಿದ್ಧವಾಗಿದ್ದ ಕೋಣೆಗಳಿಗೆ ತೆರಳಿದೆವು. ಉಣ್ಣೆಯಿಂದಲೇ ಸಿದ್ಧವಾದ ಹಾಸಿಗೆ, ದಿಂಬು, ಚಳಿಯು ಸೋಕದಂಥ ನಯವಾದ ಕಾಶ್ಮೀರಿ ಉಣ್ಣೆಯ ಶಾಲನ್ನು ಹೊದ್ದು ತಲೆದಿಂಬಿಗೆ ತಲೆಯನ್ನು ಕೊಟ್ಟುದು ಮಾತ್ರ ನೆನಪು. ದ್ರಾಕ್ಷಾರಸದ ಪ್ರಭಾವವೋ? ಸುಂದರ ದೃಶ್ಯಾವಳಿಯನ್ನು ಸವಿದ ಸಂತುಷ್ಟಿಯೋ ? ನಡೆದು ಬಂದ ಆಯಾಸವೋ? ಅಂತೂ ಗಡದ್ದು ನಿದ್ದೆ. ಮರು ದಿನ ಏಳೂವರೆ ಗಂಟೆಗೆ ಇಂಗ್ಲಿಷ್ ಕುಟುಂಬವು ಆ ವೇಳೆಗಾಗಲೇ ಎದ್ದು ಮುಖಮಾರ್ಜನವನ್ನು ತೀರಿಸಿ ವಿಶಾಲ ಪ್ರಾಂಗಣದಲ್ಲಿ ಏಸುದೇವನ ಕಾಲ ಬಳಿ ಮಂಡಿಯೂರಿ ಸುಶ್ರಾವ್ಯವಾಗಿ ಹಾಡುವ ಪ್ರಾರ್ಥನೆಯು ನಾನು ಮಲಗಿದ್ದಲ್ಲಿಗೆ ಕೇಳಿಸಿತು.

ನಾನೂ ಲಗುಬಗೆಯಿಂದ ಎದ್ದು ಬಹಿರ್ದೆಸೆಗೆ ಹೋಗಿ ಮುಖ ತೊಳೆದು ಬಂದು ಉದಿಸಿದ ಸೂರ್ಯದೇವನಿಗೆ ನಮಸ್ಕಾರ ಮಾಡಿ ಇಂಗ್ಲಿಷ್ ಕುಟುಂಬದೊಂದಿಗೆ ಕಾಫಿ ಫಳಾರಕ್ಕೆ ಸಿದ್ಧನಾದೆ. ಫಳಾರ ಮುಗಿದೊಡನೆಯೆ ರೋಸ್ಲಿ "ರೈ, ಒಂಬತ್ತು ಗಂಟೆಗೆ ಮೊದಲು ಮೃಗಗಳನ್ನು ಕಂಡೇ ತೀರ ಬೇಕೆಂದು ನೀನು ನಿನ್ನೆ ಹೇಳಿದೆಯಲ್ಲ. ಹುಂ, ಹೊರಡೋಣ" ಎಂದು, ಒಳಗೆ ಹೋದವಳು ಬೇಟೆಯ ವೇಷವನ್ನು ಧರಿಸಿ ತೋಟೆಯ ಬೆಲ್ಟನ್ನು ಎದೆಗೆ ತೂಗ ಹಾಕಿ ದೂರದರ್ಶಕವನ್ನೂ ಹೆಗಲಿಗೆ ಇಳಿಬಿಟ್ಟು ನಮ್ಮ ಮುಂದೆ ಅವಳು 303 ರೈಫಲನ್ನು ಹಿಡಿದು ಬಂದ ಠೀವಿ ಮರೆಯುವಂತಿಲ್ಲ.

ನಾನೂ ಸಿದ್ಧನಾಗಿ ಬರಲು ಕೋಣೆಗೆ ತೆರಳಿದೆ. ಗಂಡು ಮಕ್ಕಳಿಲ್ಲದ ದಂಪತಿಗಳು, ಮಗಳು ನಿಂತ ನಿಲುವನ್ನು ಮೆಚ್ಚುಗೆಯ ನೋಟದಿಂದ ಸವಿಯುತ್ತಿದ್ದರು.

ಹಿಂದಿನ ರಾತ್ರಿ ಮಾತಾಡುವಾಗ ವಿಲಾಯತಿಯ ಜನರು ಬೇಟೆಯ ಸಂದರ್ಭದಲ್ಲಿ ಸಂತಾನರಕ್ಷೆಯ ಕಾರಣಕ್ಕಾಗಿ ಹೆಣ್ಣು ಮೃಗಗಳಿಗೆ ಎಂದೂ ಹೊಡೆಯಬಾರದೆಂಬ ನಿಯಮವಿದೆಯೆಂದು ನನಗೆ ಗೊತ್ತಾಗಿತ್ತು. ಈ ನಿಯಮದಲ್ಲಿ ಹಂದಿಯನ್ನು ಮಾತ್ರ ಹೊರತುಪಡಿಸಿದರಂತೆ. ಹಾಗೆ ಯಾರಾದರೂ ತಪ್ಪಿ ಹೊಡೆದಲ್ಲಿ ಮೃಗದ ಜಾತಿಗೆ ಅನುಸಾರವಾಗಿ ಬೇಟೆಗಾರರ ಸಂಘದಲ್ಲಿ ನಿರ್ಣಯವಾದ ತಪ್ಪನ್ನು ಸಂಘಕ್ಕೆ ತೆತ್ತೇ ತೀರಬೇಕಾಗಿತ್ತು. ಅಂದು ಕಾಡುಕೋಣ, ಕಡವೆ ಶಿಕಾರಿಗೆ ನಾವು ಹೋಗುವವರಾದುದರಿಂದ ಎಲ್ಲಿಯಾದರೂ ಅವಸರದಿಂದ ಹೆಣ್ಣು ಮೃಗವನ್ನು ಹೊಡೆದರೆ ಸಾವಿರಾರು ರೂಪಾಯಿಗಳ ದಂಡ ತೆರಬೇಕಾಗಬಹುದು. ಹಾಗಾಗಿ ಬೇಟೆಯಾಗದಿದ್ದರೂ ಚಿಂತಿಲ್ಲ. ಹೆಣ್ಣುಗಂಡೆಂಬ ನಿಶ್ಚಯವಾಗದೆ ಹೊಡೆಯಬಾರದೆಂದೂ ತಿಳಿಯಪಡಿಸಿ, ಆ ಬಗೆಗೆ ಎರಡು ಮೂರು ಸಲ ಎಚ್ಚರಿಸಿ, ಬೇಟೆಗೆ ಸಿದ್ಧರಾಗಿ ಬಂದ ನನ್ನನ್ನೂ ರೋಸ್ಲಿಯನ್ನೂ ಜಯಶಾಲಿಗಳಾಗಿ ಬನ್ನಿರೆಂದು ಕೆಂಟ್ ದಂಪತಿಗಳು ಬೀಳ್ಕೊಟ್ಟರು.

ಈ ಹೊತ್ತಿಗೆ ದುಮಿಂಗರೂ ಬಂದು ತಲುಪಿದ್ದರು. ಅವರೂ ನಿಪುಣ ಶಿಕಾರಿ. ಆ ಊರಿನಲ್ಲಿ ಎಲ್ಲಾ ಜಾಡನ್ನೂ ಅರಿತು ನುರಿತವರು. ಅವರೂ ತನ್ನ 12 ಬೋರಿನ ಒತ್ತೆ ನಳಿಗೆಯ ಕೋವಿಯನ್ನು ಹಿಡಿದು ಸಿದ್ಧರಾಗಿಯೇ ಬಂದು - ದೊರೆಗಳೊಡನೆ ತನ್ನಲ್ಲಿ ಗುಂಡಿನ ತೋಟೆ ಕಡಿಮೆಯಾಗಿದೆ ಎಂದೂ, ಎರಡು ತೋಟಾಗಳನ್ನು ದಯಪಾಲಿಸಬೇಕೆಂದೂ ಕೇಳಿದರು. ಕೆಂಟರು ನಾಲ್ಕು ತೋಟೆಗಳನ್ನು ಅವರಿಗೆ ಕೊಟ್ಟು ನಮಗೆ ಮಗುದೊಮ್ಮೆ ಎಚ್ಚರಿಕೆಯಿಂದ ಇರುವಂತೆ ಹೇಳಿ ಬೀಳ್ಕೊಟ್ಟರು.

ಹಿಂದಿನ ದಿನ ತೆಂಕು ಭಾಗದಿಂದ ಹುಲಿಯ ಗರ್ಜನೆಯನ್ನು ಕೇಳಿದ್ದು ದುಮಿಂಗರು ಆ ಆಸುಪಾಸಿನಲ್ಲಿ ಯಾವ ಮೃಗವೂ ಇಂದು ಇರದೆಂದೂ, ಬಂಗಲೆಯ ಮೂಡುದಿಕ್ಕಿನ ಸುಮಾರು ಒಂದೂವರೆ ಮೈಲು ದೂರದ ಕಾಟಿಕಾನದಲ್ಲಿ ಕಾಟಿಗಳಾಗಲೀ ಕಡವೆ ಹಿಂಡಾಗಲೀ ಇರುತ್ತವೆಂದೂ ಹೇಳಿದರು.

ಆದರೆ ಅಲ್ಲಿಗೆ ಹೋಗುವ ದಾರಿಯು ಮಾತ್ರ ಬಹಳ ಕಡಿದು ಮತ್ತು ಕೊರಕಲು. ದಾರಿಗೆ ಹೆದರಿ ಖಂಡಿತಾ ಮೃಗವಿರುವ ತಾವನ್ನು ಬಿಟ್ಟರೆ ನಮ್ಮ ಜವ್ವನದ ಅಭಿಮಾನಕ್ಕೆ ಕುಂದಲ್ಲವೆ? ಅಲ್ಲಿಗೆ ಹೋಗೋಣವೆಂದು ಒಂದರ್ಧಮೈಲು ಮುಂದುವರಿದಿರಬಹುದು. ಬಳಿಯಿದ್ದ ಮರದಡಿಯಿಂದ ಕಾಡುಮೇಕೆಯೊಂದು ಮಿಂಚಿನಂತೆ ನೆಗೆಯಿತು. "Shoot" ಎಂದೆ ರೋಸ್ಲಿಗೆ. ಆಕೆಯು ಓಡುವ ಮೇಕೆಯನ್ನು ನೋಡುತ್ತಾ ರೈಫಲನ್ನು ಎದೆಗಾನಿಸಿ ನಿಂತಳಲ್ಲದೆ ಕುದುರೆಯನ್ನು ಮೀಟಲೇ ಇಲ್ಲ. ನಾನು ಪ್ರಥಮ ಶಿಕಾರಿಯನ್ನು ಅತಿಥಿಯೇ ಮಾಡಲಿ ಎಂದು ತೆಪ್ಪಗಿದ್ದೆ. ಮಿಕವು ನಮ್ಮ ಗುರಿಯನ್ನು ಕಳೆದು ಓಡಿತು. ರೋಸ್ಲಿಯು ಎದೆಗಾನಿಸಿದ ರೈಫಲನ್ನು ಕೆಳಮುಖವಾಗಿ ಹಿಡಿದು "ಏನು ಮಾಡಲಿ. ಹೆಣ್ಣೋ ಗಂಡೋ ಎಂದು ನಿಶ್ಚಯವಾಗದೆ ಹೊಡೆಯುವುದು ಹೇಗೆಂದು ನೋಡುತ್ತಾ ನಿಂತಿದ್ದೆ. ಅದು ಓಡಿ ಹೋಯಿತು" - ಎಂದು ಬೊಂಬೆಯನ್ನು ಕಳಕೊಂಡ ಮಗುವಿನಂತೆ ಮುಖ ಮಾಡಿದಳು. ಇನ್ನು ಇವಳು ಬೇಟೆಯಾಡಿದಂತೆಯೆ ಎಂದು ನಾನು ಯೋಚಿಸಿಕೊಂಡೆ.

ನಮ್ಮ ಪಯಣವು ಮುಂದುವರಿಯಿತು. ಕಾಟಿಸಳ್ಳದ ಹತ್ತಿರ ಬಂದೆವೆಂದು ದುಮಿಂಗರೆಂದರು. ಎದುರಿಗೆ ಕಾಣುವ ನಿಡಿದಾದ ಕಲ್ಲಿನ ಬುಡಕ್ಕೆ ಹೋಗಿ ಅಲ್ಲಿಂದ ಪಳ್ಳದತ್ತ ಇಣುಕಬೇಕು. ಮೃಗಗಳ ಘ್ರಾಣೇಂದ್ರಿಯವು ಬಲು ಸೂಕ್ಷ್ಮ. ಸ್ವಲ್ಪ ಸೋವು ಸಿಕ್ಕಿದರೂ ಓಡಿದವೆಂದೇ ಅರ್ಥ. ಅದಕ್ಕಾಗಿ ಬೇಟೆಗಾರರೊಂದಿಗೆ ರೋಸ್‌ಪೌಡರ್ ಇದ್ದೇ ತೀರಬೇಕು. ಗುಲಾಬಿಯ ಕಂಪು ಮೃಗಗಳಿಗೆ ಅಭ್ಯಾಸವಿರುವುದರಿಂದ ಈ ಪರಿಮಳವನ್ನು ಅವು ಗಮನಿಸುವುದಿಲ್ಲವೆಂದು ನನ್ನ ಅನುಭವ. ರೋಸ್ಲಿಯೊಂದಿಗಿದ್ದ ಪೌಡರನ್ನು ಮೈತುಂಬಾ ನಾವಿಬ್ಬರೂ ಚೆಲ್ಲಿಕೊಂಡು ಬೆವರು ವಾಸನೆ ಬರುತ್ತಿದ್ದ ದುಮಿಂಗರಿಗೂ ಕೊಟ್ಟು ಕಲ್ಲಿನೆಡೆಗೆ ಮುಂದೆ ನಡೆದೆವು. ಬಂಡೆಯೆಡೆಯಿಂದ ಇಣಿಕಿದ ದುಮಿಂಗರ ಕೈಸನ್ನೆಯಿಂದ ಉಲ್ಲಾಸಗೊಂಡು ಏಳುವುದು ಬೀಳುವುದನ್ನೂ ಗಮನಿಸದೆ ಜೂಜಿನ ಕುದುರೆಗಳಂತೆ ಓಡಿ ಅಲ್ಲಿಂದ ನಾವೂ ಇಣಿಕಿದೆವು. ನೋಡುವುದೇನು ?

ಒಂದಲ್ಲ, ಎರಡಲ್ಲ, ನಾಲ್ಕಲ್ಲ, ಹನ್ನೆರಡು ದೊಡ್ಡ, ಸಣ್ಣ ಕಾಟಗಳು ಸುತ್ತುಗಟ್ಟಿ ಮಲಗಿವೆ. ಮೆಲುಕು ಹಾಕುತ್ತಾ ಮೇಲೆರಗುವ ನೊಣಗಳನ್ನು ತಮ್ಮ ಬಾಲದ ಚವರಿಯಿಂದ ಬೀಸಿ ಓಡಿಸುತ್ತಾ ನಿರ್ಭೀತವಾಗಿವೆ. 'ಹೋ, ಅಪೂರ್ವ' ಎಂಬ ಉದ್ಗಾರವು ರೋಸ್ಲಿಯ ಬಾಯಿಯಿಂದ ಬಂತು. "ಹುಂ, ಹೊಡೆ" ಎಂದು ಪಿಸುಗುಟ್ಟಿದೆ. "ಅದರಲ್ಲಿ ಗಂಡಾವುದು ?" ಎಂದು ಪ್ರಶ್ನಿಸಿದಳು. ಅದು ಗಂಡು ಹೆಣ್ಣಿನ ಚಹರೆಯನ್ನು ವಿವರಿಸುತ್ತಾ ಕುಳಿತುಕೊಳ್ಳುವ ಸಮಯವಾಗಿರಲಿಲ್ಲ. ಒಂದು ನಿಮಿಷ ಕಳೆದರೆ! ನಮ್ಮ ಸೋವು ಸೂಕ್ಷ್ಮಗ್ರಾಹಿಗಳಾದ ಮೃಗಗಳಿಗೆ ಗೊತ್ತಾಗದಿರದು. "ಅದೋ, ಹಿಂಡಿನಿಂದ ಕೊಂಚ ಮುಂದಾಗಿ ಬಂಗಲೆಯತ್ತ ಮುಖ ಮಾಡಿ ಮಲಗಿರುವುದೇ ಗಂಡು, ಹೊಡೆ" ಎಂದೆ. "ಅದು ಹೇಗೆ ನಿನಗೆ ಗೊತ್ತು ? ಅದೇಕೆ ಹೆಣ್ಣಾಗಿರಬಾರದು ?" ಎಂದು ಮರುಪ್ರಶ್ನಿಸಿದಳು. ಹೇಗಪ್ಪಾ ಇವಳನ್ನು ಒಪ್ಪಿಸುವ ರೀತಿ ? 'ಓ ಕಾಟ, ಒಮ್ಮೆ ಎದ್ದು ನಿಲ್ಲು. ನಮ್ಮ ದೊರೆಸಾನಿಗೆ ನಿನ್ನನ್ನು ಹೊಡೆಯಬೇಕಂತೆ ಕಾಲೆತ್ತು. ನೀನು ಗಂಡೋ ಹೆಣ್ಣೋ ಎಂದು ತಿಳಿಯದೆ ಆಕೆಯು ನಿನ್ನತ್ತ ಕೋವಿ ಎತ್ತುವುದಿಲ್ಲವಂತೆ. ಆಕೆಯನ್ನು ಕರೆದುಕೊಂಡು ಬಂದುದಕ್ಕೆ ನನಗೆ ಇಷ್ಟು ಉಪಕಾರ ಮಾಡು' ಎಂದು ಹೇಳಿದರೆ ವಿಧೇಯತೆಯಿಂದ ವರ್ತಿಸಲು ಅದೇನು ಮನೆಯಲ್ಲಿ ಸಾಕಿ ಪಳಗಿಸಿದ ನಾಯಿಯೇ? ಮೃಗಗಳು ನಮ್ಮ ಇರವನ್ನು ಅರಿತಂತೆ, ಮೆಲುಕಾಡುವುದನ್ನು ಬಿಟ್ಟು ಕಿವಿ ನಿಗುರಿಸಿ ಅತ್ತಿತ್ತ ನೋಡತೊಡಗಿದವು! ಓಹೋ ! ಅಷ್ಟರಲ್ಲೆ ನಾನು ತೋರಿದ್ದ ಆ ಕಾಡುಕೋಣವು ಏಳಲು ಹವಣಿಸಿ ಮುಂಗಾಲನ್ನು ಮಡಚಲು ನೋಡುತ್ತಿದೆ. ಎದ್ದಿತು ಎನ್ನುವಷ್ಟರಲ್ಲಿ ನೀಡಿನಿಂತ ನನ್ನ ಕೋವಿಯ ಕುದುರೆಗೆ ಕೈಬೆರಳು ಹೋಗಿ ಕುದುರೆಯನ್ನು ಮೀಟಿತು ! 'ಢಂ' ಎಂದಿತು ಕೋವಿ. ಏಳಲು ಹವಣಿಸುತ್ತಿರುವ ಕೋಣನ ನೆತ್ತಿಗಾದ ಅಡಿಕೆ ಗಾತ್ರದ ಗುಂಡಿನ ಏಟಿನಿಂದ ಜಿಲ್ಲೆಂದು ಜೀರ್ಕೋವಿಯಿಂದ ಹೊರಡುವ ಕುಂಕುಮದ ಸೀರಿನಂತೆ ರಕ್ತವು ಹಾರಿತು. ಅರಚುತ್ತಾ ಕೋಣವು ಎದ್ದ ರಭಸಕ್ಕೆ ಈಡಿನ ಸದ್ದನ್ನು ಕೇಳಿದ ಅದರ ಸಂಗಾತಿಗಳು ಸುತ್ತಲೂ ಓಡುವ ಗೌಜಿಗೆ ಕಾಡೇ ಅಡಿಮೇಲಾಗುವ ಸದ್ದು. ಕೋಣವು ಎದ್ದು ನಾಲ್ಕು ಮಾರು ಮುಗ್ಗರಿಸುತ್ತಾ ಬಂದು ಧೊಪ್ಪೆಂದು ಬಿದ್ದು ಕೈ

ಕಾಲನ್ನು ಜಾಡಿಸಿ ಹೊರಳಾಡತೊಡಗಿತು. ನಾನು ಹೆಮ್ಮೆಯಿಂದ ಬೀಗಿದ ಮುಖದಿಂದ ರೋಸ್ಲಿಯ ಮೆಚ್ಚುಗೆಯ ಮಾತನ್ನು ಆಶಿಸಿ ಆಕೆಯತ್ತ ನೋಡುತ್ತೇನೆ.

ಬಿಳಿಯ ಮುಖಕ್ಕೆ ಶರೀರದ ರಕ್ತವೆಲ್ಲಾ ಏರಿ ರಕ್ತೇಶ್ವರಿಯಂತೆ ಕೆಂಗಣ್ಣು ಮಾಡಿ ನನ್ನೆಡೆ ನೋಡುತ್ತಾ "You nonsense stupid" ಅಂದಳು. ನೂರಾರು ನುರಿತ ಬೇಟೆಗಾರರಿಂದ "ಗನ್ ಬೋಟ್" ಎಂದು ಹೆಸರು ಗಳಿಸಿದ, ನುರಿತ ಶಿಕಾರಿಯೆಂದು ಖ್ಯಾತನಾಗಿದ್ದ ನನಗೆ, ನನ್ನ ಬೇಟೆಯ ಬಲ್ಮೆಗೆ, ಕೇವಲ ಹುಡುಗಿಯೊಬ್ಬಳಿಂದ ಬೈಗಳ ಪುರಸ್ಕಾರವೇ? ಬೂಟುಗಾಲಿನಿಂದ ಒದೆಯಬೇಕೆನ್ನುವಷ್ಟು ಆವೇಶವುಂಟಾಗಿತ್ತು. ಆದರೆ ಅವಳು ಹುಡುಗಿ, ನನ್ನ ಅತಿಥಿ! ಕಾಟಿಯು ಕೆಳಗೆ ಕೈಕಾಲು ಹೊಡೆದು ಕೊಂಡು ಹೊರಳಾಡಿ ಪ್ರಾಣೋತ್ಕ್ರಮಣ ಕಾಲದ ಆರ್ತನಾದವನ್ನು ಮಾಡಿ ಅಸುನೀಗಿದ ಸೂಚನೆಯನ್ನು ನಮಗೆ ಕೊಟ್ಟಿತು. ದುಮಿಂಗರು ಇದನ್ನು ತದೇಕಚಿತ್ತದಿಂದ ನೋಡುತ್ತಿದ್ದಾರೆ. ನಮ್ಮ ಈ ಪೈಪೋಟಿ ಅವರ ಗಮನಕ್ಕೇ ಬಂದಿಲ್ಲ.

ಕ್ರುದ್ಧ ಕಂಠದಲ್ಲಿ ರೋಸ್ಲಿಯೆಂದಳು - "ರೈ, ನೀನು ಇಷ್ಟು ಕ್ಷುಲ್ಲಕ ಹೃದಯದವನೆಂದು ನಾನು ತಿಳಿದಿರಲಿಲ್ಲ. ಹೆಣ್ಣು ಗಂಡೆಂಬ ನಿರ್ಧಾರಕ್ಕೆ ಬರದೆ ನೀನು ಹೊಡೆದುದು ಅಕ್ಷಮ್ಯ ಅಪರಾಧ. ಇದು ಹೆಣ್ಣಾದರೆ ತಂದೆಯವರು ತಪ್ಪು ಕೊಡಬೇಕಾಗಿ ಬರುತ್ತದೆ. ಹಾಗಾದರೆ ಜೀವವಿದ್ದೂ ಸತ್ತಂತೆ. ಇಂಥ ಅಲ್ಪನೆಂದು ನಿನ್ನನ್ನು ನಾನು ಮೊದಲೇ ಅರಿತಿದ್ದರೆ ನಿನ್ನ ಮಿತ್ರತ್ವಕ್ಕೆ ಕೈ ಚಾಚುತ್ತಿರಲಿಲ್ಲ" ಎಂದು ಬಿಗಿದ ಮೋರೆಯಿಂದ ಹೇಳಿ ಕಲ್ಲಿಗೊರಗಿ ಕೂತಳು.

ಇದು ನನ್ನ ಬೇಟೆಗಾರಿಕೆಯ ಬಲ್ಮೆಗೆ ಅವಳು ಹಾಕಿದ ಸವಾಲು! ಇದಕ್ಕೆ ಸೂಕ್ತ ಉತ್ತರ, ಪಂಥಾಹ್ವಾನವನ್ನು ನೀಡದಿದ್ದರೆ ನನ್ನ ಬೇಟೆಗಾರಿಕೆಯ ಅನುಭವ, ಸಾಧನೆಗಳಿಗೆ ಮಸಿ ಮೆತ್ತಿದಂತೆ ಎಂದು ಭಾವಿಸಿ ನಾನೆಂದೆ "ಅದು ಗಂಡು. ನಾನು ಸರಿಯಾಗಿಯೇ ವರ್ತಿಸಿದ್ದೇನೆ. ನೋಡಲ್ಲಿ ಮುನ್ನೂರು ಗಜ ದೂರದಲ್ಲಿ ಮೃಗವು ಬಿದ್ದಿದೆ. ಗಂಡೋ, ಹೆಣ್ಣೋ

ಎಂದು ನೋಡುವುದಕ್ಕೆ ಬರಿಯ ಹದಿನೈದು ನಿಮಿಷಗಳ ಕಾಲಾವಕಾಶ. ನೀನು ಅದನ್ನು ಗಮನಿಸದೆ ಹುಚ್ಚರಂತೆ ವರ್ತಿಸುವುದೇಕೆ ?" "ಅದು ಹೇಗೆ ನೀನು ಗಂಡೆಂಬ ನಿರ್ಧಾರಕ್ಕೆ ಬಂದೆ? ಅದು ಹೆಣ್ಣು. ಹೊರಳುವಾಗ ನಾನು ಅದರ ಕೆಚ್ಚಲನ್ನು ನೋಡಿದೆ" ಅಂದಳು. ನನಗೂ ಸಿಟ್ಟು ಏರುತ್ತಿತ್ತು. "ನೀನು ನೋಡಿದ್ದು ಕೆಚ್ಚಲಲ್ಲ. ಅದರ ಬೀಜ" ಎಂದು ತಟ್ಟನೆ ನುಡಿದೆ. "ಅಲ್ಲ, ಕೆಚ್ಚಲು" ಎಂದಳು, ಅವಳು ಹಟವಾದಿಯಾಗಿ! ನಾನೆಂದೆ "ನೀನು ಎಷ್ಟಾದರೂ ಹುಡುಗಿ. 'ಹೆಂಗಸರ ಬುದ್ಧಿ ಮೊಣಕಾಲ ಕೆಳಗೆ' ಎಂಬ ಗಾದೆಗೆ ಅನುಗುಣವಾಗಿ ನುಡಿಯುತ್ತಿರುವಿ. ಹುಟ್ಟುಗುಣ ಗಟ್ಟ ಹತ್ತಿದರೂ ಹೋಗದು. ನೀನು ಏನು ಬೇಕಾದರೂ ಹೇಳು. ನಾನು ಹೊಡೆದುರುಳಿಸಿದ ಕಾಟಿ ಮಾತ್ರ ಗಂಡು." ಹೀಗೆ ನಾನು ಅಚಲ ನಿರ್ಧಾರದಿಂದ ಹೇಳಿದಾಗ "ಅದು ಗಂಡಾದರೆ ನೀನು ಹೇಳಿದಂತೆ ಕೇಳಲು ನಾನು ಸಿದ್ಧಳು. ನಿನ್ನ ಕ್ಷಮೆಯಾಚಿಸಿ ನಿನ್ನ ದಾಸಿಯಾಗುತ್ತೇನೆ" ಎಂದು ಆಕೆ ನಿರ್ಧಾರದಿಂದ ನುಡಿದಳು. "ಇದು ಸತ್ಯವೋ? ನಾನು ಹೇಳಿದಂತೆ ಕೇಳುವೆಯಲ್ಲವೆ ? ನನ್ನ ದಾಸಿಯಾಗುವೆಯಲ್ಲವೇ?" ಎಂದು ನಾನೂ ಕ್ರುದ್ಧನಾಗಿ ಕೇಳುವಾಗ ಎಲ್ಲಿಯಾದರೂ ನಾನು ಅವರ ಘನಸ್ಥಿಕೆಗೆ ಕುಂದು ಬರುವಂತೆ ನನ್ನೊಡನೆ ವರ್ತಿಸೆಂದು ಕೇಳುವನೇ ? ಎಂಬ ಶಂಕೆಯಿಂದ ನನ್ನೆಡೆಗೆ ದೃಷ್ಟಿಬೀರಿ ನನ್ನ ಮುಖದಲ್ಲಿ ಯಾವ ಕುರುಹನ್ನೂ ಅರಿಯಲಾರದ ಆ ಮುಗ್ಧೆಯು "ನಾನು ಇಂಗ್ಲಿಷ್ ತರುಣಿ. ನೀನು ಏನೇ ಬೇಕಾದರೂ ಕೇಳು. ಇದೋ ನಾನು ಹೇಳಿದ ಮಾತಿಗೆ ಈ ಜೋತಾಡುವ ಕ್ರೂಜೆಯೇ ಸಾಕ್ಷಿ" ಎಂದಳು. ಆಗ ನಾನು "ಅದು ಎಲ್ಲಿಯಾದರೂ ಹೆಣ್ಣು ಕಾಟಿಯಾಗಿದ್ದರೆ ಆ ತಪ್ಪನ್ನು ನನ್ನ ಹೆಸರಲ್ಲಿ ನಿಮ್ಮ ಶಿಕಾರಿ ಸಂಘದ ಮೆಂಬರನಾಗಿ ನಾನು ತುಂಬಲು ಬದ್ಧ. ವಿಲಾಯತಿಯಲ್ಲಿ ನನ್ನ ಮಾವ ಡಾ। ಕೆ. ಎಂ. ರೈಗಳು F. R. C. S. ಮಾಡುತ್ತಿದ್ದಾರೆ. ಅವರಿಗೆ ಬರೆದು ನಿಮಗೆ ಈ ಅಪರಾಧವು ತಗಲದಂತೆ ಮಾಡುತ್ತೇನೆ. ಇದಕ್ಕೆ ತಪ್ಪಿದೆನಾದರೆ, ಇದು ನನ್ನ ತಪ್ಪು ಗುರಿಯಾಗಿದ್ದರೆ ಇದೇ ನನ್ನ ಕೊನೆಯ ಬೇಟೆ. ಮುಂದಕ್ಕೆ ಕೋವಿ ಮುಟ್ಟಿದರೆ ನಿನ್ನಾಣೆ" ಎಂದವನೇ ದುಮಿಂಗರಿಗೆ ದುಮುಗುಟ್ಟುವ ಮುಖಧಲ್ಲೇ ಅಜ್ಞಾಪಿಸಿದೆ – "ಕೆಳಗೆ ಹೋಗಿ ಅದರ ಬೀಜವನ್ನು

ಚರ್ಮಸಮೇತ ಎಳೆದು ಹಿಡಿದು ಕ್ಯೊದುಕೊಂಡು ಬಾ. ಇವಳು ಹೇಳಿದಂತೆ ಅದು ಕೆಚ್ಚಲಾಗಿದ್ದರೆ ಒಂದು ಮೊಲೆಯನ್ನು ಕ್ಯೊದು ತಾ" ಎಂದು !

ನಾವು ನಿಂತಲ್ಲಿಂದ ಕಾಡುಕೋಣ ಬಿದ್ದಲ್ಲಿಗೆ ದೂರವು ಸುಮಾರು ಮುನ್ನೂರು ಮಾರಾದರೂ ಅದರ ಬಳಿಗೆ ಹೋಗಬೇಕಿದ್ದರೆ, ಆ ಕಡಿದಾದ ಬೆಟ್ಟದ ಕಿಬ್ಬಿಯಲ್ಲಿ ದಾರಿ ಹುಡುಕುತ್ತಾ ಹೋಗಿ ಬರಲು ಅರ್ಧ ಘಂಟೆ ಬೇಕು. ನಮ್ಮ ಈ ವಾಗ್ವಾದನವನ್ನು ಕೇಳಿದ ದುಮಿಂಗರು ಮುಸಿಮುಸಿ ನಗುತ್ತಾ ನನ್ನ ಬೇಟೆಯ ಕತ್ತಿಯನ್ನು ತೆಗೆದುಕೊಂಡು ಕೋವಿಯನ್ನು ಹೆಗಲಿಗೇರಿಸಿ ಕೆಳಗಿಳಿಯಲು ಅನುವಾದರು. ನಾನು ಸಿಗರೇಟು ಹೊತ್ತಿಸಿ ಮೇಲೆ ನೋಡುತ್ತಾ ಸುರುಳಿ ಸುರುಳಿಯಾಗಿ ಹೊಗೆ ಬಿಡಲು ಆರಂಭಿಸಿದೆ. ಆಪ್ತ ಬಂಧುವನ್ನು ಕಳಕೊಂಡಂತೆ ರೋಸ್ಲಿಯು ಆಕಾಶದತ್ತ ನೋಡುತ್ತಾ ಸಿಟ್ಟಿಳಿಯದೆ ಪುಸ್ ಪುಸ್ಸೆಂದು ಶ್ವಾಸೋಚ್ಛ್ವಾಸ ಮಾಡುತ್ತಾ ಕಾಲು ಚಾಚಿ ಕುಳಿತಿದ್ದಳು. ಇದು ನನ್ನ ಹಾಗೂ ಅವಳ ಕೆಲ ವರುಷಗಳ ನಿಷ್ಕಲ್ಮಶ ಮಿತ್ರತ್ವದ ಕೊನೆಯ ಗಳಿಗೆಯಲ್ಲವೇ? ನಾನು ಗೆದ್ದರೆ ಸೇಡಿನಿಂದ ಅಸಂಬದ್ಧ ವಾಗಿ ಏನಾದರೂ ಬೇಡಿದರೆ ಅದನ್ನು ಪೂರ್ತಿಮಾಡಿ ಮತ್ತೆ ಜೀವಹಿಡಿದು ಬಾಳುವ ಹುಡುಗಿ ಆಕೆಯಲ್ಲ. ನಾನು ಸೋತರೆ ಮುಂದಕ್ಕೆ ಅವರ ಸಂಬಂಧ ವನ್ನು ಕಳಚಿಕೊಂಡಂತೆಯೇ ಎಂಬ ಭಾವನೆಯಿಂದ ಮುಸುಕಿದ ಅವಳು ಅಡಕೊತ್ತಿನಲ್ಲಿ ಸಿಕ್ಕ ಅಡಕೆಯಂತೆ ಒದ್ದಾಡುತ್ತಿದ್ದಳು. ನಾನು ಗಂಭೀರ ನಾಗಿ ಒಂದಾದ ನಂತರ ಒಂದು ಸಿಗರೇಟನ್ನು ಸೇದುತ್ತಲೇ ಇದ್ದೆ.

ಕಾಲವು ಹೆಳವನಂತೆ ಕುಂಟುತ್ತಾ ಸಿಧಾನವಾಗಿ ಸರಿಯುವಂತೆ ಕಾಣುತ್ತದೆ. ಸೋಲು ಗೆಲವಿನ ಪಂದ್ಯವಿಟ್ಟ ನಮಗೆ ಕಾಲವು ಕ್ಷಿಪ್ರಗತಿ ಯಿಂದ ಸಾಗಿದರೆ ತಾನೇ ತೃಪ್ತಿ ? ಇಬ್ಬರೂ ದುಮಿಂಗರ ಆಗಮನವನ್ನು ನಿರೀಕ್ಷಿಸುತ್ತಾ ಪರಿಚಯವಿಲ್ಲದ ದಾರಿಕಾರರಂತೆ ಕುಳಿತಲ್ಲಿಯೇ ಇದ್ದೆವು. ಮರಕಟ್ಟಿದ ಕೈಕಾಲನ್ನು ಸರಿಗೊಳಿಸಲು ಎದ್ದು ನಿಂತ ರೋಸ್ಲಿಯು ಒಮ್ಮೆ ತನ್ನ ದೃಷ್ಟಿಯನ್ನು, ಹಣೆಗೆ ಕೈಯಿಟ್ಟು, ಬಹುದೂರ ಬೀರಿ ಮತ್ತೂ ಸಂದೇಹದಿಂದ ತನ್ನ ಕಂಕುಳಲ್ಲಿ ಜೋತಾಡುವ ದೂರದರ್ಶಕವನ್ನು ತೆಗೆದು ನೋಡಿದಳು. ನನ್ನಿಂದ ನಾಲ್ಕೈದು ಮಾರು ದೂರವಿದ್ದ ಆಕೆ ಒಡನೆಯೇ ಭೂತ ಹಿಡಿದವಳಂತೆ - ಓಡಿ ಬಂದು ನನ್ನ ಕತ್ತಿಗೆ ತನ್ನೆರಡೂ ಕೈಗಳನ್ನು

ಸುತ್ತಿ ತೆಕ್ಕೆ ಬಿದ್ದು "ಕ್ಷಮಿಸು ದೈ - ಕ್ಷಮಿಸು. ನಾನು ತಪ್ಪುಗಾರಳು. ನೀನಂದಂತೆ ನಡೆಯುತ್ತೇನೆ. ನೀನು ಗೆದ್ದೆ. ನಾನು ಸೋತೆ. ಸೋಲನ್ನು ಒಪ್ಪಿದ್ದೇನೆ. ನಾನು ನಿನ್ನ ದಾಸಿ" ಎಂದು ಹೇಳುವುದನ್ನು ಕೇಳಿದ ನಾನು ದಿಗ್ಭ್ರಾಂತನಾಗಿ ಎದುರು ನೋಡುತ್ತೇನೆ. ಚೀಲದಲ್ಲಿ ತುಂಬಿಸಿದ ಸಿಪ್ಪೆ ಸುಲಿಯದ ಜೋಡು ತೆಂಗಿನ ಕಾಯಿಗಳಂತಹ, ಕಾಡುಕೋಣದ ಬೀಜ ವನ್ನು ಜೋತಾಡಿಸಿಕೊಂಡು ಬರುವ ದುಮಿಂಗರು ಕಾಣಿಸಿದರು! ನಿರಾಳ ವಾಗಿ ಉಸಿರೆಳೆದು ಮತ್ತೊಂದು ಸಿಗರೇಟನ್ನು ಹಚ್ಚಿ ಹೆಮ್ಮೆಯಿಂದ 'ಸೋತ ಹೆಣ್ಣೆ?' ಎಂದು ಮೂದಲಿಸುವ ದೃಷ್ಟಿಯಿಂದ ಒಮ್ಮೆ ಅವಳೆಡೆ ನೋಡಿದೆ. ಏನು ತನ್ನ ಕುಲಕ್ಕೆ ಕಲಂಕ ಬರುವ ಪಣವನ್ನು ಇನ್ನು ಈ ಹಿಂದು ಕೇಳಲಿ ರುವನೋ ಎಂಬ ಭೀತಿಯಿಂದ ಕಂಪಿಸುವ ಆ ಮುಗ್ಧ ಮುಖವನ್ನು ಕಂಡು "ಅಯ್ಯೋ, ನನ್ನ ತಂಗಿಗೆ ಈ ಪರಿಸ್ಥಿತಿ ಬರುತ್ತಿದ್ದರೆ?" ಎಂಬ ಮರುಕದ ಭಾವನೆಯಿಂದ ಅವಳತ್ತ ನೋಡಿದೆ. "ಹುಂ, ನೋಡುವುದೇನು. ನಾನು ಸೋತವಳು. ಏನು ಬೇಕಾದರೂ ಕೇಳು. ಮಾತಿಗೆ ತಪ್ಪುವವಳು ಈ ಇಂಗ್ಲಿಷ್ ಹುಡುಗಿಯಲ್ಲ. ಕೇಳು—ಅದೇಕೆ? ಹಿಂಜರಿಯುವಿ?" ಎಂದು ತನ್ನ ಕೊನೆಯ ನಿರ್ಧಾರಕ್ಕೆ ಬಂದವಳಂತೆ ನುಡಿದಳು.

ನಾನೆಂದೆ "ಗೆದ್ದ ನಾನು ನನ್ನ ಗೆಲುವಿನ ಕಾಣಿಕೆಯನ್ನು ಪಡೆಯಲು ಹಿಂಜರಿಯುವ ಹಿಂದುವಲ್ಲ. ಸೇಡಿಗೆ ಸೇಡು. ಅಪಮಾನಕ್ಕೆ ಪ್ರತ್ಯಪ ಮಾನವನ್ನು ಈ ಪ್ರಾಯದಲ್ಲಿ ಮಾಡಲು ಹಿಂಜರಿದರೆ, ಮುಂದಕ್ಕೆ ನಾವು ನಿಮ್ಮೊಂದಿಗೆ ಸ್ವಾತಂತ್ರ್ಯಕ್ಕಾಗಿ ಹೋರಾಡಲು ತಕ್ಕವರಾಗುವೆವೆ? ನನ್ನ ಗೆಲುವಿನ ಕಾಣಿಕೆಯನ್ನು ಹೊಂದಿಯೇ ಹೊಂದುವೆನು" ಎಂದು ಅವಳ ಮುಖದತ್ತ ನಿರ್ಧಾರದ ದೃಷ್ಟಿಯನ್ನು ಬೀರಿದೆ.

"ಹುಂ, ಒದರು" ಎಂದಳು ನಿಸ್ಸಹಾಯಕ ಪರಿಸ್ಥಿತಿಯ ಮುಖಮುದ್ರೆ ಯಿಂದ. ಆಕೆಯನ್ನು ನೋಡುತ್ತ, ದುಮಿಂಗರ ಕಡೆಗೂ ದೃಷ್ಟಿ ಬೀರಿ ನಾನೆಂದೆ "ದುಮಿಂಗರೇ, ನೀವು ಕೊಯ್ದು ತಂದ ಈ ಕೋಣದ ಬೀಜಗಳನ್ನು ಬಂಗ್ಲೆಯ ತನಕ ಇವಳೇ ಹೊರಬೇಕು ಮತ್ತು ಇದರ ಪದಾರ್ಥವನ್ನು ನಮ್ಮೆದುರಿನಲ್ಲಿ ಎರಡು ಮೂರು ದಿನವಾದರೂ, ಇವಳೇ ತಿಂದು ಮುಗಿಸ ಬೇಕು. ಇದು ನನ್ನನ್ನು ಅರಿಯದೆ ಇವಳು ನಿಂದಿಸಿದ ಬಾಲಿಶತನಕ್ಕೆ ಕೊಟ್ಟ

ಶಿಕ್ಷೆ!" ಈ ಮಾತನ್ನು ಕೇಳಿ "ಬದುಕಿದೆಯಾ ಬಡ ಜೀವವೇ, ನನ್ನ ಮಾನ, ಪ್ರಾಣ ಉಳಿಯಿತು" ಎಂದು ದಿಗ್ಗನೆದ್ದವಳೇ "ಅಣ್ಣಾ" ಎಂದು ಮತ್ತೊಮ್ಮೆ ಬಿಗಿದಪ್ಪಿ ನನ್ನ ನೆತ್ತಿಗೆ ಒತ್ತಿದ ಮುತ್ತು ಇಷ್ಟೇ ಬೆಲೆಯದೆಂದು ಹೇಳು ವಂತಿಲ್ಲ. ಜೀವಮಾನದಲ್ಲೆಂದೂ ಅದನ್ನು ನಾನು ಮರೆಯುವಂತಿಲ್ಲ.

ಕಾಲು ಮಣದ ಭಾರವನ್ನು, ಕೋವಿಯೊಂದಿಗೆ ಹೊತ್ತುಕೊಂಡು ಬರುವ ಮಗಳನ್ನೂ ಹಿಂದಿನಿಂದ ಕೋವಿ ಹೆಗಲಿಗೇರಿಸಿ ಗೆಲವಿನ ಠೀವಿಯಿಂದ ಬರುತ್ತಿದ್ದ ನನ್ನನ್ನೂ ಕಂಡ ಕೆಂಟ್ ದಂಪತಿಗಳು ಸ್ವಲ್ಪ ಅಸಮಾಧಾನದ ದೃಷ್ಟಿಯಿಂದ ಇದೇನು ಇವಳು ಇದನ್ನು ಹೊತ್ತು ಬರುವುದು? ಎಂಬ ಪ್ರಶ್ನಾರ್ಥಕ ದೃಷ್ಟಿಯನ್ನು ನಮ್ಮೆಡೆಗೆ ಬೀರಿದರು. ಆಯಾಸ ಹೊಂದಿದ ಹುಡುಗಿಯು ಆ ಕೋಣದ ಬೀಜದ ಗಂಟನ್ನು ಜಗಲಿಯಲ್ಲಿ ಕುಕ್ಕಿ ತನ್ನ ರೈಫಲ್, ದೂರದರ್ಶಕ, ಚೀಲ, ತೋಟೆಯ ಬೆಲ್ಟನ್ನು ಬದಿಗಿರಿಸಿ ಒಮ್ಮೆ ನಿರಾಳವಾಗಿ ಉಸಿರೆಳೆದು "ಪಪ್ಪಾ, ನಾನಿಂದು ರೈಯೊಂದಿಗೆ ಪಂಥ ಹಾಕಿ ಸೋತೆ. ಅದರ ಪ್ರಾಯಶ್ಚಿತವಾದ ಶಿಕ್ಷೆಯೆಂದು ಈ ಹೊರೆಯನ್ನು ನಾನೇ ಹೊತ್ತುತಂದೆ. ಇದು ಇವರ ತಪ್ಪಲ್ಲ. ನನ್ನ ದುಡುಕಿನ ನುಡಿಯ ಫಲ" ಎಂದು ನಡೆದ ಕಥೆಯನ್ನು ಯಥಾವತ್ತಾಗಿ ಬಣ್ಣಿಸಿದಳು. ಪೂರ್ಣವಾಗಿ ಕೇಳಿದ ದಂಪತಿಗಳು ಮನಸ್ಸೇಚ್ಛೆ ನಕ್ಕು ಭರ್ಜರಿ ಬೇಟೆಗೆ ಸಂತೋಷ ಗೊಂಡರು. ದುಮಿಂಗರನ್ನು ಕೋಣ ಬಿದ್ದಲ್ಲಿಗೆ ಆಳುಗಳೊಂದಿಗೆ ಹೋಗಿ ಅದರ ತೊಡೆ ಕೈಗಳ ಭಾಗವನ್ನು ಬಂಗ್ಲೆಗೆ ತರುವಂತೆಯೂ ಉಳಿದುದನ್ನು ಅವರು ಹಂಚಿಕೊಳ್ಳುವಂತೆಯೂ, ಸಿರ್ಕದಲ್ಲಿ ಹಾಕಿ ಬಂದು ಮಾಡಿಟ್ಟರೆ ತಮಗೆ ಎರಡು ತಿಂಗಳಿಗೆ ಬೇಕಾದ ಮಾಂಸವಾಯಿತೆಂದೂ ತೃಪ್ತಿಪಟ್ಟರು. ದುಮಿಂಗರನ್ನು ಕಳುಹಿಸಿ "ರೈ, ಅಷ್ಟು ನಿರ್ಧಾರದಿಂದ ಅದು ಗಂಡೆಂದು ಹೇಗೆ ಹೊಡೆದೆ? ಮತ್ತೆ ಇಂಥ ಘನವಾದ ಪಣಕ್ಕೆ ಸಿದ್ಧವಾದೆ?" ಎಂದು ಪ್ರಶ್ನಿಸಿದರು.

ನಾನೆಂದೆ "ಕಾಡಿನ ಹಿಂಡು ಮೃಗಗಳಿಗೆ ಒಂದು ಹಿರಿಯ ಮೃಗವು ಯಜಮಾನ. ವಿಶ್ರಾಂತಿಯ ಸಮಯದಲ್ಲಿ ಕಿರಿಯ ಮರಿಗಳನ್ನು ಮಧ್ಯ ದಲ್ಲಿ ಮಲಗಿಸಿ ಹಿಂಡಿನ ಹಿರಿಯವುಗಳು ನಾಲ್ದೆಸೆಗೂ ಮುಖ ಮಾಡಿ ಯಾವ ದಿಕ್ಕಿನಿಂದ ಅಪಾಯ ಒದಗುವುದೆಂದು ನಿರೀಕ್ಷಣಾ ದೃಷ್ಟಿಯಲ್ಲಿ

ಮಲಗುವುದು ಸ್ವಾಭಾವಿಕ. ಅದರಲ್ಲಿ ಯಜಮಾನನು ಆ ಗುಂಪಿನಿಂದ ಮೂರು ನಾಲ್ಕಡಿ ದೂರ ಹೆಚ್ಚಾಗಿ ಅಪಾಯ ಬರುವತ್ತಲೇ ಮುಖ ಮಾಡಿ ಮಲಗುವುದು ರೂಢಿ. ಇದನ್ನು ಪಳಗಿದ ಬೇಟೆಗಾರನು ತಿಳಿದಿರುತ್ತಾನೆ. ಆ ಸಮಯಕ್ಕೆ ಬಂಗಲೆಯತ್ತಣಿಂದಲೇ ಬೇಟೆಗಾರರ ಅಪಾಯವು ಜಾಸ್ತಿ. ಅಲ್ಲದೆ ಹಿಂದಿನ ರಾತ್ರಿ ಹುಲಿಯ ಆರ್ಭಟೆಯೂ ತೆಂಕು ದಿಕ್ಕಿನಿಂದಲೇ ಕೇಳಿದ್ದುದರಿಂದ ಆ ಗುಂಪಿನ ಯಜಮಾನನೇ ಆ ರೂಪದಲ್ಲಿ ಮಲಗಿದ್ದುದು. ನನ್ನ ಊಹೆಯಲ್ಲಿ ಏನೂ ಆಶ್ಚರ್ಯವಿಲ್ಲ. ನಾನದನ್ನು ಗ್ರಹಿಸಿದುದು ಜಾಣ್ಮೆಯೂ ಅಲ್ಲ. ಅಲ್ಲದೆ ಗಂಡು ಕೋಣದ ಹಣೆಯಲ್ಲಿರುವ ಬಿಳಿ ಮಚ್ಚೆಯು ಬಟ್ಟಲ ಗಾತ್ರದಲ್ಲಿರುತ್ತದೆ. ಹೆಣ್ಣಾಗಿದ್ದರೆ ಅದು ಒಂದು ನಾಮದಂತೆ ಉದ್ದಕ್ಕೂ ಇಲ್ಲವೇ ಚಿಕ್ಕದಾಗಿಯೂ ಇರುತ್ತದೆ. ಗಂಡಿನ ಕೊರಳ ರೋಮರಾಜಿಯು ನೀಳವಾಗಿ ನಿಬಿಡವಾಗಿರುತ್ತದೆ. ಇದನ್ನು ಕಂಡ ಕೂಡಲೇ ಗುರ್ತಿಸುವಷ್ಟು ನಾನು ಪಳಗಿದ್ದೇನೆ. ಕಡವೆ, ಜಿಂಕೆಯಾದರೆ ಕವಲು ಕವಲಾದ ನೀಳ ಕೊಂಬು ಇರುವುದು" ಹೀಗೆ ವಿವರಣೆ ನೀಡುತ್ತಿದ್ದಾಗ ಎವೆಮುಚ್ಚದೆ ನನ್ನನ್ನೇ ನೋಡುವ ರೋಸ್ಲಿಯ ಮುಖವು ಅಚ್ಚರಿ, ಕುತೂಹಲಗಳಿಂದ ಕೂಡಿ ನನ್ನ ಮಾತುಗಳನ್ನು ಕೇಳುತ್ತಿದ್ದಂತೆಯೇ, ಶ್ರೀಮತಿ ಕೆಂಟರು ಬೆಣ್ಣೆ ಸವರಿದ ಬಿಸಿ ಬಿಸಿಯಾದ ಬ್ರೆಡ್ಡು, ಚಾಗಳನ್ನು ನಮ್ಮ ಮುಂದಿಟ್ಟರು. ಅದನ್ನು ತಿನ್ನುವಾಗ ನನಗೆ ಪುನಃ ನಮ್ಮ ಪಣದ ನೆನಪಾಯಿತು. ನಾನೆಂದೆ "ಮದರ್, ಈಗ ಇವಳು ಹೊತ್ತು ತಂದ ಬೀಜವನ್ನು ಇವಳೊಬ್ಬಳೇ ತಿಂದು ಮುಗಿಸಬೇಕು. ಮೂರು ದಿನವಾದರೂ ಚಿಂತಿಲ್ಲ. ಆ ಪಂಥಕ್ಕೆ ಅವಳು ಒಪ್ಪಿದ್ದಾಳೆ" ಎಂದಾಗ ಅವರು ತುಸು ನಗುತ್ತಾ "ಇದು ಹಿರಿಯರಾದ ನಮಗೆ ನೀನು ಮಾಡಿದ ವಂಚನೆ. ಕಾಡುಮೃಗದ ಮಾಂಸದಲ್ಲಿ ಗಂಡಿನ ಬೀಜ, ಖಲಿಜ, ಹೃದಯಗಳಷ್ಟು ರುಚಿಯಾದ ಭಾಗಗಳು ಬೇರೆಯಿಲ್ಲ. ನೀನು ನಿನ್ನ ತಂಗಿಯ ಪರವಾಗಿ ಶಿಕ್ಷೆಯೆಂದು ನಮ್ಮನ್ನು ಈ ಸುಖಭೋಜನದಿಂದ ಹೊರತು ಪಡಿಸಿದುದನ್ನು ನಾವು ಸರ್ವಥಾ ಒಪ್ಪಿಕೊಳ್ಳುವುದಿಲ್ಲ! ನೀನು ಏಕಪಕ್ಷೀಯವಾಗಿ ಕೊಟ್ಟ ಈ ತೀರ್ಪಿಗೆ ನಿನಗೆ ಶಿಕ್ಷೆಯಾಗಿ ಮಧ್ಯಾಹ್ನದೂಟವೂ ನಿನ್ನೆಯಂಥದೇ" ಎಂದು ಹೇಳಿ ಮೆಚ್ಚುನೋಟವನ್ನು ನನ್ನೆಡೆಗೆ ಬೀರಿ ಅಡುಗೆ ತಯಾರಾಗಿದೆಯೇ ಎಂದು ತಿಳಿಯಲು ಒಳಕೋಣೆಗೆ ನಡೆದರು.

# ನೋಡಬೇಕು - ಹುಲಿ ಹಂದಿಯ ಹೋರಾಟ

ನುರಿತ ಬೇಟೆಗಾರರನ್ನು ಕಲೆ ಹಾಕಿ ಬೇಟೆ ಮಾಡಿಸುವುದೆಂದರೆ ಆ ಕಾಲದಲ್ಲಿ ಗುತ್ತಿನವರ ಪ್ರತಿಷ್ಠೆ ಎಂದು ಪ್ರತೀತಿಯಿತ್ತು. ಡಾ। ಕೆ. ಬಿ. ಶೆಟ್ಟರ ಅಣ್ಣ ರಾಮಯ್ಯ ಶೆಟ್ಟರ ಬೇಟೆಯ ಕರೆಯೋಲೆಯು ಬಂದು ನಮ್ಮನ್ನು ಎಚ್ಚರಿಸಿತು. ನಾವೆಲ್ಲರೂ ಇಂಥ ದಿನ ಆಲಂಗಾರು ಬಂಗ್ಲೆಯಲ್ಲಿ ಸೇರುವುದೆಂದೂ, ಶ್ರೀ ಎ. ವಿ. ಪೂಂಜರು ತಮ್ಮ ಬೇಟೆಯ ಕೂಟದೊಂದಿಗೆ ಬರುವರೆಂದೂ ಬೇಟೆಯು ಹಿರಿಯ ಶಿಕಾರಿ ಎ. ವಿ. ಪೂಂಜರ ಘನಸ್ಥಿಕೆಗೆ ತಕ್ಕಂತೆ ನಡೆಯಬೇಕೆಂದೂ ಆದೇಶಿಸಿದ್ದರು.

ಆ ಸಮಯದಲ್ಲಿ ಎ. ವಿ. ಪೂಂಜರು ಎಂದರೆ, ಅತ್ತಾವರದ ಘನ ಮನೆತನದಲ್ಲಿ ಹುಟ್ಟಿ - ಮರಕಡ ಮನೆಯ ಯಜಮಾನರಾಗಿ ನಮ್ಮ ಬಂಟ ಸಮಾಜದಲ್ಲಿ ಮೊತ್ತಮೊದಲ B. Sc. (Ag) ಪದವಿಯನ್ನು ಪಡೆದು, ಸ್ವಾತಂತ್ರ್ಯಪ್ರಿಯತೆಯಿಂದಾಗಿ ಸರಕಾರಿ ಹುದ್ದೆಯನ್ನು ಆಶಿಸದೆ, ಹಲವಾರು ಸಂಘ ಸಂಸ್ಥೆಗಳಲ್ಲಿ ಗೌರವಯುತ ಕಾರ್ಯವೆಸಗಿದವರು. ಈಗಲೂ ಮಂಗಳೂರಲ್ಲಿ ನಡೆಯುತ್ತಿರುವ ಎಸ್. ಆರ್. ಎಸ್. ಹೋಮ್, ಜ್ಯೋತಿ ಸಿನಿಮಾ ಮಂದಿರಗಳ ಸ್ಥಾಪನೆಯಲ್ಲಿ ಹಿರಿತನದಿಂದ ದುಡಿದು, ಮನೆತನದ ಆಸ್ತಿ ಬದುಕಿನಲ್ಲಿ ತನ್ನ ವಿದ್ಯೆಯ ಜಾಣ್ಮೆಯನ್ನು ಪ್ರದರ್ಶಿಸಿ ನಮಗೆಲ್ಲಾ ಆದರ್ಶಪ್ರಾಯರಾದ ಕೀರ್ತಿ ಶರೀರಿ.

ಇವರ ಮೆಚ್ಚಿನ ಹವ್ಯಾಸ - ಸಮಾಜ ಸೇವೆ. ಕೃಷಿ ಕರ್ಮಗಳೊಂದಿಗೆ ಬೇಟೆಯೂ ಹಾಸುಹೊಕ್ಕಾಗಿತ್ತು. ಇವರ ಕೂಟದಲ್ಲಿ ಸಿರಿಲ್ ಅಲ್ಬುಕರ್ಕ್, ಎಗ್ರಿಕಲ್ಚರಲ್ ಡೆಮೋನ್‌ಸ್ಟ್ರೇಟರ್ ಭಂಡಾರಿಗಳಲ್ಲದೆ ಮಂಗಳೂರಿನ ಆ ಕಾಲದ ಅನೇಕ ಗಣ್ಯರೂ ಸೇರ್ಪಡೆಯಾಗಿದ್ದರು. ಇವರೊಂದಿಗೆ ಬೇಟೆಯ ನೆವದಲ್ಲಿ ದಿನ ಕಳೆಯುವುದೆಂದರೆ ನಮ್ಮ ಪಾಲಿಗೆ ಹಬ್ಬ. ಬೇಕಾದಷ್ಟು ಸಿಗರೇಟು, ಖಾಲಿ ಮಾಡಬೇಕೆಂಬಷ್ಟು ಪೆಟ್ಟಿಗೆಯಲ್ಲಿ ತುಂಬಿದ

ತೋಟಾ, ರಾತ್ರಿ ಕಣ್ಣು ತಪ್ಪಿಸಿ ಕುಡಿಯಬೇಕಾದರೆ ಬೇಕಾದ ಪಾನೀಯ! ಇವುಗಳಿಗೆ ಕೊರತೆಯೆಂಬುದೇ ಇಲ್ಲ. ಆ ಸಮಯ ಮಂಗಳೂರಿನ ಸಿರಿಲ್ ಅಲ್ಬುಕರ್ಕರ ಹಿರಿಯರು ಸರಕಾರಿ ಪರವಾನಿಗೆ ಹೊಂದಿದ್ದು ದಕ್ಷಿಣ ಕನ್ನಡಕ್ಕೆ ಸರಾಯಿ ಸರಬರಾಜು ಮಾಡುವ ಏಕೈಕ ಡಿಸ್ಟಿಲರ್. ಇಂಗ್ಲಿಷ್ ಆಡಳಿತದ ಕಾಲ; ಎ. ವಿ. ಪೂಂಜರೂ ಬೇಟೆಯ ನಿಯಮವನ್ನು ಎಳ್ಳಷ್ಟೂ ಉಲ್ಲಂಘಿಸದ ಶಿಕಾರಿ. "ಮೃಗವನ್ನು ನೋಯಿಸಲು ಹೊಡೆಯಬೇಡ. ಹೊಡೆದರೆ ಅದು ಸಾಯಲೇಬೇಕು" ಎಂಬ ಬೇಟೆಯ ಧ್ಯೇಯ ವಾಕ್ಯದಂತೆ ನಡೆಯುವವರು. ನಾವೆಲ್ಲಿಯಾದರೂ ಪ್ರಾಯದ ಹುಮ್ಮಸ್ಸಿನಿಂದ ಹೊಡೆವ ಬೇಟೆಯು ಅರೆಪೆಟ್ಟಾಗಿ ಹೋಯಿತೆಂದರೆ ನಮ್ಮನ್ನು ತರಾಟೆಗೆ ತೆಗೆದು ಕೊಳ್ಳದೆ ಬಿಡುತ್ತಿರಲಿಲ್ಲ. ಇವರೊಂದಿಗೆ ಇವರ ಭಾವ ಸಾಣೂರು ಮುದ್ದಣ್ಣ ಶೆಟ್ಟರೂ ಇದ್ದರೆಂದ ಮೇಲೆ ನಮಗೆ ಇಚ್ಛೆ ಬಂದಂತೆ ಶಿಕಾರಿಯಲ್ಲಿ ವರ್ತಿಸುವ ಅಧಿಕಾರವೇ ಇರಲಿಲ್ಲ. ಅವರದು ಅಂಥ ಘನ ಗತ್ತುಗಾರಿಕೆ, ಗಾಂಭೀರ್ಯ.

ಘನ ಶಿಕಾರಿಗಳೊಂದಿಗೆ ಬೆರೆಯುವ ಸದವಕಾಶವನ್ನು ಕಳೆದುಕೊಳ್ಳ ಬಾರದೆಂಬ ಆತುರದ ನಾನು, ಬೈಗು ಹೊತ್ತಿಗೆ ಆಲಂಗಾರು ಬಂಗ್ಲೆಯಲ್ಲಿ ನನ್ನ ಸೋಮಾರಿ ಸಂಘದ ಎರಡು ಮೂರು ಮಂದಿ ಗೆಳೆಯರೊಂದಿಗೆ ಹಾಜರಾದೆ.

ನನ್ನನ್ನು ಕಂಡ ಪೂಂಜರೂ, ಸಂಜೀವ ರೈಗಳೂ 'ನಮ್ಮ ಗನ್ ಬೋಟ್ ಬಂದ' ಎಂದು ನನ್ನನ್ನು ಹಾರ್ದಿಕವಾಗಿ ಸ್ವಾಗತಿಸಿದರು. ಬಂದ ಗೆಳೆಯರು, ನೆಂಟರಿಗೆ ಶ್ರೀ ರಾಮಯ್ಯ ಶೆಟ್ಟರ ಅದ್ದೂರಿಯ ಔತಣವು ಸಿದ್ಧವಾಗುತ್ತಿತ್ತು. ಸೂರ್ಯಾಸ್ತಮಾನವಾಯಿತು. ನಾನೂ ಸಿರಿಲ್ ಅಲ್ಬುಕರ್ಕರೂ ಒಂದೆಡೆಯಲ್ಲಿ ನಮ್ಮ ಹಿಂದಿನ ಬೇಟೆಯ ದಿನಗಳನ್ನು ನೆನೆಯುತ್ತಾ ಸರಸವಾಡುತ್ತಾ ಕುಳಿತಿದ್ದೆವು. ಹಿರಿಯರು ಬೇರೆ ಎಡೆಯಲ್ಲಿ ಕುಳಿತಿದ್ದರು. ರಾತ್ರಿ ಸರ್ಚ್‌ಲೈಟ್ ಶಿಕಾರಿಗೆ ಹೋಗೋಣವೆಂದರೆ ಹಾಲು ಚೆಲ್ಲಿದಂತೆ ಬೆಳದಿಂಗಳು. ಬೆಳದಿಂಗಳ ದಿನದಲ್ಲಿ ಲೈಟ್ ಶಿಕಾರಿ ಸಾಧ್ಯವೇ ಇಲ್ಲ. ಆದುದರಿಂದ ನಾವು ರಾತ್ರಿ ಗಡದ್ದಾಗಿ ಕೋಳಿ ರೊಟ್ಟಿಯ ಭೋಜನ ವನ್ನು ತೀರಿಸಿ ಸ್ವಸ್ಥಚಿತ್ತದಿಂದ ನಮ್ಮ ಹಾಸಿನಲ್ಲಿ ಮಲಗಿ ಸುಖನಿದ್ರೆಯನ್ನು ಮಾಡಿದೆವು.

ಮರುದಿನ ಬೆಳಗ್ಗೆ ಏಳೂವರೆ ಘಂಟೆಗೆ ಎದ್ದವರು ಪ್ರಾತರ್ವಿಧಿಗಳನ್ನು ಪೂರೈಸಿ ಬೆಳಗ್ಗಿನ ಉಪಾಹಾರವನ್ನು ತೀರಿಸಿದೆವು. ಬೇಟೆಯ ವೇಷ ಭೂಷಣಗಳನ್ನು ಧರಿಸಿ ಒಬ್ಬೊಬ್ಬರಾಗಿ ಹೊರಬಂದೆವು. ಅದಾಗಲೇ ಬಂದು ನೆರೆದಿದ್ದ ಊರವರು ನಮ್ಮತ್ತ ಕಡೆ ಕವಾಯತಿಗೆ ಸಜ್ಜುಗೊಂಡು ಬಂದ ವೀರ ಯೋಧರನ್ನು ನೋಡುವಂತೆ ನೋಡುತ್ತಿದ್ದರು. ನಾನೂ ಪೂಂಜರ ಪೆಟ್ಟಿಗೆಯಿಂದ ಬೇಕು ಬೇಕಾದ ಉತ್ತಮ ದರ್ಜೆಯ ತೋಟೆ ಗಳನ್ನು ಆರಿಸಿ ನನ್ನ ಬೆಲ್ಟನ್ನು ಭರ್ತಿಮಾಡಿ ಅಂಗಿ ಚಡ್ಡಿಗಳ ಕಿಸೆಗೂ ಹಾಕಿಕೊಂಡು ಹೊರಬಂದುದನ್ನು ಕಂಡ ಊರಿನ ಗೆಳೆಯರು ಇಂದು ಮೃಗ ವೆದ್ದರೆ ಬೇಟೆಯಾಗುವುದು ಖಂಡಿತವೆಂಬ ತೃಪ್ತಿಯ ಮುಖದಿಂದ ನೋಡಿ ದವರೇ "ಹೊರಡೋಣ"ವೆಂದರು. ಎಲ್ಲರೂ ಬಂಗಲೆಯ ಬಡಗು ದಿಕ್ಕಿನ ಕಾಡಿನತ್ತ ತೆರಳಿದೆವು.

ಆ ಊರಿನ ಬೋಂಟ್ರನು ನಮ್ಮನ್ನು ಒಳ್ಳೊಳ್ಳೆಯ ಗಂಡಿಗಳಲ್ಲಿ ನಿಲ್ಲಿಸಿ ತಾನು ಮುಂದೊತ್ತಿದನು. ನಾನು ನಿಂತ ಗಂಡಿಯಿಂದ ಸುಮಾರು ನಾನ್ನೂರು ಐನೂರು ಗಜ ದೂರದಲ್ಲಿ ನಟ್ಟಬೈಲು ಸಂಜೀವ ರೈಗಳು ತಮ್ಮ ಜೋಡು ನಳಿಗೆಯ ಬಂದೂಕನ್ನು ನೆಲಕ್ಕೂರಿ ನಿಂತು ಸಿಗರೇಟು ಸೇದು ತ್ತಿದ್ದಾರೆ. ಕಾಡು ಸೋವಲು ಆರಂಭಿಸುವುದಕ್ಕೆ ಮೊದಲೇ ಈ ಕರ್ಮ ಗಳನ್ನೆಲ್ಲಾ ತೀರಿಸಬೇಕು. ಮಧ್ಯೆ ಆಗಾಗ ಹೊಗೆಬತ್ತಿ ಸೇದಿದರೆ ಕಾಡಿ ನಲ್ಲಿರುವ ಮೃಗಗಳಿಗೆ ನಮ್ಮ ಸೋವು ತಿಳಿದು ಮೃಗಗಳು ಆ ಗಂಡಿಗೆ ಬರ ಲಾರವು. ಸೋವತರ ಸದ್ದು ಕೇಳುವುದಿಲ್ಲವೆಂದು ನಾನೂ ಒಮ್ಮೆ ಕಿರಿದಾಗಿ ಕೆಮ್ಮಿ, ಸಿಗಾರ್‌ಲೈಟ್ ತೆಗೆಯಲೆಂದು ಕೋವಿಯನ್ನು ಎಡಕೈಯಲ್ಲಿ ಹಿಡಿದು ಬಲಕೈಯನ್ನು ಕಿಸೆಗೆ ಹಾಕುತ್ತೇನೆನ್ನುವಾಗ ಬಡಬಡವೆಂದು ದೊಡ್ಡಿಯಿಂದ ಎದ್ದು ಓಡುವ ಕೋಣಗಳ ಹಿಂಡಿನಂತೆ, ನನ್ನ ಬಳಿಯಲ್ಲೆ ಇದ್ದ ಸೀಗೆ ಬಲ್ಲೆಯಿಂದ ಹಂದಿಗಳ ಹಿಂಡೇ ಎದ್ದು ಓಡಿದುದನ್ನು ಕಂಡೆ. ಇನ್ನೇನು ಕೋವಿಯನ್ನೆತ್ತಿ ಹೊಡೆಯಬೇಕು; ಅಷ್ಟರಲ್ಲಿ ಹಂದಿಗಳು ಕಾಲು ಕಿತ್ತು ನನ್ನ ಹೊಡೆತದ ಆಳತೆಗೆ ಮೀರಿ ಸಂಜೀವ ರೈಗಳಿದ್ದ ಗಂಡಿಗೆ ಧಾವಿಸಿಯೂ ಆಗಿತ್ತು! ನಾನು 'ಕ್ಲೀನ್ ಬೌಲ್ಡ್ ಆದ ಬ್ಯಾಟುಗಾರ'ನಂತೆ ಮುಖ ಮಾಡಿದೆ. ಇನ್ನು ಸಂಜೀವ ರೈಗಳು ಏನು ಮಾಡುತ್ತಾರೆಂದು ಆ ಕಡೆಗೆ

ದಿಟ್ಟಿಸಿದೆ. ಸದ್ದು ಕೇಳಿ ಗುರಿ ನೋಡಿ ಎದೆ ಏರಿದ ಕೋವಿಯ ಕುದುರೆಯನ್ನು ತೋರ್ಬೆರಳಿನಿಂದ ಮೀಟಿದರು. 'ಢಂ' ಎಂದಿತು ಕೋವಿ; 'ಕಿರ‍್ರೀss ....' ಎಂದಿತು ಹಂದಿ, ಸೈರನ್ನಿನ ಕೂಗಿನಂತೆ! ನಾನೂ ರೈಗಳತ್ತ ಧಾವಿಸಿದೆ. ಅಷ್ಟರಲ್ಲಿ ಅವರ ಕೋವಿ ಮತ್ತೊಂದು ಗುಂಡನ್ನು ಉಗುಳಿತು. ಕೋವಿಯ ನಳಿಗೆಯು ಹೊಗೆ ಕಾರುತ್ತಿದೆ. ರೈಗಳು ಪುನಃ ಕೋವಿಗೆ ತೋಟೆ ತುಂಬಿಸುವ ಹವಣಿಕೆಯಲ್ಲಿದ್ದಾರೆ. ನಾನು ಸುತ್ತಲೂ ದೃಷ್ಟಿ ಬೀರಿದೆ. ಎರಡು ಹಂದಿಗಳು ಜೀವ ತೊರೆಯಲು ಹೊರಳಾಡುತ್ತಿವೆ. ವೇದನೆಯಿಂದ ಅರಚುವ ಅವುಗಳ ಕೂಗು ಕಿವಿ ಕಿವುಡಾಗಿಸುವಂಥದು. ನೆತ್ತರ ಚಿಮ್ಮುವಿಕೆಯನ್ನು ಕಂಡ ನಾನು ಎರಡು ಹಂದಿಗಳಿಗೂ ಮರ್ಮಕ್ಕೆ ಗುಂಡು ತಗಲಿದೆ ಎಂಬ ನಿರ್ಧಾರಕ್ಕೆ ಬಂದಿದ್ದೆ. ರೈಗಳು ನನ್ನನ್ನು ಕುರಿತು - "ಹೊಡೆಯುವ ಆಸೆಯಿದ್ದರೆ ಇನ್ನೂ ಜೀವ ಹೋಗದೆ ಹೊರಳುತ್ತಿರುವ ಆ ದೊಡ್ಡ ಹಂದಿಗೆ ಹೊಡೆ" ಎಂದರು. ನನ್ನಂಥ ಸ್ವಾಭಿಮಾನಿ ಶಿಕಾರಿಯು ಬೇರೆಯವರು ಹೊಡೆದು ಸಾಯಬಿದ್ದ ಪ್ರಾಣಿಗೆ ಮತ್ತೆ ಈಡು ಹೊಡೆದು 'ನಾಗಪ್ಪನೊಂದಿಗೆ ನಾನೂ ಕಚ್ಚಿದೆ' ಎಂಬ ನಾಣ್ಣುಡಿಗೆ ಪಕ್ಕಾಗುವಂಥವನಲ್ಲ. "ಬೇಗನೆ ಜೀವ ಹೋಗಬೇಕೆಂದಿದ್ದರೆ ನೀವೇ ಇನ್ನೊಂದು ಈಡು ಹಾರಿಸಿ. ಇನ್ನು ಅದು ಏಳಲಾರದು" ಎಂದೆ. ಈಡಾದ ಕಾಲುಗಂಟೆಯಲ್ಲಿ ನಿಲುಗಡೆಯಿಲ್ಲದೆ ಬೊಬ್ಬೆಯೊಡನೆ ಸೋವತರು ಓಡಿ ಬಂದರು. ಅವರ ಜತೆಯಲ್ಲಿದ್ದ ನಾಯಿಗಳು ಹಂದಿಗಳ ಮೇಲೆ ಮುಗಿಬಿದ್ದು ಕಿವಿ, ಕೈ, ಬಾಯಿ, ಮೂಗೆನ್ನದೆ ಕಚ್ಚಿ ಎಳೆಯಲು ಆರಂಭಿಸಿದವು. ಆ ನಾಯಿಗಳನ್ನು ದೂರಕ್ಕೆ ಓಡಿಸಬೇಕಾದರೆ ಸಾಕೋ ಸಾಕಾಯಿತು. ಶಿಕಾರಿಗಳೆಲ್ಲ ಬಂದು ಸೇರಿದಾಗ ಅಂದಿನ ಶಿಕಾರಿಯು ಭರ್ಜರಿಯಾಗಿಯೇ ಆಯಿತೆಂಬ ಭಾವನೆಯಿಂದ ಒಂದು ಗಂಟೆಯ ವಿಶ್ರಾಂತಿಯನ್ನು ಪಡೆದು ಏಳಲು ಹವಣಿಸುವಾಗ ಹನ್ನೆರಡು ಗಂಟೆಯಾಗಿತ್ತು. ಆದಾಗಲೇ ಸೋವತರಲ್ಲಿ ಕೆಲವರು ಸತ್ತ ಹಂದಿಗಳನ್ನು ನಾವು ತಂಗಿದ್ದ ಬಂಗಲೆಗೆ ಕೊಂಡುಹೋಗುವ ವ್ಯವಸ್ಥೆಯನ್ನು ಮಾಡಿದ್ದರು.

ನನ್ನ ಕಿಂಚಿತ್ ಅಜಾಗರೂಕತೆಯಿಂದ ಕೈಗೆ ಬಂದ ತುತ್ತು ಕಳಚಿ ಬಿತ್ತಲ್ಲಾ ಎಂಬ ಎದೆಗುದಿಯಿಂದ ಮನಸ್ಸಿಗೆ ಒಂದು ರೀತಿಯ ಮುಜುಗರ

ಹಿಡಿದಂತಾಗಿತ್ತು. ನನ್ನ ಬೇಟೆಯು ರೈಗಳ ಪಾಲಿಗೆ ದಕ್ಕಿ ನಾನು ಈಡು ಹೊಡೆದ ಹೆಮ್ಮೆಯಿಂದ ವಂಚಿತನಾಗಬೇಕಾಯಿತಲ್ಲಾ ಎಂಬ ಚಿಂತೆಕಾಡುತ್ತಿದ್ದಂತೆ ಸಂಜೀವ ರೈಗಳ ಬಗ್ಗೆ ಅಸೂಯೆಯಿಂದ ನನ್ನ ಮನಸ್ಸು ಅಸ್ತವ್ಯಸ್ತವಾಯಿತು. ಹೇಗೂ ಮುಂದಿನ ಗಂಡಿಗೆ ಹೋದುದಾಯಿತು. ನನ್ನ ಎಡಕ್ಕೆ ಐನೂರು ಮಾರು ದೂರದಲ್ಲಿ ಸಂಜೀವ ರೈಗಳೂ, ಬಲಕ್ಕೆ ಅಷ್ಟೇ ದೂರದಲ್ಲಿ ಎ. ವಿ. ಪೂಂಜರೂ ಸಜ್ಜಾಗಿ ಸೋವತರತ್ತ ದಿಟ್ಟಿ ನಟ್ಟು ನಿಂತುದು ಕಾಣುತ್ತಿತ್ತು. ಸೋಲೆಂಬ ಭಾವನೆಯಿಂದ ಆವೃತವಾದ ನನ್ನ ಮನಸ್ಸಿಗೆ ನೆಮ್ಮದಿಯಿಲ್ಲದೆ ಕಣ್ಣ ಕೂರಿಕೆಯನ್ನು ತಡೆಯಲಾರದೆ ಮರವೊಂದನ್ನು ಮರೆಮಾಡಿ, ಮರದ ಬೊಡ್ಡೆಗೆ ತಲೆಯಿಟ್ಟು ಒರಗಿ ಕುಳಿತ ನನಿಗೆ ಮಂಪರು ನಿದ್ರೆ! ಬಹು ದೂರದಿಂದ ಸೋವತರ ಬೊಬ್ಬೆ, ಆರ್ಭಟೆಯೂ, ನಾಯಿಗಳ ಬೊಗಳಾಟವೂ ಹೌದೋ, ಅಲ್ಲವೋ ಎಂಬಂತೆ ಕೇಳುತ್ತಿದೆ. ನಾನು ಮರಕ್ಕೆ ತಲೆಯೂನಿಸಿ ಕೂತು ಒಂದು ಗಂಟೆಯಾಗಿರಬಹುದು. ಎದುರಿಗೆ ನಾಲ್ಕಾರು ಮಾರು ಬಲ್ಲೆಪೊದೆಯಿಂದ ಕೂಡಿದ ಕಾಡು. ಅನಂತರ ಯಾರೋ ರಾಗಿ ಬೆಳೆಸಲೆಂದು ಮಾಡಿದ್ದ ಒಂದು, ಒಂದೂವರೆ ಎಕ್ರೆಯ ಮೈದಾನು ಪ್ರದೇಶ. ಕಾಡಿನಿಂದ ಓಡಿಬಂದ ಮೃಗಗಳು ನನ್ನೆಡೆಗೆ ಬರುವಾಗ ನನಗೆ ಸುಲಭದಲ್ಲಿ ಎರಡು, ಮೂರು ಈಡು ಬಾರಿಸುವ ಅವಕಾಶ ದೊರೆವಂಥ ಪ್ರಶಸ್ತವಾದ ಸ್ಥಳ. ಆದರೆ ಅಂತಹ ಸ್ಥಿತಿಯಲ್ಲಿ ನನಗೆ ಮಂಪರು! ದೂರದಿಂದ 'ಕೂ, ಕೂ' ಎಂದು ನನ್ನನ್ನು ಎಚ್ಚರಿಸುವಂಥ ಬಿಗಿಲಿನ ಧ್ವನಿ ಕೇಳಿಬಂತು. ಏಳುವುದೋ, ಬೇಡವೋ ಎಂಬ ಉದಾಸೀನದ ದೃಷ್ಟಿಯಿಂದ ಬಿಗಿಲು ಊದಿ ಸಂಜ್ಞೆ ಕೊಡುತ್ತಿರುವ ಪೂಂಜರತ್ತ ನೋಡಿದೆ. ಸಿಟ್ಟಿನ ಮುಖದಿಂದ ನನ್ನನ್ನು ಹೊಡೆಯಲು ಬರುವ ರೀತಿಯಿಂದ ನೋಡಿ, ಎದುರ್ಗಡೆ ನೋಡುವಂತೆ ಕಣ್ಣುಸನ್ನೆ, ಬೆರಳುಸನ್ನೆಗಳಿಂದ ನಿರ್ದೇಶಿಸುತ್ತಿದ್ದಾರೆ.

ಎದುರಿಗೆ ನೋಡುತ್ತಲೇ ನನಗೆ ಕವಿದಿದ್ದ ಮಂಪರು ನನ್ನನ್ನು ಒದ್ದು ಜಾಡಿಸಿ ಪಲಾಯನ ಮಾಡಿದೆ! ಎದುರಿಗೆ ಕಾಣುತ್ತಿರುವುದೇನು? ನನ್ನ ಪಾಲಿನ ಯಮನೆಂದೇ ಭಾಸವಾಗುವ ಹುಲಿ! ಸಾವರಿಸಿಕೊಂಡು, ಕೋವಿಯನ್ನು ಭದ್ರವಾಗಿ ಹಿಡಿದು ಮತ್ತೆ ಹುಲಿಯೆಡೆಗೆ ನೋಡಿದೆ. ಆರೇ!

ಅದೇಕೆ ನನ್ನತ್ತ ಬೆನ್ನು ಮಾಡಿ ಕುಳಿತಿದೆಯೆಂದು ಅಚ್ಚರಿಯಾಯಿತು. ನೆಗೆಯುವ ಹವಣಿಕೆಯಿಂದ ಹಿಂಗಾಲನ್ನು ಅವುಕಿ, ಮುಂಗಾಲನ್ನು ನೀಡಿ ಹಾರುವ ಭಂಗಿಯಲ್ಲಿ ಕಾಣಿಸಿತು. ಹೋ! ಎದುರು ಭಾಗದಲ್ಲಿ ಒಂಟಿಗ ಹಂದಿಯು ಕುಸ್ತಿ ಹಿಡಿಯಲು ಸಿದ್ಧನಾಗಿ ನಿಂತ ಜಗಜಟ್ಟಿಯಂತೆ ಕಾಣಿಸುತ್ತದೆ. ಗುರುಗುಟ್ಟುತ್ತಿರುವ ಹುಲಿಯತ್ತ, ತನ್ನ ರೋಮರಾಜಿಯನ್ನು ನಿಗುರಿಸಿ 'ಆ' ಎಂದು ಬಾಯಗಲಿಸಿ ತನ್ನ ಹಿಡಿಗಾತ್ರದ ಕೋರೆ ಹಲ್ಲುಗಳನ್ನು ತೋರಿಸುತ್ತಾ, 'ಎಲ್ಲಿಯಾದರೂ ನನ್ನ ಉಸಾಬರಿಗೆ ಬಂದೆಯೆಂದರೆ ಸೀಳಿ ಹಾಕುವೆ. ಬರುವುದಿದ್ದರೆ ಬಾ' ಎಂದು ಹೂಂಕರಿಸುತ್ತಾ ಎದುರಾಳಿಯನ್ನು ಹೋರಾಟಕ್ಕೆ ಆಹ್ವಾನಿಸುವ ಜಟ್ಟಿಯಂತೆ, ಮಾಂಸಖಂಡಗಳನ್ನು ಗಟ್ಟಿಗೊಳಿಸಿ ನಿಂತಿದ್ದ ಹಂದಿಯ ಠೀವಿ ಮರೆಯುವಂಥದಲ್ಲ.

ನಾನು ಮನದಲ್ಲೇ 'ಅಯ್ಯೋ, ಗ್ರಹಚಾರವೇ! ಇವುಗಳಲ್ಲಿ ಯಾವುದಕ್ಕೆ ಹೊಡೆದರೂ ಕ್ರೋಧಾವೇಶದಿಂದ ಉಳಿಯುವ ಮೃಗಕ್ಕೆ ನಾನು ಆಹುತಿಯಾದಂತೆಯೇ! ಏನು ಮಾಡಲಿ?' ಎಂದುಕೊಂಡು ಅಸಹಾಯಕ ದೃಷ್ಟಿಯಿಂದ ಪೂಂಜರತ್ತ ನೋಡಿದೆ. ಅವರು ಸಂಜ್ಞೆಯ ಮೂಲಕ ಮರ ಹತ್ತಲು ತಿಳಿಸಿದ್ದನ್ನು ಕಂಡೊಡನೆ ಮುಳುಗುವಾತನಿಗೆ ಹುಲ್ಲುಕಡ್ಡಿಯೂ ಆಧಾರವೆಂಬಂತೆ, ಹತ್ತಿರವೇ ಇದ್ದ ಕವಲು ಕವಲಾಗಿದ್ದ ಮರವೊಂದನ್ನು ಬಾಚಿತಬ್ಬಿ ಕೋವಿಯೊಂದಿಗೆ ಏರಿದೆ. 'ಬದುಕಿಯಾ ಬಡಜೀವವೇ?' ಎಂದುಕೊಂಡು ಆ ಮರದಲ್ಲಿ ಕುಳಿತು ಕೋವಿಯನ್ನು ಎದೆಗಾನಿಸಿ 'ಯಾವುದಕ್ಕೆ ಮೊದಲು ಹೊಡೆಯೋಣ? ಇನ್ನು ಅವೆರಡರಿಂದಲೂ ನನಗೆ ಅಷ್ಟೊಂದು ಭಯವಿಲ್ಲ' ಎಂದು ಆಲೋಚಿಸುತ್ತಿರುವಾಗ ಕಿಸೆಯಲ್ಲಿದ್ದ ತೋಟೆಯೊಂದು ಕೆಳಗಿನ ಕಲ್ಲಿಗೆ ಬಿದ್ದು ಟಪ್ಪೆಂದು ಸದ್ದು ಮಾಡಿತು.

ಸದ್ದನ್ನು ಆಲಿಸಿದ ಹುಲಿಯು ತನ್ನ ಹಿಂದಿನಿಂದ ಏನೋ ಬಂದಿತೆಂದು ಗಾಬರಿಯಾಯಿತು. ಮೊದಲೇ ಹಂದಿಯ ಮೇಲೆ ನೆಗೆಯಲು ಸಿದ್ಧವಾಗಿದ್ದ ಅದು ಒಡನೆ ಕಾಡೇ ಬಿರಿಯುವಂಥ ಒಂದು ಆರ್ಭಟೆಯನ್ನು ಕೊಟ್ಟು, ಸೆಣಸಿ ನಿಂತ ಹಂದಿಯ ಮೇಲೆ ನೆಗೆದೇಬಿಟ್ಟಿತು! ಪಂಥಾಹ್ವಾನಕ್ಕೆ ಸನ್ನದ್ಧವಾಗಿದ್ದ ಹಂದಿಯು ಬಾಯಗಲಿಸಿ - ತನ್ನ ಮೇಲೆರಗಿ ಕುತ್ತಿಗೆಯನ್ನು ಕಚ್ಚಿ ಹಿಡಿದ - ಹುಲಿಯನ್ನು ತನ್ನ ಕೋರೆಯಿಂದ ಒತ್ತಿ ಭೂಮಿಗೆ ಅವುಕಿ

ಬಾಯಿಗೆ ಸಿಕ್ಕಿದ ಹುಲಿಯ ಕೈಯನ್ನು ಕಚಕಚನೆ ಕಡಿದಾಗ ಆ ನೋವನ್ನು ತಾಳಲಾರದೆ ಹುಲಿಯು ಹಂದಿಯನ್ನು ಬಿಟ್ಟು ಓಡಲು ಹವಣಿಸಿತು. ಎರಡು ಕೈಗಳೂ ನಜ್ಜುಗುಜ್ಜಾಗಿ ಹುಲಿಗೆ ಚಲನೆಯೇ ಕಷ್ಟವಾಯಿತು. ಅದು ಹಿಂಗಾಲಿನಿಂದ ತೆವಳತೊಡಗಿದ್ದನ್ನು ನೋಡಿದ ಹಂದಿಯು ಇನ್ನು ಬದುಕಿದೆಯೆಂಬ ಭಾವನೆಯಿಂದ ಓಡಲು ಹವಣಿಸುತ್ತಿದೆ! ಎವೆಯಿಕ್ಕದೆ ಈ ಕಾದಾಟವನ್ನು ಗಮನಿಸುತ್ತಿದ್ದ ನಾನು ಕೂಡಲೇ ಹಂದಿಯ ನೆತ್ತಿಗೆ ಒಂದು ಈಡು ಹಾರಿಸಿದೆ. ಗುರಿಯು ಸರಿಯಾಗಿತ್ತು. ಪೆಟ್ಟು ತಿಂದು, ರೋಷಗೊಂಡ ಹಂದಿಯು ಅದು ತನಗೆ ಹುಲಿಯೇ ನೀಡಿದ ಹೊಡೆತವೆಂಬ ಕ್ರೋಧಾವೇಶದಿಂದ, ತೆವಳುತ್ತಿದ್ದ ಹುಲಿಯ ಮೇಲೆ ಎರಗಿತು, ಮತ್ತೆ ತೊಡಗಿತು - ಜೀವದ ಹಂಗು ತೊರೆದ ಅವುಗಳ ಭೀಕರ ಹೋರಾಟ! ಎರಡೂ ಕೈಗಳನ್ನು ಅಷ್ಟರಲ್ಲೇ ಕಳೆದುಕೊಂಡಿದ್ದ ಹುಲಿಯು ತನ್ನ ಹಿಂಗಾಲು ಮತ್ತು ಬಾಯಿಯಿಂದಲೇ ಸ್ಪರ್ಧೆಯನ್ನು ಎದುರಿಸುತ್ತಿದೆ. ಹಂದಿಯು ಹುಲಿಯ ಕಡಿತ, ಪಂಜಿನ ಹೊಡೆತಗಳಿಂದ ಗಾಸಿಗೊಂಡು ಕ್ರುದ್ಧವಾಗಿ ತ್ತಲ್ಲದೆ ನನ್ನ ಒಂಟಿಗುಂಡಿನ ಆಘಾತದಿಂದ ಜರ್ಜರಿತವಾದ ಅಂತ್ಯಕಾಲದ ಹೋರಾಟವನ್ನು ಕೊಡುವ ಕಡುಗಲಿಯಂತೆ ಮುಸುಡನ್ನು ಹುಲಿಯ ಎದೆಗೆ ಒತ್ತಿ ಏಳಲು ಬಿಡೆನೆಂಬ ಹಟದಲ್ಲಿದೆ. ಹುಲಿಗೆ ಬಿದ್ದಲ್ಲಿಂದ ಏಳಲಾಗುತ್ತಿಲ್ಲವಾದರೂ ಕೊನೆಗಾಲದ ತನ್ನ ಬದುಕಿನ ಪ್ರಶ್ನೆಗೆ ಉತ್ತರವೆಂಬಂತೆ ಕಿವಿ, ಮೂಗು, ಬಾಯಿ, ಎದೆಯೆನ್ನದೆ ಹಂದಿಯನ್ನು ಕಚ್ಚಿ ಮಾಂಸದ ಮುದ್ದೆಗಳನ್ನೇ ಹೊರಗೆಳೆಯುತ್ತಿದೆ! ಹುಲಿಯೊಂದಿಗಿನ ಕಾದಾಟವೂ, ನನ್ನ ಕೋವಿಯ ಹೊಡೆತವೂ ಸೇರಿ ಹಂದಿಯು ನಿತ್ರಾಣ ಹೊಂದಿ ಬಸವಳಿದು ಬೀಳುವ ಮಟ್ಟಕ್ಕೆ ಬಂತು. ಹಂದಿ ಹುಲಿಗಳ ವೀರೋಚಿತ ಹೋರಾಟದ ಈ ಅಪೂರ್ವ ದೃಶ್ಯವನ್ನು ದಿಗ್ಭ್ರಾಂತನಾಗಿ, ರೆಪ್ಪೆ ಮುಚ್ಚದೆ ನೋಡುತ್ತಿದ್ದ ನಾನು ಹಂದಿಯು ಬಿದ್ದರೆ ಹುಲಿಯು ಎದ್ದು ಹೋಗಬಹುದೆಂದು, ಹಾಗಾಗಲು ಬಿಡಬಾರದೆಂದು ಅದಾಗಲೇ ಸಾಕಷ್ಟು ದಣಿದಿದ್ದ ಹುಲಿಗೆ ಒಂದು ಗುಂಡನ್ನು ಹೊಡೆದೆ. ನನ್ನ ಈಡಿನ ಶಬ್ದವಾಗುತ್ತಲೇ ಹಂದಿಯು ದಢೀರೆಂದು ಸ್ಮೃತಿಹೀನವಾಗಿ ಒಂದೆಡೆ ಬಿದ್ದು ಅಸುನೀಗಿತು. ಪ್ರಾಣಾಂತಿಕ ಪೆಟ್ಟಾಗಿದ್ದ ಹುಲಿಯು ಒಮ್ಮೆ ಜೋರಾಗಿ ಗರ್ಜಿಸಿ ತನ್ನ ಕೊನೆಗಾಲವು ಆಯಿತೆಂಬುದನ್ನು ನನಗೆ ತಿಳಿಸುವಂತೆ ಹಿಂಗಾಲಾಗಿ ನೆಗೆದುರುಳಿತು.

ಸೋವತರ ಸದ್ದಿರಲಿಲ್ಲ. ನಾಯಿಗಳು ಯಾವಾಗಲೋ ಮನೆಯತ್ತ ಓಟಕಿತ್ತಿದ್ದವು. ಕೋವಿ ಹಿಡಿದವರೆಲ್ಲ ಆ ಮೊದಲೇ ಮರವೇರಿದ್ದರು. ಹುಲಿ ಹಂದಿಗಳು ಸತ್ತವೆಂದು ದೃಢವಾಗಿ ಅರಿತ ನಾನು ನಿಧಾನವಾಗಿ ಮರದಿಂದ ಇಳಿದು ಕೆಳಗೆ ಬಿದ್ದ ತೋಟೆಯನ್ನು ಹೆಕ್ಕಿ ಕಿಸೆಗೆ ಸೇರಿಸಿದೆ. ಮರವೇರಿ ಕುಳಿತು ನನ್ನತ್ತಲೇ ನೋಡುತ್ತಿದ್ದ ರೈಗಳನ್ನೂ, ಪೂಂಜರನ್ನೂ ಬಳಿಗೆ ಕರೆದೆ. ಒಟ್ಟಾದ ನಾವು ಮೂವರೂ ಬಾರು ಮಾಡಿದ ಕೋವಿಯೊಂದಿಗೆ ಬಂದು ನೋಡುವುದೇನು ? ಹಂದಿಯ ಇರಿತಕ್ಕೆ ಚಿಂದಿ, ಚಿಂದಿಯಾದ ಹುಲಿಯ ದೇಹ; ಹುಲಿಯ ಹೊಡೆತ, ಕಚ್ಚಾಟ, ಪರಚಾಟಗಳಿಗೆ ಸಿಲುಕಿ ನಜ್ಜು ಗುಜ್ಜಾದ ಹಂದಿಯ ಶರೀರ ಎರಡೂ ವಿಕಾರವಾಗಿ ಬಿದ್ದಿವೆ !

ಹಂದಿ, ಹುಲಿಗಳನ್ನು ಏಕಕಾಲದಲ್ಲಿ ಹೊಡೆದ ಖ್ಯಾತಿ ನನಗೆ ಎಷ್ಟು ಮಟ್ಟಿಗೆ ಹೊಂದುವುದೋ ತಿಳಿಯೆ. ನಾನಲ್ಲದಿದ್ದರೆ ಹೋರಾಟದ ಹುಲಿ, ಹಂದಿಗಳು ಕಾಡು ಪಾಲಾಗುತ್ತಿದ್ದವೇ ವಿನಾ ನಮಗೆ ದಕ್ಕುತ್ತಿರಲಿಲ್ಲ - ಎಂಬುದಿಷ್ಟು ಮಾತ್ರ ನನಗೆ ಸ್ವೀಕಾರಾರ್ಹ. ಅಂತೂ, ನೆನೆದುಕೊಂಡರೆ ಇಂದೂ ಮೈ ಜುಮ್ಮೆನ್ನಿಸುವ ಆ ಪ್ರಸಂಗದ ಪ್ರತ್ಯಕ್ಷದರ್ಶಿಯಾದ ನನ್ನ ಪಾಲಿಗೆ ಅದು ಗತಕಾಲದ ಬದುಕಿನ ಶಿಕಾರಿ ಸಾಹಸದ ಒಂದು ರೋಮಾಂಚಕ ಅನುಭವವಾಗಿ ಉಳಿದಿದೆ



# ಗಾರ್ಡ್‌ರ ಬಲಿಪ ಶಿಕಾರಿ

ಫಾರೆಸ್ಟ್ ಗಾರ್ಡ್ ಚೆನ್ನಪ್ಪನವರು ಆ ಕಾಲದಲ್ಲಿ ನಾವೂರು ಬೀಟಿನ ಗಾರ್ಡರು; ತುಂಬು ಸಂಸಾರಿ. ಬ್ರಿಟಿಷ್ ಸಾಮ್ರಾಜ್ಯಶಾಹಿಯ ಕಾಲವದು. ಹದನಾದ ತಿಂಗಳ ಸಂಬಳದೊಂದಿಗೆ ಸಾಕಷ್ಟು ಗಿಂಬಳವನ್ನೂ ಬಡರೈತರಿಂದ ಗಿಟ್ಟಿಸಿಕೊಳ್ಳುವುದಕ್ಕೆ ಆತಂಕವಿರಲಿಲ್ಲ. ಮಾಮೂಲಾಗಿ ಗಾರ್ಡರಿಗೆ - ಕಾಡಿನ ಸರಹದ್ದಿನಲ್ಲಿರುವ ಮನೆಯವರಿಂದ ಕೋಳಿ, ತೆಂಗಿನಕಾಯಿ, ಅಕ್ಕಿ, ತರಕಾರಿ, ತಲೆಹೊರೆ, ಬಿಟ್ಟಿ ಬೇಗಾರಿ ಕಡ್ಡಾಯವೆಂಬಂತೆ ಸಲ್ಲುತ್ತಿದ್ದವು. ಇದನ್ನು ಕೊಡಲು ತಪ್ಪಿದವನ ಜಾನುವಾರುಗಳ, ಕಾಡಿನ ಬದಿಗೆ ಸೊಪ್ಪು ಕಟ್ಟಿಗೆ ತರಲು ಹೋದವನ ಪಾಡು ಮತ್ತೆ ಹೇಳಬೇಕೆಂದಿಲ್ಲ. ಆದರೆ ಚೆನ್ನಪ್ಪನವರು ಈ ವಿಷಯಗಳಲ್ಲಿ ಹಿಂದಿನ ಗಾರ್ಡರುಗಳೆಲ್ಲರಿಗಿಂತ ಕಠಿಣರಾಗಿದ್ದೂ ನಯವಾದ ಮಾತುಗಾರಿಕೆಯಿಂದ ಊರವರ ಪ್ರೀತಿ ವಿಶ್ವಾಸಗಳಿಗೂ ಪಾತ್ರರಾಗಿದ್ದರು.

ಇವರಿಗೆ ಈ ಅಭ್ಯಾಸದೊಂದಿಗೆ ಕುಡಿತದ ಚಟವೂ ಬಲವಾಗಿಯೇ ಇತ್ತು. ಕುಡಿಯುತ್ತಾರೆಂದ ಮೇಲೆ ಧಾರಾಳ ಮಾಂಸ ತಿನ್ನಲೇಬೇಕಷ್ಟೆ ? ಫೋರೆಸ್ಟ್ ಗಾರ್ಡರೆಂದ ಮೇಲೆ ಇದಕ್ಕೂ ಆ ಕಾಲದಲ್ಲಿ ಅಭಾವವಿಲ್ಲ. ಯಾರಾದರೂ ಇವರ ಕಾವಲಿನ ಕಾಡಿನಲ್ಲಿ ಶಿಕಾರಿ ಮಾಡಿದರೆ ಇವರಿಗೆ ಒಂದು ದಾಯ ಸಂದಾಯವು ಮಾಮೂಲು ! ಯಾವನಾದರೂ ಪೀನಾರಿ ಬೇಟೆಗಾರನು ಇದನ್ನು ಇವರಿಗೆ ಕೊಡಲು ತಪ್ಪಿದನೆಂದಾದರೆ, ಮರುದಿನ ಗಾರ್ಡರು ಇವನ ಮನೆಯ ಮುಂದೆ ತನ್ನ ಜೋಡು ನಳಿಗೆಯ ಬಾರು ಮಾಡಿದ ಕೋವಿಯೊಂದಿಗೆ ಹಾಜರಾಗುತ್ತಿದ್ದರು. ಗಾರ್ಡರ ವೇಷ, ಬಾರು ಮಾಡಿದ ಕೋವಿ, ಕೊಬ್ಬಿದ ಆಕೃತಿ ಇವುಗಳನ್ನು ಕಂಡರೆ ಮನೆಯ ಹೆಂಗಸರು ಮಕ್ಕಳ ಅವಸ್ಥೆ ಹೇಳಬೇಕೆಂದಿಲ್ಲ. ಹಿಂದಿನ ದಿನದ ಶೇಷ, ಮಾಂಸದ ಪದಾರ್ಥವನ್ನೂ ರೊಟ್ಟಿ, ಕಳ್ಳಿನೊಂದಿಗೆ ತಂದು ಇವರ ಮನಸ್ಸು ಸಮಾಧಾನಪಡಿಸಿ, ಸ್ವಲ್ಪ ಕೈ ಬೆಚ್ಚಗೂ ಮಾಡಿ ತಾವು ಹಿಂದಿನ ದಿನ ಮಾಡಿದ ತಪ್ಪನ್ನು ಒಪ್ಪಿಕೊಂಡು ಕ್ಷಮೆಯಾಚಿಸಿ ಮುಂದೆ ಇಂತಹ

ಅಪರಾಧವು ಘಟಿಸದಂತೆ ಎಚ್ಚರವಿರುವ ಆಶ್ವಾಸನೆಯನ್ನು ಕೊಟ್ಟು ಅವರನ್ನು ಕಳುಹಿಸಬೇಕಾದರೆ ಚೊಚ್ಚಲು ಪ್ರಸವವೇದನೆಯನ್ನು ಮುಗಿಸಿ ಮಿಂದು ಬಂದಷ್ಟೇ ಪ್ರಯಾಸ!

ಆದರೆ ಇವರು ನನಗೆ ತುಂಬಾ ಗೌರವ, ಮರ್ಯಾದೆಯನ್ನು ಕೊಡುತ್ತಿದ್ದರು. ನಾನು ಆ ಕಾಲದ ಘನ ವಿದ್ಯಾವಂತರ ಕುಟುಂಬಿಕನೆಂದೋ, ಒಳ್ಳೆಯ ಶಿಕಾರಿಯೆಂದೋ ಆ ಗೌರವ ಸಲ್ಲುತ್ತಿದ್ದಿರಬೇಕು. ಆದರೆ ನಾನೂ ಶಿಕಾರಿ ಮಾಡಿದ ದಿನ ಇವರನ್ನು ಊಟಕ್ಕೆ ಕರೆಯದಿದ್ದರೆ ಮಾತ್ರ ಮರುದಿನ ಕಾಣಸಿಗುವಾಗ ಪ್ರಥಮದಲ್ಲಿ ಕೊಂಚ ಮುನಿಸಿನ ತಿಳಿ ನಗುವಿನಿಂದಲೇ ನನ್ನನ್ನು ಸ್ವಾಗತಿಸುತ್ತಿದ್ದರು. ಆಗ ನಾನೂ ನಾವೂರಲ್ಲಿ ಒಬ್ಬಂಟಿಗ. ಬೇಟೆಯ ಊಟವನ್ನು, ಅದರ ಸ್ವಾರಸ್ಯವನ್ನು ಬಣ್ಣಿಸುತ್ತಾ ಉಂಡರೆ, ಅದರ ಸೊಗಸೇ ಬೇರೆ. ಆದುದರಿಂದ ನಾನೂ ಅವರಿಗೆ ಊಟಕ್ಕೆ ಕರೆ ಕಳುಹಿಸಲು ಮರೆಯುತ್ತಿರಲಿಲ್ಲ. ಹಾಗೆ ನಮ್ಮಿಬ್ಬರ ಪರಿಚಯ ಬೆಳೆದು ಸ್ನೇಹವು ನಿಕಟವಾಗಿತ್ತು. ಅಂತೆಯೇ ಪದೇ ಪದೇ ಇವರು ಊರವರಿಗೆ ಕೊಡುತ್ತಿದ್ದ ಉಪಟಳದ ವಿಚಾರವೂ ನನ್ನ ತಿಳುವಳಿಕೆಗೆ ಬಂದು ಇವರ ಉಪದ್ರವದ ನಿವಾರಣೋಪಾಯವನ್ನು ಯೋಚಿಸುತ್ತಾ ಇದ್ದೆ.

ಆರಂಭದ ಬೇಸಾಯದ ಗಲಾಟೆಯಿಂದಾಗಿ ಎರಡು ಮೂರು ವಾರಗಳು ನಾವೂರಲ್ಲಿ ಯಾರೂ ಬೇಟೆಯ ಗೊಡವೆಗೇ ಹೋಗಿರಲಿಲ್ಲ. ನನಗಾದರೋ - ರಾತ್ರಿ ಸರ್ಚ್‌ಲೈಟ್ ಶಿಕಾರಿಯಿಂದಾಗಿ ಬರಿಂಕ, ಮೊಲ, ಮುಳ್ಳುಹಂದಿಯ ಮಾಂಸವು ಪದೇ ಪದೇ ದೊರಕುತ್ತಿತ್ತು. ಇವು ಚಿಕ್ಕ ಪ್ರಾಣಿಗಳು; ಅಲ್ಲದೆ ಸುಲಭದ ಬೇಟೆ. ಇದರಿಂದ ಒಳ್ಳೆಯ ಊಟ ಮಾಡಿ ಜಿಹ್ವಾಚಾಪಲ್ಯವನ್ನು ನೀಗಿ ಮರುದಿನದ ಬೇಸಾಯದ ಕಾರ್ಯಕ್ರಮವನ್ನು ಯೋಚಿಸಿದರಾಯಿತು. ಆದರೆ ಗಾರ್ಡರಿಗೆ ಈ ಸುಖೋಪಚಾರದ ವಿಷಯದಲ್ಲಿ ಉಪವಾಸವೇ ಗತಿ. ದಿನನಿತ್ಯ ಮಾಂಸದೌತಣವನ್ನು ಮಾಡಿದ ಗಾರ್ಡರ ನಾಲಿಗೆಯ ರುಚಿಯೂ ಕೆಟ್ಟಿತು; ಹೊಟ್ಟೆಯೂ ಖಾರವಿಲ್ಲದೆ ಹಾಳಾಯಿತು. ಮನಸ್ಸಿನ ನೆಮ್ಮದಿಯು ಇದರಿಂದ ಕುಂಠಿತವಾಯಿತೆಂದು ಬೇರೆ ಹೇಳಬೇಕಿಲ್ಲವಷ್ಟೆ? ಇದರಿಂದ ನೊಂದ ಗಾರ್ಡರು ಬಂದೇ ಬಂದರು ನನ್ನ ಮನೆಗೆ. ದೂರಿಕೊಂಡರು ತುಂಬಾ ಹೊತ್ತು ಅವರಿಗಾದ

ಸಂಕಟವನ್ನು. ಅಂತೂ ಮಧ್ಯಾಹ್ನದ ಊಟವೊಂದು ನಮ್ಮ ಮನೆಯಲ್ಲಿ ಸ್ವಲ್ಪ ಗಡದ್ದಾಗಿಯೇ ದೊರಕಿತು. ಹಿಂದಿನ ರಾತ್ರಿ ಲೈಟು ಶಿಕಾರಿ ಯಲ್ಲಿ ದೊರೆತ ಚಿಕ್ಕ ಬರಿಂಕದ ನಾಲ್ಕು ತುಂಡುಗಳು ಅವರಿಗೆ ದಕ್ಕಿದವು. ಕಾಡುಹಂದಿಯ ತೊಡೆಯ ಮಾಂಸವನ್ನೆಲ್ಲ ಕಬಳಿಸಿ ಜೀರ್ಣಿಸಿದ್ದ ಈ ಜೀವಿಗೆ, ಇದು ಯಾವ ಮೂಲೆಗೆ ಈಡು? ಅಂತೂ, ಉಪವಾಸ ಬೀಳು ವುದಕ್ಕಿಂತ ಅರ್ಧ ಊಟವೇ ಲೇಸೆಂಬ ಗಾದೆಯ ಮಾತಿಗೆ ಗಾರ್ಡರು ಶರಣು ಬರಲೇಬೇಕಾಯಿತು.

ಊಟದ ಅನಂತರ ಕಿರುನಿದ್ರೆಯಿಂದ ಎಚ್ಚೆತ್ತು ಚಾ ಕುಡಿದ ಅನಂತರ ಗಾರ್ಡರು ಹೇಳಿದರು -"ರೈಗಳೇ, ನಾಳೆ ನಾಡಿದ್ದರಲ್ಲಿ ಬೇಟೆಯೊಂದಾ ಗದೆ ನಿರ್ವಾಹವೇ ಇಲ್ಲ. ನಮ್ಮ ಡಿ. ಎಫ್. ಓ. ಬರುವುದಾಗಿ ಹೇಳಿದ್ದಾರೆ. ಅವರಿಗೆ ಸೊಗಸಾದ ಸಮ್ಮಾನ ಮಾಡದಿದ್ದರೆ ನನಗೆ ಉಳಿಗಾಲವಿಲ್ಲ. ನನಗೂ ಕೆಲವು ದಿನದಿಂದ ಕಾಡುಮೃಗದ ಮಾಂಸವಿಲ್ಲದೆ ನಾಲಿಗೆಯೇ ಮುರುಟು ಕಟ್ಟಿದಂತಾಗಿದೆ. ಶರೀರದ ಚುರುಕೇ ಕುಂದಿದೆ. ನೀವು ಹೊರಡದಿದ್ದರೆ ಯಾರೂ ಬೇಟೆಗೆ ಬರುವುದಿಲ್ಲ. ಬೇಟೆಯ ಏರ್ಪಾಡು ನಾಳೆನಾಡದಿನಲ್ಲಿ ಮಾಡಲೇಬೇಕು." ಹೀಗೆ ಬಲವಾದ ಒತ್ತಾಯವನ್ನೇ ಮಾಡಿದರು. ನನಗೂ ಬೇಟೆಯಲ್ಲಿ ತೊಡಗುವ ಲವಲವಿಕೆ, ಉತ್ಸುಕತೆಯು ಧಾರಾಳವಿತ್ತು. ಬೇಸಾಯವೂ ಮುಗಿಯುತ್ತಾ ಬಂದಿತ್ತು. ಒಳ್ಳೆಯ ಬೇಟೆಯಾದರೆ ಕೆಲಸದಾಳುಗಳಿಗೂ ಒಂದು ಮಧ್ಯಾಹ್ನದ ಮಾಂಸದೂಟ ಕೊಡಬಹುದು. ಹಾಗೆ ಅವರನ್ನು ಸತ್ಕರಿಸಿದರೆ ಮುಂದಿನ ಕೆಲಸಕ್ಕೆ ಕರೆಯದೆಯೇ ಕೆಲಸ ದಾಳುಗಳು ನಾನು ತಾನೆಂದು ನನ್ನ ಕೆಲಸಕ್ಕೆ ಬರುವುದು ಖಂಡಿತ. ಬೇಟೆಯ ಈ ಸೂಚನೆಗೆ ಅಲ್ಲಿದ್ದ ಕೆಲವು ಕೆಲಸದಾಳುಗಳು ಪ್ರೋತ್ಸಾಹ ಕೊಟ್ಟುದ ರಿಂದ ಮರುದಿನ ಬಂಗಾಡಿಯಲ್ಲಿ ಬೇಟೆಯಾರಂಭಿಸಿ ನಾವೂರಲ್ಲಿ ನಿಲ್ಲಿಸುವು ದೆಂದು ನಿರ್ಣಯ ಮಾಡಿದೆವು. ಆ ಕಾಲದಲ್ಲಿ ಸಾಮರ್ಥ್ಯವಂತನಿಗೆ ಒಂದು ಪರವಾನಿಗೆಯ ಕೋವಿಯಿದ್ದರೆ ಹತ್ತು ಪಾರ್ ಲೈಸನ್ಸಿನ ಕೋವಿಯಿಟ್ಟು ಕೊಳ್ಳಲೂ ಎಡೆಯಿತ್ತು. ಅಂತೆಯೇ ನಾನೂ ಇದಕ್ಕೆ ಹೊರತಾಗಿರಲಿಲ್ಲ. 7–8 ಲೈಸನ್ಸ್ ಇಲ್ಲದ ಕೋವಿಗಳ ಒಡೆಯನು ನಾನೂ ಆಗಿದ್ದೆ. ನೆರೆಯ ಪೋಲೀಸರಿಗೆ ಆ ಕಾಲದಲ್ಲಿ ಬೇಕಾದಾಗ ಕಾಡುಮಾಂಸ ಸರಬರಾಜು

ಮಾಡುವುದರಲ್ಲಿ ನಾನೇ ಮೊದಲಿಗ. ಮರದ ತೂಬಿನಲ್ಲಿ ಮರೆಸಿಟ್ಟಿದ್ದ ಕೋವಿಗಳನ್ನು ತರಿಸಿ ತೊಳೆದು, ಸಂದುಗೊಂದುಗಳಿಗೆ ಎಣ್ಣೆಕೊಟ್ಟು ಮದ್ದು ತುಂಬಿಸಿ ಸಿದ್ಧತೆ ನಡೆಸಿದೆ. ಆ ಊರ ಬೋಂಟ್ರ ಜಿನ್ನಪ್ಪ ಪೂಜಾರಿಯಲ್ಲಿ ಹೇಳಿ ಕಳುಹಿಸಿ ಮರುದಿನ ಬಂಗಾಡಿಯಲ್ಲಿ ಬೇಟೆಗಾರರು ಸೇರುವ ವಿಷಯ ವನ್ನು ತಿಳಿಸಿಯಾಯಿತು.

ಮರುದಿನ ಗಂಜಿಯೂಟ, ಚಾ ಮುಗಿಸಿ ಬುತ್ತಿ ಕಟ್ಟಿಸಿಕೊಂಡು, ಕಾಡು ಹೊಡೆಯುವವರನ್ನೂ ಬೇಟೆಯ ನಾಯಿಗಳನ್ನೂ ಜಮಾಯಿಸಿ ನಾವೂರು ಬೇಟೆಗಾರರೊಂದಿಗೆ ಬಂಗಾಡಿ ಪೇಟೆಯ ಇಂದಬೆಟ್ಟಿನ ತಳಕ್ಕೆ ಹೋಗಿ ಸೇರುವಾಗ ಬೇಟೆಗೆ ನಮ್ಮಿಂದ ಮೊದಲೇ ಸಜ್ಜಾಗಿ ಬಂದ ಆವೂರ ಬೇಟೆಗಾರರೊಂದಿಗೆ ನಮಸ್ಕಾರ ಪ್ರತಿನಮಸ್ಕಾರಗಳಾದವು. ಈಂದೊಟ್ಟು ಕಾಡನ್ನು ಮೊದಲಲ್ಲಿ ಸೋವುವುದೆಂದು ನಿರ್ಣಯಿಸಿದೆವು. ಆವೂರ ಬೋಂಟ್ರ, ತುಕ್ರ ಪೂಜಾರಿ ಮಾಡಿದ ವ್ಯವಸ್ಥೆಯಂತೆ ಗಂಡಿಗಳಲ್ಲಿ ಯೋಗ್ಯ ಈಡುಗಾರರನ್ನು ನಿಲ್ಲಿಸಿದ್ದಾಯಿತು. ಕಾಡುಸೋವ ಜನರು ಬಿಲ್ಲು, ಬಾಣ, ದೊಣ್ಣೆ, ಕತ್ತಿಗಳನ್ನು ಹಿಡಿದು ನಾಯಿಗಳೊಂದಿಗೆ ಬರವಿನಲ್ಲಿ ನಿಂತವರ ಎದುರುಗಡೆಯಿಂದ ಹೋಗಿ ಕಾಡುಸೋವ ಧ್ವನಿ ಕೇಳಿದೊಡನೆಯೇ ನೂರಾರು ಕಂಠಗಳಿಂದ ಒಮ್ಮೆಲೇ "ಕೂ, ಕೂ, ಹಿಡಿ, ಕಡಿ, ಬಡಿ, ಹೊಡಿ" ಎಂಬ ಶಬ್ದ ಹೊಮ್ಮಿತು. ಎದುರು ನಿಂತ ನಮ್ಮ ಮೈಯೆಲ್ಲ ಕಣ್ಣಾಗಿ, ಸರ್ವಾಂಗವೂ ಕಿವಿಯಾಗಿ ಆಲಿಸಿದೆವು. ತದೇಕಚಿತ್ತದಿಂದ ಇಹದ ಪರಿ ಜ್ಞಾನವೇ ಇಲ್ಲದೆ ಎದುರು ನೋಡುವ ಮೌನಿಯಂತೆ ಮೂಗುವಟ್ಟು ಮರದ ಮರೆಯನ್ನು ಆಶ್ರಯಿಸಿ ನಿಂತು ಮುಂದಕ್ಕೆ ಗಮನವಿರಿಸಿದೆ. "ಓ ಹಂದಿ ಓಡಿತು ಮುಂದೆ. ಹಿಂದಿರುಗ ಬಿಡಬೇಡಿ. ಬೊಳ್ಳು, ಕಾಳು, ಪತ್ತಿ, ತುಚ್ಚಿ" ಎಂಬ ಶಬ್ದಗಳೊಂದಿಗೆ ಹತ್ತಾರು ನಾಯಿಗಳ ಕರ್ಣಕರ್ಕಶವಾದ ಬೊಗ ಳಾಟದ ಸದ್ದಿನ ಎಡೆಯಿಂದ ಹಂದಿಯ ಹುಂಕಾರವೂ, ಬೊಬ್ಬೆಯೂ ಕರ್ಣ ಪಟಲವನ್ನು ಇರಿಯುವಂತೆ ಕೇಳಿಬಂತು. ಇನ್ನೇನು, ತಮ್ಮ ಬರವಿಗೇ ಹಂದಿ ಬರುತ್ತದೆ ಎಂಬ ನಿರೀಕ್ಷಣೆಯಿಂದ ಈಡುದಾರರು ತಂತಮ್ಮ ಕೋವಿ ಯನ್ನು ಎದೆಗಾನಿಸಿ ಸಜ್ಜಾಗಿ ಯುದ್ಧ ಸನ್ನದ್ಧ ಯೋಧರಂತೆ ನಿಂತಿರುವುದು ಆಚೀಚೆಯಿಂದ ಕಾಣುತ್ತಿತ್ತು. ನನಗೆ, ನೂರು ಮಾರು ದೂರದಲ್ಲಿ ನಿಂತಿದ್ದ

ಗಾರ್ಡರು ಅವರ ಜೋಡುನಳಿಗೆಯ ಕೋವಿಯನ್ನು ಎದೆಗಾನಿಸಿ ಶಿಸ್ತು ನೋಡುತ್ತಿದ್ದುದು ಕಂಡಿತು.

ಓ, ಅದೇನು ನನ್ನ ಮುಂದಿನಿಂದ ಬರಬರವೆಂದು ಪೊದರನ್ನು ಸೀಳಿ ಕೊಂಡು ಬರುತ್ತಿರುವುದು ? ಒಟ್ಟಿಗೆ ನಾಯಿಗಳ ಬೊಬ್ಬೆಯೂ ಕೇಳುತ್ತಿದೆ. ಓ, ಹತ್ತಿರವೇ ಪೊದೆಯು ಸೀಳುವ ದೃಶ್ಯದೊಂದಿಗೆ ಹದಿನೈದು ಇಪ್ಪತ್ತು ಮಾರು ದೂರ ನನಗೆದುರಾಗಿ ಹಂದಿಯ ಹುಂಕಾರವು ಕೇಳುತ್ತಿದೆ. ಇನ್ನೇನು ಕಂಡಿತು ಹಂದಿಯ ತಲೆ ! ಗುರಿ ಹಿಡಿದು ಸಿದ್ಧವಾಗಿದ್ದ ಕೋವಿಯ ಕುದುರೆಯು ಸ್ವಾಭಾವಿಕವಾಗಿಯೇ ಮೀಟಲ್ಪಟ್ಟು 'ಢಾಂ' ಎಂದಿತು ಕೋವಿ. ಭೂಮಿ ಬಿರಿಯುವಂತಹ ಒಂದು ಕಿರುಚನ್ನು ಕಿರುಚಿ, ಹಂದಿ ಹಾರಿತು. ಅನುಭವಿಯಾದುದರಿಂದ ನಾನು ನಾಲ್ಕು ಮಾರು ಬಲಗಡೆ ಹಾರಿದೆ. ಹಂದಿಯು ನಾನು ಹಿಂದೆ ನಿಂತಿದ್ದ ಮರದಡಿಗೇ ಬಂದು ಒಮ್ಮೆ ಕುಕ್ಕರಿಸಿ ಬಿದ್ದು ನಾಲ್ಕು ಕಾಲನ್ನೂ ಜಾಡಿಸಿ ಕಿವಿಯ ಡಮರು ಒಡೆಯು ವಂತೆ ಘೀಳಿಟ್ಟಿತು. ಕೂಡಲೇ ಇನ್ನೊಂದು ಒಂಟಿ ಗುಂಡಿನ ತೋಟಿ ಯನ್ನಿಟ್ಟು ಹಂದಿಯ ತಲೆಗೆ ಮತ್ತೊಂದು ಗುಂಡನ್ನು ಗುರಿಯಿಟ್ಟು ಹೊಡೆ ದಾಯಿತು. ಹಂದಿಯ ಅಬ್ಬರಕ್ಕೆ ಬೇಟೆನಾಯಿಗಳ ದಂಡೇ ಬಂದು ಮೇಲೆ ಬಿದ್ದವು. ಹಂದಿಯು ಹೊರಳಾಡುತ್ತಿದೆ; ಇನ್ನೊಂದು ಗುಂಡು ಹೊಡೆ ಯೋಣವೆಂದರೆ ಬಿದ್ದ ಹಂದಿಯನ್ನು ನಾಯಿಗಳು ಮುತ್ತಿ ಕಚ್ಚಿ ಎಳೆಯು ತ್ತಿವೆ. ಗುಂಡು ಹಾರಿಸಿದೆನೋ, ಹೊರಳುವ ಹಂದಿಗೆ ತಪ್ಪಿ ನಾಯಿಗೆ ಸಿಕ್ಕಿದರೆ ನಗೆಗೇಡು. ಹಂದಿಯ ಬಾಯ ಕೋರೆಗೆ ಸಿಕ್ಕಿ ನುಜ್ಜಾದ ನಾಯಿಯೊಂದು ಆರ್ತನಾದ ಮಾಡಿ ಆಚೆಗೆ ನೆಗೆದು ವಿಲಿವಿಲಿ ಒದ್ದಾಡಿ ಪ್ರಾಣಬಿಟ್ಟಿತು. ಇಷ್ಟಾಗುವಾಗ ಹಂದಿಯ ಆಟೋಪವೂ ಕುಗ್ಗಿ ಕೈಕಾಲ ಬಡಿತವೂ ಶಾಂತವಾಯಿತು. ಸೋವತರು ಬೊಬ್ಬೆಯಾರ್ಭಟೆಯಿಂದ ಕೂಡಿ ಹತ್ತಿರ ಬಂದರು. ನನ್ನ ಹೊಗಳು ಭಟರು ನನ್ನ ಮೇಲೆ ಹೊಗ ಳಿಕೆಯ ಮಳೆ ಕರೆದರು.

'ಇಂದು ಮಾಂಸದೌತಣವೆಂದು' ಗಾರ್ಡರ ಮೊಗವು ಮಂದಹಾಸ ದಿಂದ ಮಿನುಗಿತು. ಹೊತ್ತು ಸುಮಾರು ಹನ್ನೆರಡೂವರೆ ಘಂಟೆ. ಹಂದಿಯು ಎಂಟು ಹತ್ತು ಜನ ಥಾಂಡಿಗರು ಹೊರುವಷ್ಟು ದೊಡ್ಡ ಒಂಟಿಗ.

ಸೋವತರಿಗೂ, ಬೇಟೆಗಾರರಿಗೂ ಆದ ಸಂತೋಷವು ಆಳತೆಗೆ ಮೀರಿದ್ದು. ಮೂರು ನಾಲ್ಕು ವಾರಗಳು ಬಾಡದ ರುಚಿಯನ್ನು ಮರೆತ ಮಾಂಸಾಹಾರಿಗಳಿಗೇ ಇಂತಹ ಆನಂದವನ್ನು ಅನುಭವಿಸಲು ಸಾಧ್ಯ. ಸೋವತರೆಲ್ಲಾ ಹಂದಿ ಬಿದ್ದಲ್ಲಿ ಬಂದು ಅದರ ಪ್ರಾಯ, ಹಿಂದೆ ಅದಕ್ಕೆ ಬಿದ್ದ ಗುಂಡುಗಳ ಗಾಯಗಳನ್ನೆಲ್ಲಾ ಪರಿಶೀಲಿಸಿ ಅದರ ಬೆನ್ನಿನ ರೋಮವನ್ನು ಕಿತ್ತು ಸೂಡಿಕಟ್ಟಿ ನನಗೆ ಅರ್ಪಿಸಿ ಅದು ನನ್ನ ಸಾಹಸದ ಫಲವೆಂದು ನನಗೆ ಅದರ ಮೇಲಿನ ಒಡೆತನವನ್ನು ಒಪ್ಪಿಕೊಟ್ಟು ಬೋಂಟ್ರನ ಹೆಗಲಿನ ಎಲವಸ್ತ್ರವನ್ನು ಅದಕ್ಕೆ ಹೊದಿಸಿ ಬಲ್ಲೆಯ ಎಡೆಯಲ್ಲಿ ಅದನ್ನು ಮರೆಯಾಗಿರಿಸಿ ಮುಂದಿನ ಕೆಲಸದ ವ್ಯವಸ್ಥೆಯನ್ನು ನಿರ್ಧರಿಸಲು ಕುಳಿತರು. ಹೀಗಾಗುವಾಗ ಗಂಟೆ ಒಂದಕ್ಕೆ ಹತ್ತಿರವಾಗಿತ್ತು.

ನೆರೆಯಲ್ಲಿಯೇ ನೀರಿರುವುದರಿಂದ ಬುತ್ತಿಯೂಟವನ್ನು ಮುಗಿಸಿಯೇ ಮುಂದಿನ ವಿಚಾರವೆಂಬ ತೀರ್ಮಾನವಾಗಿ ಬುತ್ತಿಯನ್ನು ಬಿಚ್ಚಲು ಎಲ್ಲರೂ ತಯಾರಾದರು. ಬೇಟೆಯ ಕಾಲದಲ್ಲಿ ಬುತ್ತಿಯೂಟವೆಂದರೆ ಆ ರುಚಿಯನ್ನು ಬಲ್ಲವನೇ ಬಲ್ಲ. ಅದರಲ್ಲಿ ಇರುವ ಖಾದ್ಯಗಳೋ, ಉಳಿದ ದಿನಗಳಲ್ಲಿ ಲೆಕ್ಕಕ್ಕೇ ಹಿಡಿಯುವುದಲ್ಲ. ನಾಲ್ಕು ಹಿಡಿ, ಮೊಸರೋ ಮಜ್ಜಿಗೆಯಲ್ಲಿಯೋ ಉಪ್ಪು ಎಳೆಮೆಣಸು ಹಾಕಿ ಕಲಸಿದ ಅನ್ನ, ಬಾಡಿಸಿದ ಬಾಳೆಎಲೆಯಲ್ಲಿ ಕಟ್ಟಿ ಅನ್ನದ ಮಧ್ಯದಲ್ಲಿ ತುರುಕಿಸಿಟ್ಟ ನಿಂಬೆಯೋ, ಮಾವಿನಕಾಯಿಯದೋ ಒಂದು ಚೂರು ಉಪ್ಪಿನಕಾಯಿ ನೆಂಜಿಕೊಳ್ಳಲು. ಮಿಕ್ಕಿದರೆ ಕೆಂಡಕ್ಕಿಕ್ಕಿ ಕರಿದ ಒಂದೆರಡು ತುಂಡು ಬಂಗುಡೆ, ಬಲ್ಲಿಕ್ಯಾರು ಮೀನಿನ ತುಂಡು. ಕುಡಿಯಲು ಝುರಿಯ ನೀರು! ಹೆಗಲ ಮೇಲಿನ ಕೋವಿಯನ್ನು ಮರಕ್ಕಾನಿಸಿ, ಜೋತಾಡುವ ಮದ್ದು ಗುಂಡುಗಳ ಚೀಲದಲ್ಲಿ ಇಟ್ಟಿರುವ ಬುತ್ತಿಯ ಗಂಟನ್ನು ತೆಗೆದು, ಚೀಲವನ್ನು ಮರಕ್ಕೆ ತೂಗು ಹಾಕಿ, ತಲೆಯ ಫೆಲ್ಟ್ ಹೇಟನ್ನು ಕಲ್ಲಿನ ತಲೆಗಿರಿಸಿ, ಸೊಂಟದ ತೋಟೆ ತುಂಬಿರುವ ಬೆಲ್ಟನ್ನು ಬದಿಗಿರಿಸಿ, ಮುಖ ಕೈಕಾಲಿಗೆ ನೀರು ತೋರಿಸಿ ಮಾಡುವ ಆ ಬುತ್ತಿಯೂಟದ ಎದುರಿಗೆ 'ಐದು ನಕ್ಷತ್ರಗಳ ಹೋಟೆಲಿನ' ಊಟವನ್ನು ನಿವಾಳಿಸಿ ಒಗೆಯಬೇಕು! ಇದು ಅನುಭವವೇದ್ಯವೇ ವಿನಾ ವಿವರಣೆಗೆ ನಿಲುಕುವಂಥದಲ್ಲ. ಅಂತೂ ಊಟವು ಮುಗಿದು ಮುಂದಿನ ಕಾಡುಸೋವ ವಿಚಾರಕ್ಕೆ ಬರಬೇಕಾಯಿತು.

ಬೀಡಿ ಸಿಗರೇಟಿನ ಭಕ್ತರು ಅದರ ಸೇವನೆಯನ್ನು ಮುಗಿಸಿದರು. ಎಲೆ ಅಡಿಕೆಯ ಸರದಿಯೂ ಮುಗಿಯಿತು. ಮುಂದೆ ನಾವೂರ ಪಲ್ಕೆಯನ್ನು ಸೋವುವುದೆಂದು ನಿರ್ಧರಿಸಿಯಾಯಿತು. ನಾವೂರ ಬೋಂಟ್ರ ಜಿನ್ನಪ್ಪ ಪೂಜಾರಿಯು ಗುರಿಕಾರರನ್ನು ಗಂಡಿಯಲ್ಲಿ ನಿಲ್ಲಿಸಲು ಕರಕೊಂಡು ಹೋಗಲು ತಯಾರಾಗಿ ನಿಂತು, ನಾನೂ ಗಾರ್ಡರೂ ಮೇರಮುದ್ದ ಗಂಡಿಯಲ್ಲಿ ನಿಲ್ಲಬೇಕೆಂದು ತಿಳಿಸಿದನು. ನಾವೂರಲ್ಲಿ ಯಾರು ಯಾವ ಕಾಡನ್ನೇ ಸೋವಲಿ ತಪ್ಪಿಸಿಕೊಂಡ ಮೃಗಗಳೂ, ಪೆಟ್ಟು ತಿಂದು ಓಡುವ ಮೃಗಗಳೂ ಕುದುರೆಮುಖ ಬೆಟ್ಟದ ಆಶ್ರಯವನ್ನು ಪಡೆದು ವಿಶ್ರಾಂತಿ ಪಡೆಯಬೇಕಿದ್ದರೆ ಮೇರಮುದ್ದ ಗಂಡಿಯನ್ನು ದಾಟಿಯೇ ಹೋಗಬೇಕು. ಇಲ್ಲಿ ನಿಲ್ಲುವ ಈಡುಗಾರನು ಅತಿ ಬುದ್ಧಿವಂತನೂ, ಜಾಗರೂಕನೂ ಆಗಿರಬೇಕು. ಹೆದರಿದ, ಪೆಟ್ಟಾದ ಮೃಗಗಳೂ ಇಲ್ಲಿಗೆ ಬರುವಾಗ ನಾಗಾಲೋಟದಿಂದಲೇ ಬರುತ್ತವೆ. ಕೆಲವೊಮ್ಮೆ ಅರೆಪೆಟ್ಟಾದ ಮೃಗಗಳೂ ಇಲ್ಲಿ ಬರುವಾಗ ವಿಪರೀತ ಆಯಾಸ ಗೊಂಡು ಅನಾಯಾಸವಾಗಿ ಬೇಟೆಗಾರರ ಕೈಗೆ ಸಿಗುವುದೂ ಇದೆ. ಗಾರ್ಡರು ಕಾಡಿನ ಒಡೆಯನೆಂದೂ, ನಾನು ಉತ್ತಮ ಶಿಕಾರಿ ಎಂದೂ ಜಿನ್ನಪ್ಪ ಪೂಜಾರಿಯು ನಮ್ಮಿಬ್ಬರನ್ನು ಇಲ್ಲಿ ನಿಲ್ಲಲು ನಿಯೋಜಿಸಿದ್ದ.

ಮೇರಮುದ್ದ ಗಂಡಿಗೆ ನಾವಿಬ್ಬರೂ ಬಂದುದಾಯಿತು. ಎಡಬಲ ವನ್ನೊಮ್ಮೆ ನೋಡಿ ನಾನು ಖಾಯಂ ನಿಲ್ಲುವ ಸ್ಥಳದಲ್ಲಿ ಮೊದಲು ನಿಂತು, ಗಾರ್ಡರಿಗೆ ನನ್ನಿಂದ ನೂರು, ನೂರೈವತ್ತು ಮಾರು ದೂರದಲ್ಲಿ ನಿಲ್ಲುವ ಗಂಡಿಯ ತಾವನ್ನು ತೋರಿಸಿದೆ. ಅವರು ಹೊರಡಲು ಕಾಲೆತ್ತುವಾಗ ಬೀಸಿದ ಗಾಳಿಯಿಂದ ದುರ್ವಾಸನೆಯನ್ನು ಗ್ರಹಿಸಿ ನಾನು “ಗಾರ್ಡರೇ, ಹತ್ತಿರದಿಂದ ಏನೋ ದುರ್ವಾಸನೆಯು ಬರುತ್ತಿದೆ” ಎಂದೆ. ಅದಕ್ಕವರು “ನಿನ್ನೆ ಮೊನ್ನೆ ಯಾರೋ ಮಲೆಕುಡಿಯರು ಹೊಡೆದು ಬಿಟ್ಟುಹೋದ ಮುಸುವಿರಬಹುದು” ಎಂದು ಹೇಳಿ ಅವರಿಗೆ ತೋರಿಸಿದ ಗಂಡಿಗೆ ಹೋದರು.

ಎದುರಿಂದ ಸೋವತರ ಬೊಬ್ಬೆಯಾರ್ಭಟೆಗೆ ಆರಂಭವಾಯಿತು. ನನ್ನ ಕೋವಿಯ ಬಲ ನಳಿಗೆಗೆ L. G. ಯನ್ನೂ, ಎಡ ನಳಿಗೆಗೆ ಒಂಟಿ ಗುಂಡನ್ನೂ ತುಂಬಿಸಿ ಎಡಬಲವನ್ನೊಮ್ಮೆ ಪರಿಶೀಲಿಸಿ ಯಾರು ಎಲ್ಲಿ ನಿಂತಿ ದ್ದಾರೆ ಎಂದು ನೋಡಿ ಎದುರುಗಡೆ ದೃಷ್ಟಿ ಬೀರಿ ಮೃಗವು ಬಂದರೆ ಎಲ್ಲಿಗೆ

ಬರುವಾಗ ಈಡಾಗಬೇಕು ಎಂಬುದನ್ನು ನಿರ್ಧರಿಸಿ ಮರದ ಮರೆಯಲ್ಲಿ ಸನ್ನದ್ಧನಾಗಿ ನಿಂತೆ. ಗಾರ್ಡರೂ ತುಂಬು ಉತ್ಸಾಹದಿಂದ ನಿಂತಿರುವುದು ಕಂಡಿತು. ಸಾಧಾರಣ ಬಲಗಡೆ 2–3 ಫರ್ಲಾಂಗು ದೂರದಿಂದ 'ಢಮಾರ್' ಎಂಬ ಈಡಿನ ಶಬ್ದವನ್ನು ಕೇಳಿ ನವೋತ್ಸಾಹದಿಂದ ಈಗ ಮೃಗ ಬರುತ್ತಿದೆ, ಈಗ ಬರುತ್ತಿದೆ ಎಂದು ಕಾತರದಿಂದ ಮುಂದೆ ನೋಡತೊಡಗಿದೆ. ಬಹು ದೂರದಿಂದ ಏನೋ ಬರುವ ಸದ್ದು ಅಹುದೋ, ಅಲ್ಲವೋ ಎಂಬಂತೆ ಕೇಳಿ ಬರುತ್ತಿದೆ. ಹತ್ತಿರ ಬರುವುದು ಕಾಣುವುದಿಲ್ಲ. ಬಜಕ್ಕುರೆ ಹಕ್ಕಿಯಾಗಿರ ಬಹುದು ! ಎಂದು ಸಮಾಧಾನಪಟ್ಟುಕೊಂಡು ಎದುರುಗಡೆಯಲ್ಲಿ ನನ್ನಿಂದ ಸುಮಾರು ನಾನ್ನೂರು, ಐನೂರು ಮಾರು ದೂರದಲ್ಲಿರುವ ಬಂಡೆಯತ್ತ ಕಡೆ ನೋಡುತ್ತೇನೆ - ಒಮ್ಮೆ ನನ್ನ ಶ್ವಾಸವೇ ನಿಂತಂತಾಯಿತು ! ಹಚ್ಚ ಹಳದಿ ಬಣ್ಣ, ನೀಳವಾದ ಕಪ್ಪು ಪಟ್ಟಿ, ಮುಡಿಗಾತ್ರದ ಮಂಡೆಯ ಅಡ್ಡ ಬಲಿಪ ! ತನ್ನ ಕೆನ್ನಾಲಗೆಯನ್ನು ಹೊರಚಾಚಿ ದೇಹದ ಬಲಭಾಗವನ್ನು ನೆಕ್ಕುತ್ತಿದೆ. ಒಮ್ಮೆ ಕಾಲೇ ಕುಸಿಯುವಂತಾಯಿತು. ಹಾಗೆ ಹೆದರಿ ಕಂಗೆಟ್ಟರೆ ನನ್ನ ಹೆಸರಿಗೇ ಅವಮಾನವೆಂದು ಭಾವಿಸಿ ಚೇತರಿಸಿಕೊಂಡು ಮತ್ತೆ ಆ ಕಡೆಗೆ ನೋಡಿದೆ. ಅಡ್ಡಬಲಿಪ ಗಂಭೀರವಾಗಿ ಇಳಿದು ಗಾರ್ಡ ರಿದ್ದ ಗಂಡಿಯತ್ತ ನಡೆಯುವ ಹವಣಿಕೆಯಲ್ಲಿದ್ದುದು ಕಂಡುಬಂತು. ಬಲಿಪ ನೆಂಬ ಸೋವು ತಿಳಿದರೆ ಸಾಕು; ಪ್ರಾಣಭೀತಿಯಿಂದ ತಲ್ಲಣಗೊಳ್ಳುವ ಗಾರ್ಡರಿಂದ ಈಡು ಹೊಡೆಯುವ ಕೆಲಸ ಖಂಡಿತವಾಗಿಯೂ ಆಗದೆಂದು ಅರಿತ ನಾನು ಅದು ಇಳಿಯುವ ಅಂದಾಜು ಮಾಡುವಾಗ ಮೆಲ್ಲನೆಂದೆ - "ಬುಡ್ಡಿ ಬರುತ್ತಿದೆ, ಗಾರ್ಡರೇ ಬಿಡಬೇಡಿ" ಎಂದು ! 'ಬುಡ್ಡಿ' ಎಂದರೆ ಹೆಣ್ಣು ಕಡವೆ, ಕೊಂಬು ಇಲ್ಲದ್ದು ಎಂದರ್ಥ. ಪಟ್ಟೆ ಹುಲಿಯು ಅಲ್ಲಿಂದ ಇಣಿಲು ಬಲ್ಲೆಯ ಎಡೆಯಲ್ಲಿ ಇವರಿಗೆ ಕಾಣದು. ಬಲ್ಲೆಯನ್ನು ಬಗಿದು ಕೊಂಡು ಬರುವ, ಬಲ್ಲೆಯ ಸೀಳನ್ನು ಅರಿತು ಅಂದಾಜಿನಿಂದ ಅವರು ಹೊಡೆಯಬೇಕು. ಹೆದರದಿದ್ದರೆ ಗಾರ್ಡರೇನೂ ಫಡಪೋಷಿ ಈಡುಗಾರ ರಲ್ಲ. 'ಅವರು ಹುಲಿಯನ್ನು ಹೊಡೆಯದೆ ಬಿಡಬಾರದು. ಕಡವೆಯ ಕೊಂಬನ್ನು ಕಂಡು ಅಂದಾಜು ಮಾಡುವುದು ಬೇಡ; ಹೆಣ್ಣು ಕಡವೆಯೆಂದೇ ಭಾವಿಸಿ, ಆ ಅಂದಾಜಿನಿಂದಲೇ ಹೊಡೆಯಲಿ' ಎಂದು ನಾನು ಅವರಿಗೆ

ಹಾಗೆ ಹೇಳಿದ್ದು. ಹುಲಿಯೂ ಸಾಧಾರಣ ಅಷ್ಟೇ ಎತ್ತರವಿತ್ತು. ಗಾರ್ಡರು ಕೋವಿಯನ್ನು ಎದೆಗೆ ಹಾಕಿ ಒಕ್ಕಣ್ಣಿನಿಂದ ಶಿಸ್ತು ನೋಡುತ್ತಿದ್ದಾರೆ. ತರಗೆಲೆಯ ಪರಪರ ಸದ್ದು, ಬಲ್ಲೆ ಬಗಿಯುವ ಶಬ್ದ ನನಗೂ ಕೇಳುತ್ತಿದೆ. ಢಂ, ಢಮ್ಮೆಂದು ಆಯಿತು ಈಡು. ನೆಲ ಬಿರಿಯುವಂತಹ ಒಂದು ಆರ್ಭಟೆಯಾಗಿ ಸೋವತರ ಬೊಬ್ಬೆ ಇರಲಿ, ಗಾಳಿಯ ಸದ್ದೂ ನಿಂತಂತಾಯಿತು! ನೆರೆಯಲ್ಲಿ ಕೋವಿಯವರು ಮರ ಹತ್ತುವ ಭರದಲ್ಲಿ ಮರದಿಂದ ಜಾರಿ ಬೀಳುವುದು ಕಾಣುತ್ತಿತ್ತು. ಗಾರ್ಡರ "ಓ ರೈಲೇ, ಆಂಡ್" (ಓ, ರೈಗಳೇ ಆಯಿತು) ಎಂಬ ಆರ್ತನಾದವು ಕೇಳಿಬಂದು ಅತ್ತ ನೋಡುತ್ತೇನೆ - ಗಾರ್ಡರ ತಲೆಯ ಮೇಲೆ ನೆಗೆದ ಪಟ್ಟೆಹುಲಿಯು ತೆವಳುತ್ತಾ ಹೊಟ್ಟೆ ಎಳೆದುಕೊಂಡು ಮುಂದೆ ಹೋಗುತ್ತಿದೆ! ರಕ್ತಸ್ನಾನದಿಂದ ದೇಹವಿಡೀ ನೆನೆದು ಕೆಂಪಾಗಿ, ನೆಲದ ಮೇಲೆ ಹೆಣದಂತೆ ಅಲುಗಾಡದೆ ಬಿದ್ದ ಗಾರ್ಡರ ದೇಹವು ಕಾಣಿಸುತ್ತಿದೆ. ಬದಿಯಲ್ಲಿ ಅನಾಥವಾಗಿ ಕೋವಿ ಉರುಳಿದೆ. ಒಮ್ಮೆ ದಿಗ್ಭ್ರಮೆಗೊಂಡು ಮೂಗನಂತಾದ ನಾನು ಒಡನೆ ಗಾರ್ಡರು ಬಿದ್ದತ್ತ ಧಾವಿಸಿದೆ. ಪೆಟ್ಟಾದ ಹುಲಿಯು ಗಾರ್ಡರು ಬಿದ್ದಲ್ಲಿಂದ ಹದಿನೈದು ಮಾರು ದೂರದಲ್ಲಿ ಹೊರಳಾಡುತ್ತಿದೆ. ಹೊರಳುವ ಹುಲಿಗೆ ಅದರ ಜೀವ ಹೋಗಲೆಂದೇ – ಒಂದು ಈಡು ಹೊಡೆದೆ. ಹುಲಿಯ ಹೊರಳಾಟವು ನಿಂತಿತು.

ಹೋಗಿ, ಗಾರ್ಡರನ್ನು ಕೈಹಿಡಿದು ಎಬ್ಬಿಸಲು ಪ್ರಯತ್ನಿಸಿದೆ. ಊಹುಂ, ಅಲ್ಲಾಡುವುದೇ ಇಲ್ಲ. ಮೂಗಿಗೆ ಕೈಹಿಡಿದು ನೋಡುತ್ತೇನೆ. ಮೂಗಿನಿಂದ ಗಾಳಿ ಹೊರಡುವ ಲಕ್ಷಣವೇ ಕಾಣುತ್ತಿಲ್ಲ. 'ಗಾರ್ಡರ ಅವಸ್ಥೆ ಮುಗಿಯಿತು. ಇನ್ನು ಹುಲಿಯ ಏಟು ಗಾರ್ಡರ ಮೈಗೆ ಎಲ್ಲಿಗೆ ಬಿದ್ದಿದೆ ಎಂದು ನೋಡೋಣ' ಎಂದು ಶರೀರವಿಡೀ ರಕ್ತಸ್ನಾನವಾದ ಗಾರ್ಡರ ದೇಹವನ್ನು ಪರಿಶೀಲಿಸಿದೆ. ಹುಲಿಯ ಹಲ್ಲು ಎಲ್ಲಿ ಊರಿದೆ, ಉಗುರು ಎಲ್ಲಿ ಗೀರಿದೆ ಎಂದು ಗಡಿಬಿಡಿಯ ಪರಮಾವಧಿಯಲ್ಲಿದ್ದ ನನಗೆ ಅರಿಯುವುದೇ ಅಸಾಧ್ಯವಾಯಿತು. ಮನುಷ್ಯನ ಬೊಬ್ಬೆ ಹುಲಿಯ ಆರ್ಭಟೆಯನ್ನು ಕೇಳಿದ ಸೋವತರಲ್ಲಿ ಮುಕ್ಕಾಲು ಪಾಲು ಜನರು ಅಲ್ಲಿಂದಲೇ ಕಾಲ್ಕಿತ್ತಿರಬೇಕು. ನನ್ನ ಹಂಗಿಗರು ದೂರ ದೂರವಿರುವುದರಿಂದ ಅವರು ಬರಲು

ಸ್ವಲ್ಪ ಹೊತ್ತಾಗಬಹುದು. ಹತ್ತಿರ ಯಾರಾದರೂ ಇರುವರೇ ಎಂದು ದಿಟ್ಟ ಹಾಯಿಸಿದೆ. ಬಂಗಾಡಿಯ ಬೇಟೆಗಾರ ಚೀಂಕ್ರ ಪೂಜಾರಿಯು ಇನ್ನೂ ಐದು ಮಾರು ಮರವೇರಿ ಮೂರು ಮಾರು ಕೆಳಗೆ ಜಾರುವ ಸಾಹಸ ದಲ್ಲಿ ಇದ್ದಾನೆಯೇ ಹೊರತು, ನಮ್ಮ ಸಹಾಯಕ್ಕೆ ಬರುವಂತೆ ತೋರಲಿಲ್ಲ? ಇದನ್ನು ಕಂಡ ನಾನು ಈ ಪರಿಸ್ಥಿತಿಯಲ್ಲಿಯೂ ಚೇತರಿಸಿಕೊಂಡು "ಚೀಂಕ್ರಾ ಬಾ, ಇಲ್ಲಿ" ಎಂದು ಗರ್ಜಿಸಿದೆ. ತಾನು ಮಾಡುವ ಹೇಡಿತನದ ಕೆಲಸಕ್ಕೆ ಹೇಸಿ ಗಡಗಡನೆ ನಡುಗುತ್ತಾ ನಮ್ಮೆಡೆಗೆ ಬಂದ. ಗಾರ್ಡ್‌ರ ಚಲನಾರಹಿತ ಶರೀರವು ಅಂಗಾತ ಬಿದ್ದಿದೆ. ಏನಾಗಿದೆ ಎಂದು ನೋಡಬೇಕಷ್ಟೆ? ಬಳಿಯಲ್ಲಿ ನೀರಿನ ಝುರಿಯಿದೆ. ಆದರೆ ನೀರು ತರುವುದು ಹೇಗೆ? ಸಾಧನವಾವುದು? ಪಕ್ಕನೆ ನೆನಪಾಯಿತು. ನನ್ನ ಫೆಲ್ಟ್‌ಹೇಟನ್ನೇ ಪಾತ್ರೆಯಾಗಿ ಮಾಡಿ ಕೊಂಡು, ಅತ್ಯವಸರದಿಂದ ಓಡೋಡಿ ಗಾರ್ಡ್‌ರ ತಲೆ, ಮುಖಕ್ಕೆ ನೀರು ಚಿಮುಕಿಸಿ, ಸ್ವಚ್ಛಗೊಳಿಸಿ ಪರಿಶೀಲಿಸಿದೆ. ಕತ್ತಿನಿಂದ ಮೇಲೆ ಎಲ್ಲಿಯೂ ಗಾಯವಾಗಿಲ್ಲ. ಇಷ್ಟಾಗುವಾಗ ಗಾರ್ಡ್‌ರಲ್ಲಿ ಸ್ವಲ್ಪ ಉಸಿರಾಡುವ ಲಕ್ಷಣವೂ ಕಂಡುಬಂತು. ಕುಡಿಯಲು ಬೇಕಾದಷ್ಟು ನೀರನ್ನು ನಾನೂ ಚೀಂಕ್ರ ಪೂಜಾರಿಯೂ ಪ್ರಯತ್ನಿಸಿ ಸುರಿದೆವು. ಇಷ್ಟರಲ್ಲಿ ನನ್ನ ಕೂಡುಕಟ್ಟಿನ ಕೆಲವು ಸೋವತರೂ, ಕೋವಿಯವರೂ ನಾವಿದ್ದ ಕಡೆಗೆ ಅತಿ ಮೆಲ್ಲನೆ ಬರು ತ್ತಿರುವುದು ಕಂಡು ನೆಮ್ಮದಿಯ ಉಸಿರನ್ನು ಎಳೆದೆ. 'ಹೆಣ ಹೊರುವ ಕೆಲಸವಾದರೂ ಉಳಿಯಿತಲ್ಲಾ' ಎಂಬ ನಿರ್ಧಾರಕ್ಕೆ ಬಂದು, ಅವರನ್ನು ಬೇಗಬೇಗನೆ ಬರುವಂತೆ ಕೈಸನ್ನೆಯಿಂದ ಕರೆದುದಾಯಿತು. ಅವರ ಧನಿ ಯಾದ ನನ್ನ ಸನ್ನೆಗೆ ಪ್ರತಿಕ್ರಿಯೆಯಾಗಿ ಅವರು ಓಡಿಬಾರದೆ ನಿರ್ವಾಹವಿರ ಲಿಲ್ಲ. ಬಂದ ಆಳುಗಳ ಸಹಾಯದಿಂದ ಗಾರ್ಡ್‌ರ ಯೂನಿಫಾರ್ಮನ್ನು ಬಿಚ್ಚಿಸಿ ಗಾಯವೆಲ್ಲಾಗಿದೆ ಎಂದು ಪರಿಶೀಲಿಸಲು ಆದೇಶಿಸಿದೆ.

'ಮುಟ್ಟಪ್ಪಾಳೆಯಿದ್ದವರು ಅದರಲ್ಲಿಯೂ, ಇಲ್ಲದವರು ನನ್ನ ಹ್ಯಾಟಿ ನಲ್ಲೂ ನೀರು ತನ್ನಿ' ಎಂದು ಹೇಳಿ ಗಾರ್ಡ್‌ರ ಅಂಗಿಯ ಗುಂಡಿಗಳನ್ನು ಬಿಚ್ಚಲು ಹೋಗುತ್ತೇನೆ, ಅಯ್ಯೋ, ತಡೆಯಲು ಅಸಾಧ್ಯವಾದ ವಾಸನೆ! ಏನೆಂದು ಗಮನಿಸಿದಾಗ ಹೆದರಿದ್ದ ಗಾರ್ಡ್‌ರು ಮಲಮೂತ್ರಗಳನ್ನು ವಿಸರ್ಜಿಸಿ ಕೊಂಡದ್ದು ಅವರ ಚಡ್ಡಿಯ ಎಡೆಯಿಂದ ರಕ್ತ ಮಿಶ್ರಿತವಾಗಿ ಹೊರಗೆ

ಬಂದಿದೆ ! ಗಾರ್ಡರ ಉಡುಪನ್ನು ಕಳಚುವಂತೆ ಮಲೆಕುಡಿಯ ಅಮ್ಮುಗೆ ಸ್ವಲ್ಪ ದರ್ಪದಿಂದಲೇ ತಾಕೀತು ಮಾಡಿದೆ. ಅವನೂ ನನ್ನಂತೆಯೇ ಮನುಷ್ಯನಲ್ಲವೇ ? ಅವನಿಗೂ ಮೂಗಿಲ್ಲವೇ ? ಆದರೆ ಪಾಪ, ಆತನು ಬಡ ಮಲೆಕುಡಿಯ. ನನ್ನ ಮಾತಿನಂತೆ ನಡೆಯದಿದ್ದರೆ ಮುಂದಿನ ಪರಿಣಾಮದ ಭೀತಿ ! ಅಂತೂ ಕೋಟು ಕಳಚಿಯಾಯಿತು. ಕೋಟೂ ಹರಿದಿಲ್ಲ. ತಲೆಗೂ ಪೆಟ್ಟಿಲ್ಲ - ಎದೆ, ಹೊಟ್ಟೆಗೆ ಗಾಯವಾಗಿಲ್ಲ. ಇದು ಮತ್ತೆಲ್ಲಿಯ ರಕ್ತ ? ಬನಿಯ ನನ್ನೂ ಕಳಚಿದ್ದಾಯಿತು. ಉಹೂಂ, ಹುಲಿಯ ಉಗುರು, ಹಲ್ಲು ಊರಿದ ಚಿಹ್ನೆಯೇ ಇಲ್ಲ. ಮತ್ತೇನಪ್ಪಾ, ಇವರಿಗೆ ಸಿಡಿಲು ಬಡಿಯಿತೇ ? ಚಡ್ಡಿ ಯನ್ನೂ ಕಳಚಿ ಇಡೀ ದೇಹವನ್ನು ತೊಳೆದು ಶುದ್ಧ ಮಾಡಿದುದಾಯಿತು. ಬೀಳುವಾಗ ಆದ ಒಂದು ಕಲ್ಲಿನ ಗೀರಿನ ಗಾಯವಲ್ಲದೆ ಶರೀರದಲ್ಲಿ ಬೇರೆಲ್ಲಿಯೂ ಹುಲಿಯ ಹೊಡೆತದ ಗುರುತೇ ಇಲ್ಲ. ಮತ್ತೇನು ಮಾರಿ ಬಡಿದು ಇವರಿಗೆ ರಕ್ತಾಭಿಷೇಕ, ಬೋಧಹೀನತೆ ಬಂದುದು ? ಎಂದು ಆಲೋಚನೆ ಮಾಡುತ್ತಿರುವಾಗ ಕೈಕಾಲು ಚಾಚಿ ಮಲಗಿದ್ದ ಗಾರ್ಡರಿಂದ ಹೊರಟಿತು ಒಂದು ಗರ್ಜನೆ ! ಹುಲಿಗೆ ಈಡಾಗುವಾಗ ಅದು ಹೊಡೆದು ದಕ್ಕಿಂತಲೂ ಒಂದು ಮಡಿ ಮಿಗಿಲು ! ಸುತ್ತು ಮುತ್ತು ನೆರೆದವರೆಲ್ಲಾ ಬಿದ್ದ ಹುಲಿಯು ಪುನಃ ಎದ್ದಿತೋ ಎಂದು ಭೀತಿಯಿಂದ ಓಡಲು ಹವಣಿಸಿ ದರು. ಅವರನ್ನು ತಡೆದು ನಿಲ್ಲಿಸಿದೆ. ಎಲ್ಲರೂ ಸಾವರಿಸಿಕೊಳ್ಳಬೇಕಾದರೆ ಸ್ವಲ್ಪ ಹೊತ್ತೇ ಬೇಕಾಯಿತು. ಆದರೆ ಹುಲಿಯು ಬಿದ್ದಲ್ಲಿಯೇ ಇತ್ತು. ನಾವು ಕೇಳಿದ್ದು, ಹೆದರಿ ಮೂರ್ಛೆ ಹೋಗಿದ್ದ ಗಾರ್ಡರ ಆರ್ಭಟೆಯೆಂದು ಖಚಿತವಾಯಿತು. ಮತ್ತೆ ಪರಿಶೀಲಿಸಿ ಹುಲಿಯ ಪೆಟ್ಟನ್ನೂ ಗಾರ್ಡರ ಶರೀರವನ್ನೂ ಗಮನಿಸಿದಾಗ ಹೀಗೆ ನಿರ್ಧರಿಸಬೇಕಾಯಿತು.

ಈಡಾದ ಹುಲಿಯು ಅವರ ಮೇಲೆ ನೆಗೆಯಬೇಕೆಂದು ಹವಣಿಸಿ ಕಾಲ್ದೆಗೆಯುವಾಗ ಸ್ವಲ್ಪ ಭರ ಜಾಸ್ತಿಯಾಗಿ ತಲೆಗೆ ಕಾಲಿಡಬೇಕೆಂದು ಬಗೆದುದು ತಪ್ಪಿ ಅದರ ಹೊಟ್ಟೆಯು ಅವರ ನೆತ್ತಿಗಾಯಿತು. ಆ ವೇಳೆಗೆ ಹುಲಿಯ ನೆತ್ತಿಗೆ ತಾಗಿದ್ದ ಗುಂಡು ಹೊಟ್ಟೆಯಿಂದ ಹೊರಬಿದ್ದಿತ್ತು ! ಆ ಗಾಯದಿಂದ ಹೊರಟ ರಕ್ತದಿಂದಲೇ ಗಾರ್ಡರಿಗೆ ರಕ್ತಸ್ನಾನವಾಗಿದೆ. ಈ ಆಘಾತದಿಂದ ಹೆದರಿ ದಿಗ್ಭ್ರಮೆಗೊಂಡ ಗಾರ್ಡರು ಪ್ರಜ್ಞಾಹೀನರಾಗಿದ್ದಾರೆ.

ಹುಲಿ ನೆಗೆದುದರ ಪರಿಣಾಮ ಎಷ್ಟಾಗಿದೆ ಎಂದರೆ, ಅವರ ರೋಮ ರಂಧ್ರ ಗಳಿಗೂ ಭಯ ನುಗ್ಗಿದೆ ಎಂದು ಅವರ ಶರೀರದ ಕಂಪನದಿಂದ ತಿಳಿಯಿತು. ಆದುದರಿಂದಲೇ ಅವರು ನರಳಾಡುವುದು, ಬೊಬ್ಬೆ ಹೊಡೆಯುವುದು ಎಲ್ಲ ಹುಲಿಯಂತೆಯೇ ಎಂಬ ನಿರ್ಧಾರಕ್ಕೆ ಬರಬೇಕಾಯಿತು.

ನೆರೆಮನೆಯಿಂದ ಪಡಿಯನ್ನು ತರಿಸಿ ಅದರಲ್ಲಿ ಬೈಹುಲ್ಲಿನ ಹಾಸಿಗೆ ಯನ್ನು ಹಾಸಿ ಗಾರ್ಡರ ಶರೀರವನ್ನು ಮಲಗಿಸಿ ಅಲ್ಲಿದ್ದವರಿಂದ ನಾವೂರಲ್ಲಿ ರುವ ಅವರ ಬಿಡಾರಕ್ಕೆ ಹೊತ್ತು ತರುವ ವ್ಯವಸ್ಥೆಯನ್ನು ಮಾಡಿದೆ. ಅವರೊಂದಿಗೆ ನಮ್ಮೆಲ್ಲರ ಯಾತ್ರೆಯು ಮುಂದುವರಿಯಿತು. ದಾರಿಯಲ್ಲಿ ಆಗಾಗ ಗಾರ್ಡರ ಗರ್ಜನೆಯು ನಡೆದೇ ಇತ್ತು. ಮನೆಯ ಬಾಗಿಲಿಗೆ ಬರುವಾಗ ಈ ವಿಚಾರಗಳನ್ನು ತಿಳಿದು ಗಾರ್ಡರ ಮನೆಯವರು ಗೈದರೋದನ ಹೃದಯ ವಿದೀರ್ಣವಾಗುವಂಥಾದ್ದು. ಅವರನ್ನು ಸಮಾಧಾನಪಡಿಸ ಬೇಕಾದರೆ ನಾನು ಪಟ್ಟ ಪಾಡು ನನಗೇ ವೇದ್ಯ. ಅಂತೂ ಗಾರ್ಡರಿಗೇನೂ ಪೆಟ್ಟಾಗಿಲ್ಲ, ಹೆದರಿಕೊಂಡದ್ದೆಂದು ಸಮಾಧಾನಪಡಿಸಿ, ನೆರೆಯ ಪಂಬದ ಕರಿಯ ಮಂತ್ರವಾದಿಯನ್ನು ಕರೆಸಿ, ಆತನ ಮೂಲಕ ವಿಭೂತಿ ಮಂತ್ರಿಸಿ ಕುರ್ದಿ, ಎಳನೀರುಗಳಲ್ಲದೆ ಕೋಳಿಯ ತಲೆ ಕ್ರ್ಯೊಸಿ ಅದರ ರಕ್ತವನ್ನೂ ಕುಡಿಸಿ ಬಲಿ ತೆಗೆದುದಾಯಿತು. ಗಾರ್ಡರ ಸ್ಥಿತಿ ಸ್ವಲ್ಪ ಸ್ಥಿಮಿತಕ್ಕೆ ಬಂದು ನಾವು ಸಮಾಧಾನದ ಉಸಿರನ್ನೆಳೆದು ಅಪಾಯದ ಅಂಚಿನಿಂದ ಗಾರ್ಡರು ಪಾರಾದರು ಎಂಬ ನಿರ್ಧಾರಕ್ಕೆ ಬಂದು ನಾವು ಮನೆ ಸೇರುವಾಗ, ಕತ್ತಲೆ ಹರಿದು ಮನೆಯ ಹುಂಜವು 'ಕೊ-ಕ್ಕೊ-ಕ್ಕೋ-ಕೋ' ಎಂದು ಕೆಲೆಯಿತು! ಬರಿಹೊಟ್ಟೆ; ಅಡಿಗೆಯಾಳನ್ನು ಎಬ್ಬಿಸಿ, ಆಹಾರವೊದಗಿಸಲು ತಿಳಿಸಿ, ಸ್ನಾನ ಮಾಡಿ ಊಟಕ್ಕೆ ಕೂತುಕೊಳ್ಳುವಾಗ ನಾಲ್ಕೂ ಮುಕ್ಕಾಲು ಘಂಟೆ. ಈ ಸಂದರ್ಭದಲ್ಲೂ ಮಧ್ಯಾಹ್ನ ಶಿಕಾರಿ ಮಾಡಿದ್ದ ಹಂದಿಯನ್ನು ಉಳಿದವರು ಹದಮಾಡಿ ನಮ್ಮ ಪಾಲಿನ ಮಾಂಸವು ಪಾಕವಾಗಿ ಊಟದ ಹೊತ್ತಿಗೆ ಸಿದ್ಧವಾಗಿತ್ತು.

ಅಂತೂ ಪ್ರಾತಃಕಾಲದಲ್ಲಿ ಕನಸು ನೆನಸಿನ ಮಧ್ಯೆ ಕಿರುನಿದ್ರೆ ಯೊಂದನ್ನು ಮುಗಿಸಿ ಆತುರಾತುರವಾಗಿ ಮುಖ ತೊಳೆದು ಒಕ್ಕಲಿನವರನ್ನು ಕರೆದು ನಾವೂರು ಪಲ್ಕೆಯಲ್ಲಿ ಬಿದ್ದಿದ್ದ ಗಾರ್ಡರಿಂದ ಹೊಡೆಯಲ್ಪಟ್ಟ

ಹುಲಿಯನ್ನು ಬಂಗ್ಲೆಯ ಬಾಗಿಲಿಗೆ ತರುವ ವ್ಯವಸ್ಥೆ ಮಾಡಿಸಿ ಗಾರ್ಡರ ಕ್ಷೇಮ ಸಮಾಚಾರವನ್ನು ವಿಚಾರಿಸಲು ಅವರ ಬಿಡಾರಕ್ಕೆ ತೆರಳಿದೆ.

ಮನೆಯ ಮಕ್ಕಳು ಗಾರ್ಡರಿಗೆ ನಾನು ಬರುವ ಸಮಾಚಾರವನ್ನು ತಿಳಿಸಿರಬೇಕು. ನನ್ನನ್ನು ಕಂಡವರೇ, "ರೈಗಳೇ, ನಿಮ್ಮನ್ನು ನಂಬಿ ಹೆಂಡತಿ ಮಕ್ಕಳಿದ್ದವನು ಬೇಟೆಗೆ ಬರಬೇಕಯ್ಯಾ - ಬಲಿಪನನ್ನು ಬುಡ್ಡಿಯೆಂದು ನಂಬಿಸಿ, ನನ್ನ ಮೂಲಕ ಹೊಡೆಸುತ್ತೀರೆಂದು ನಾನು ಎಣಿಸಿರಲಿಲ್ಲ. ನೀವು ಇಂಥ ಘಾತಕನೆಂದು ಗೊತ್ತಿರಲಿಲ್ಲ ಸ್ವಾಮಿ" ಎಂದು ಹೇಳಿದವರೇ ಶಯನ ಗ್ರಸ್ಥರಂತೆ ಮಲಗಿಬಿಟ್ಟರು. ಇದನ್ನು ಕಂಡು ಹೆದರಿದ ನಾನು ಪುನಃ ಪಂಬದ ಕರಿಯನನ್ನು ಕರೆಸಿ ವಿಭೂತಿ ಮಂತ್ರಿಸಿ, ಮೂರನೇ ದಿನ ಹುಲಿ ಭೂತಕ್ಕೆ ಕೋಲ ಕೊಡುವುದೆಂದು ನಿಶ್ಚಯಿಸಿ ಈಡು ಕಟ್ಟಿ, ಮನೆಯವರಿಗೆ ಧೈರ್ಯ, ಭರವಸೆ ಕೊಟ್ಟು, ಆ ಕೆಲಸಗಳನ್ನೆಲ್ಲ ಮಾಡಿಸಿ ಗಾರ್ಡರು ಹಿಂದಿನ ಸ್ಥಿತಿಗೆ ಬರಬೇಕಾದರೆ ವಾರ ಒಂದು ಹಿಡಿಯಿತು.

ಅಂತೂ ಕೋಲ, ಬಲಿ, ತಂಬಿಲ ಎನ್ನುವಾಗ ನನಗೆ ಸಾಧಾರಣ ಅಂದಿನ ಐವತ್ತು, ಎಪ್ಪತ್ತು ರೂಪಾಯಿ ಖರ್ಚು. ಏಳು ಎಂಟು ಕೋಳಿ ಬಲಿ, ಪಂಬದ ಕರಿಯನಿಗೆ ಹದಿನೈದು ದಿನದ ಜೀವನೋತ್ಪತ್ತಿ ! ಹೇಗಾದರೂ ಗಾರ್ಡರು ಚೇತರಿಸಿಕೊಳ್ಳುವಷ್ಟರಲ್ಲಿ, ನಾನು ಹೊರಿಸಿ ಸುಲಿಸಿ ತೆಗೆದಿಟ್ಟ ಹುಲಿಯ ಚರ್ಮವನ್ನು ತಾಲೂಕು ಆಫೀಸಿಗೆ ಸಲ್ಲಿಸಿ ಹುಲಿ ಚರ್ಮದ ಸಂಭಾವನೆಯನ್ನು ಪಡೆಯಲೆಂದು ಗಾರ್ಡರು ತೆರಳಿದರು. ಮತ್ತೆ ಆ ಗಾರ್ಡರನ್ನು ನಾನು ಕಂಡದ್ದು ಹತ್ತಾರು ವರ್ಷಗಳ ಅನಂತರ ಸುಬ್ರಹ್ಮಣ್ಯದಲ್ಲಿ. ಆ ದಿನ ನನ್ನೊಂದಿಗಿದ್ದವರೊಡನೆ ಬಲಿಪ ಶಿಕಾರಿಯ ಆ ಕತೆಯನ್ನು ಗಾರ್ಡರು ಹೇಳಿದಾಗ ನಾವೆಲ್ಲರೂ ಗತಕಾಲದ ಆ ಪ್ರಸಂಗವನ್ನು ಮತ್ತೊಮ್ಮೆ ನೆನೆದುಕೊಂಡೆವು. ಹಾಗೆ, ಸಂತೋಷದಿಂದ ಸಲ್ಲಾಪಿಸುತ್ತಾ, ನಗುತ್ತಾ ಮಧ್ಯಾಹ್ನದ ಊಟವನ್ನು ಗಾರ್ಡರ ಮನೆಯಲ್ಲೇ ಪೂರೈಸಿದ ಆತ್ಮೀಯ ಸನ್ನಿವೇಶ ಸದಾ ಸ್ಮರಣೀಯವಾಗಿದೆ.

# ಕುಂಞಿಮೋನು ಸಾಹುಕಾರ

ನಮ್ಮ ಊರು - ಬಂಟ್ರ, ನೆಕ್ಕಿಲಾಡಿ, ಕಡಬ, ಕೊಂಬಾರು ಸುಬ್ರಹ್ಮಣ್ಯದ ತನಕ. ಕುಂಞಿಮೋನು ಬ್ಯಾರಿಗಳು ಸತ್ತು ಹತ್ತಾರು ವರ್ಷಗಳಾದರೂ ಅವರದು ಮರೆಯುವ ವ್ಯಕ್ತಿತ್ವವಲ್ಲ. ಪೋಕ್ರಿ ಕುಂಞಿ ಮೋನುವೆಂದೇ ಹಿಂದಿನಿಂದ ಕರೆಯುವುದು ರೂಢಿ. ಗುತ್ತು ಬೀಡಿನವರ ಕೋಣಗಳನ್ನು ಕಂಬಳಕ್ಕೆ ಬಿಡಬೇಕೇ ? ಕುಂಞಿಮೋನು ಬ್ಯಾರಿಯು ಬರಬೇಕು. ಬ್ಯಾರಿಯು ಕನೆಹಲಗೆಯಲ್ಲಿ ನಿಂತ ಕೋಣಗಳು ಏಳೂವರೆ ಕೋಲಿನ ನಿಶಾನಿಗೆ ನೀರು ಹಾಕದಿದ್ದರೂ ಕೊನೆಗೆ ಬಹುಮಾನ ಅವಕ್ಕೇ. ಸಾಹುಕಾರರ ಮಾತಿನ ಥಾಟಿಯಂತಹುದು. ಕೋಣ ಓಡಿದರೆ ಸಾಲದು, ಕೋಣಗಳೊಂದಿಗೆ ಹುರುಳಿ, ಹುರುಳಿಯೊಂದಿಗೆ ಕೋಣನ ಬೆನ್ನ ಮೇಲೆ ಬೆತ್ತ, ಹಿಂದಿನಿಂದ ಕನೆಹಲಗೆಯಲ್ಲಿ ನಿಂತವನ ಉರಾಲಿನೊಂದಿಗೆ ಮಂಜೊಟ್ಟೆ ಇಳಿದು ನಾಲಗೆಯೂ ಓಡಿದರೆ ಕಂಬಳದ ಕೋಣ ಓಡಿದಂತಾ ಗುವುದು. ಇಲ್ಲವಾದರೆ ಕೋಣಗಳು ಓಡಿದರೂ ಪ್ರಯೋಜನವಿಲ್ಲ ಎನ್ನು ವಂತೆಯೇ ಕೃತಿ ಕೂಡಾ - ತೀಡಿದರೆ ಎಣ್ಣೆ ಬರುವಂತಹ ಮಾಂಸಖಂಡ ದಿಂದ ತುಂಬಿದ ಕಪ್ಪಾದ ದೇಹ. ಹುರಿಮೀಸೆ, ಅಂಗಿ ಹಾಕದ ಕಾಲ ಕಣ್ಣಿನವರೆಗೆ ಇಳಿಬಿಟ್ಟ ನಿಲು ಲುಂಗಿ, ಮೈಗೊಂದು ಕೆಂಪು ಸೇಲೆ. ಈ ವ್ಯಕ್ತಿಯನ್ನು ದೂರದಿಂದ ಕಂಡರೂ - "ಸಲಾಮು ಸಾಹುಕಾರ್ರೇ" ಎನ್ನ ದವರು ಅಂದು ಆ ಊರಲ್ಲಿ ಅತಿ ವಿರಳ. ಊರಿನ ಯಾವ ಪಂಚಾ ಯಿತಿಕೆಯೇ ಇರಲಿ, ಗುತ್ತಿನ ಗುರಿಕಾರರು ಕುಂಞಿಮೋನು ಬ್ಯಾರಿಯ ಕೂಡೆ ವಿಷಯ ತಿಳಿಯದೆ ತೀರ್ಪು ಕೊಡುವಂತಿಲ್ಲ. ಕಾರಣ ಒಂದಲ್ಲ ಒಂದು ರೀತಿಯಿಂದ ಈ ಪಂಚಾಯತಿಕೆಯ ಒಳಗುಟ್ಟು ಕುಂಞಿಮೋನು ಅರಿತುದೇ. ಯಾರ ಮನೆಯಲ್ಲಿ ಯಾವುದು ಬೆಂದಿದೆ, ಯಾವುದು ಹಸಿ, ಬಿಸಿ ಎಂದು ಬಂಟ್ರ, ನೆಕ್ಕಿಲಾಡಿ ಗ್ರಾಮಗಳಲ್ಲಿ ಕುಂಞಿಮೋನು ಅರಿತಿಲ್ಲ ವೆಂದಾದರೆ, ಅಂಥಹುದು ನಡೆದಿಲ್ಲವೆಂದೇ ಅರ್ಥ. ಅಂದರೆ ಹಳ್ಳಿ ಗಾದೆಯ ಮಾತಿನಂತೆ - ಮನೆಯ ಒಳಗಿನ ಬೆಕ್ಕು - ಮನೆಯ ಹೊರಗಿನ - ಆ ತುಂಬು

ಮೈಕಟ್ಟಿನ ನೀಳ ದೇಹಕ್ಕೆ ತಕ್ಕುದಾದ ಕಂಚುಕಟ್ಟಿದ ಆಳುಗಾತ್ರದ ನಾಗ ಬೆತ್ತವನ್ನು ಹಿಡಿದು ಕುಂಞಿಮೋನು ಬ್ಯಾರಿ ಎದರು ಬರುತ್ತಿದ್ದರೆ ನೋಡುವ ಕಣ್ಣಿಗೆ ಹಬ್ಬ.

ಇವರಿಗೆ ಹೊಂತಕಾರಿ ಯುವಕರನ್ನು ಉಣ್ಣಲು, ತಿನ್ನಲು ಕೊಟ್ಟು ಮನೆಯಲ್ಲಿ ಸಾಕುವುದೊಂದು ಮೋಜಿನ ಹವ್ಯಾಸ. ಕೊನೆಗೆ ಅವರು ಸಾಕಿದವರೇ ಅವರಿಗೆ ಕೈಕೊಟ್ಟ ಪ್ರಸಂಗಗಳು ಹಲವಾರು. "ನನ್ನ ಅನ್ನವನ್ನು ತಿಂದು ನನ್ನ ಬೀಬಿಗೇ ಎರಡೆಣಿಸಿದೆಯಾ ಮಗನೇ" ಎಂಬ ನಾಣ್ಣುಡಿಯು ಕುಂಞಿಮೋನು ಬ್ಯಾರಿಯ ನುಡಿಮುತ್ತುಗಳು. ಸಾಹುಕಾರರ ಮಾತನ್ನು ಕೇಳುತ್ತಾ ಕುಳಿತರೆ ಗತಿಸಿದ ಕಥೆಯು ಎದುರು ನಡೆಯುವಂತೆ ತೋರುವ ಮಾತುಗಾರಿಕೆ. ದಿವಂಗತ ಬೆಳ್ಳಿಪ್ಪಾಡಿ ಮ್ಯಾಲ ರೈಗಳ - ನಡುಮುಗೇರು ಗುತ್ತು ಅಮ್ಮು ಶೆಟ್ಟರ ಸಾಹಸದ ವೀರಕತೆಗಳನ್ನು, ಪಂಚಾಯಿತಿಕೆಯ ಮೋಡಿಯನ್ನು, ಇವರನ್ನು ಎತ್ತಿ ಕಟ್ಟಿ, ಅವರು ನ್ಯಾಯವಾದಿಗಳು ಎಂದು ಸಾಧಿಸುವ ಮಾತುಗಾರಿಕೆಯನ್ನು ಕುಂಞಿಮೋನು ಬ್ಯಾರಿಯ ಬಾಯಿ ಯಿಂದ ಕೇಳುವುದೆಂದರೆ! ಕೇಳುವವರ ಪಾಲಿಗೆ ಅದೊಂದು ಉತ್ಸವ. ಕೈ ಹಿಡಿದ ಹೆಂಗಸರ ವಿಚಾರವಲ್ಲದೆ ಬೇರೆ ಯಾವ ಹೆಂಗಸರ ವಿಚಾರದಲ್ಲಿ - ಯಾರೇ ಆಗಿರಲಿ, ಅಪಚಾರದ ಮಾತನ್ನು ಆಡಿದನೆಂದರೆ 'ಒರಿ ಅಡಿ' (ಒಂದೇಟು) ತಿಂದು ದವಡೆಯಲ್ಲಿ ಅವರ ಐದು ಬೆರಳಚ್ಚನ್ನೂ ಆತ ಕಾಣದೆ ಹೋಗಲಾರ. ನಾವು ಜವ್ವನಿಗರು, ಧನಿಯ ಮಕ್ಕಳು ಮರೆತು, ತಪ್ಪಿ ಬೇರೆ ಹೆಂಗಸರ ಸುದ್ದಿ ಎತ್ತಿದರೆ ಆ ಕೂಡಲೇ, ದೊಡ್ಡಕ್ಕ ಗಂಡನ ಮನೆ ಯಿಂದ ಬಂದವರು ಪುನಃ ಹೋಗಿರುವರೇ? ಎಂದು ಎಚ್ಚರಿಸದೆ ಬಿಡುತ್ತಿರ ಲಿಲ್ಲ. ಆದುದರಿಂದ ನಾವು ಕೂಡಾ ಅಂಥ ವಿಚಾರಗಳನ್ನು ಏರು ಜವ್ವನದ ಕಾಲದಲ್ಲಿ ಮಾತನಾಡಬೇಕಿದ್ದರೂ ತುಂಬಾ ಜಾಗರೂಕತೆ ವಹಿಸಿಯೇ ಮಾತನಾಡುತ್ತಿದ್ದೆವು. ಸಾಹುಕಾರರು ತೋರಿಸಿದ ಮರದಿಂದ ಎರಡು ಎಳ ನೀರು ತೆಗೆದುಕೊಡುವುದಾದರೆ ಐವತ್ತು ಸಾಮು - ದಂಡ, ಕತ್ತಿವರಸೆ, ಲಾಗು, ಲಳಿ, ತುಳಿ, ತ್ರಿವಳಿ, ವಂಚನೆಗಳನ್ನು ತನ್ನ ಅರುವತ್ತನೆಯ ವಯಸ್ಸಿನಲ್ಲಿಯೂ ತೋರಿಸಿ ನಮ್ಮ ಇಪ್ಪತ್ತು - ಇಪ್ಪತ್ತೆರಡು ವಯಸ್ಸನ್ನು ನಾಚಿಸುವ ರೀತಿ ಕುಂಞಿಮೋನು ಬ್ಯಾರಿಯದ್ದು. ಸಾಮು ಮಾಡಿ

ನಮಗೆ ತೋರಿಸಿ ಎಳನೀರನ್ನು ಕೆತ್ತಿ ಬಾಯಿಗಿಟ್ಟು ದಮ್ಮು ಬಿಗಿದು ಒಂದೇ ಗುಟುಕಿಗೆ ಕುಡಿದು ತೇಗಿ ಮೈಬೆವರು ಒರಸಿಕೊಳ್ಳುವುದನ್ನು ನೋಡುವುದೇ ನೆರೆದವರಿಗೊಂದು ಮೋಜಿನ ಪ್ರಸಂಗ.

ಆದರೆ ಹೊಟ್ಟೆ ತುಂಬಿಸುವ ಪ್ರಮೇಯ ಬಂದಾಗ, ಈ ರೀತಿ ರಿವಾಜು ಗಳನ್ನು ಕೈ ಬಿಡುವ ಪ್ರಸಂಗವೂ ಬರುತ್ತಿತ್ತು. ಶಿಕಾರಿಗೆ ಹೋದಲ್ಲಿ ಹಂಡೆಗಟ್ಟಲೆ ಮಾಂಸ ಬೇಯಿಸಬೇಕಿದ್ದರೆ ಅದಕ್ಕೆ ಬೇಕಾದ ಸಂಬಾರ, ತೆಂಗಿನಕಾಯಿ, ತುಪ್ಪ, ಉಪ್ಪು, ಹುಳಿ, ಮೆಣಸು, ಅಕ್ಕಿ, ಬೆಳಗ್ಗಿನ ಕಾಫಿಗೆ ಬೇಕಾದ ಫಲಾಹಾರ ಹಾಲು ವಗೈರೆಗಳನ್ನು ಹೆದರಿಸಿ ಪುಕ್ಕಟೆಯಾಗಿಯೇ ಪಡೆಯುವಲ್ಲಿ ಈ ಧರ್ಮಶಾಸ್ತ್ರವನ್ನು ಮೀರಿದ ಸಂದರ್ಭಗಳು ಹಲವಾರು. ಇದು ತಪ್ಪಲ್ಲವೆಂದು ಅವರ ಸಮರ್ಥನೆ. ನಾವು ಆ ಊರಿಗೆ ಬೇಟೆಗೆ ಹೋಗುವುದು ಊರವರ ಬೆಳೆರಕ್ಷಣೆಗಲ್ಲವೇ ? ನಾವು ಬೇಟೆಗೆ ಹೊರಟೆ ವೆಂದರೆ ಸಾಹುಕಾರರನ್ನು ಆಹ್ವಾನಿಸದಿದ್ದರೂ ಅವರು ರೆಡಿ. ನನಗೂ ಇವರು ಬಂದರೆ ನಾನು ದುರ್ಜನನಾಗದೆ ನಮಗೆ ಬೇಕಾದ ಸಾಮಾನುಗಳನ್ನು ಪುಕ್ಕಟೆ ಸರಬರಾಜು ಮಾಡುವ ಬೇರೊಂದು ವ್ಯಕ್ತಿ ಮತ್ತಾರು? ಆದ್ದರಿಂದ ನನಗೂ ಸಾಹುಕಾರರನ್ನು ಬಿಟ್ಟು ಬೇಟೆಗೆ ಹೋಗುವುದೆಂದರೆ ಅಷ್ಟಕ್ಕಷ್ಟೆ.

ಅಂತೆಯೆ ಒಮ್ಮೆ ಕೊಂಬಾರಿಗೆ ಶಿಕಾರಿಗೆ ಹೋಗುವ ನಿರ್ಣಯ ವನ್ನು ಮಾಡಿದೆವು. ಕುಂಞಿಮೋನು ಬ್ಯಾರಿಯು ಚೂರಿ ಹಾಕದ ಯಾವ ಪ್ರಾಣಿಯ ಮಾಂಸವನ್ನು ತಿನ್ನುತ್ತಿರಲಿಲ್ಲ. ಮೂರು ಹೊತ್ತು ನಮಾಜನ್ನೂ ಬಿಟ್ಟಿರಲಿಲ್ಲ. ಯಾರ ಮನೆಯಲ್ಲಿಯೂ ಶುಚಿಯಾಗಿದ್ದರೆ ಊಟಕ್ಕೆ ನಿಷೇಧವೂ ಇರಲಿಲ್ಲ. ಆದ್ದರಿಂದ ನಿರುಪದ್ರವಿ. ಆದರೆ ಬರಿಂಕ, ಮೊಲ, ಇತ್ಯಾದಿ ಚಿಕ್ಕ - ನಾಲ್ಕು ಕಾಲಿನ ಪ್ರಾಣಿಗಳ ಮಾತು ಬಿಡಿ, ಕಾಡುಮೇಕೆ, ಜಿಂಕೆಯಂತಹ ಹದ ಪ್ರಾಣಿಗಳು ಸಿಕ್ಕಿದರೂ ಕುಂಞಿಮೋನು ಬ್ಯಾರಿ ಬಿಸ್ಮಿ ಕೊಟತೆಂದರೆ (ಚೂರಿ ಹಾಕುವುದು) ನಮಗೆ ಎರಡೆರಡು ತುಂಡೂ ದಕ್ಕುತ್ತಿರಲಿಲ್ಲ. ಬೇಯಲು ಒಲೆಯ ಮೇಲಿಟ್ಟ ಮಾಂಸ ಕುದಿಬರುವಾಗ ಉಪ್ಪು ಸರಿಯಾಗಿದೆಯೋ, ನೀರು ಬೆರೆಸಿದ್ದು ಸಾಕೋ ? ಬೆಂದುದು ಹದ ವಾಗಿದೆಯೋ ? ಎಂದು ನೋಡಿ ಕೆಳಗಿಡಲು ಆಜ್ಞಾಪಿಸುವಾಗ ಸಾಧಾರಣ ಅರ್ಧ ಮಣ ಮಾಂಸ ಪದಾರ್ಥಕ್ಕೆ ಕೊಟ್ಟಿದ್ದರೂ ನಮಗೆ ದಕ್ಕುತ್ತಿದ್ದುದು

ಒಂದೆರಡು ಎಲುಬಿನ ತುಂಡಿನೊಂದಿಗೆ ಅದರ ಸಾರೇ ಗತಿ. ಈ ಒಂದು ಕಾರಣಕ್ಕಾಗಿ ನಮ್ಮ ಕೂಡುಕಟ್ಟಿನವರಿಗೆ ಸಾಹುಕಾರರನ್ನು ಬೇಟೆಗೆ ಕರೆಯುವುದು ಸಮಾಧಾನವಲ್ಲದ ವಿಷಯ. ಆದರೆ ನನ್ನ ಮಟ್ಟಿಗೆ ಇವರು ಬಂದರೆ ಬಾಕಿ ಖರ್ಚೆಲ್ಲಾ ಪುಕ್ಕಟೆ ನಡೆಯುವುದು ಎಂಬ ಆಸೆಯಿಂದ ನಾನು ಬಿಟ್ಟು ಹೋಗಲು ಸಿದ್ಧನಿಲ್ಲ.

ಸುಬ್ರಹ್ಮಣ್ಯ ಜಾತ್ರೆಯ ಸಮಯ. ಹುಣ್ಣಿಮೆಯಂದು ನಾವು ಕುಲುಕುಂದಕ್ಕೆ ಹೋದವರು, ಜಾನುವಾರು ಮೇಲೆ ಹತ್ತುವ ದಿವಸ ಅಮವಾಸ್ಯೆಯಂದು ಸರ್ಚ್‌ಲೈಟ್ ಶಿಕಾರಿಗೆ ಹೊರಡುವುದೆಂದು ನಿರ್ಣಯ ಮಾಡಿದೆವು. ಹತ್ತು - ಹದಿನೈದು ದಿನ ಮೋಡದೆಡೆಯ ಉರಿಬಿಸಿಲಿನಲ್ಲಿ ತಿರುಗಾಡಿ, ಕೆಸರು ತುಳಿದು ಸಪ್ಪೆ ಊಟ ಮಾಡಿದ ಬಾಯಿಗಳಲ್ಲಿ ಬೇಟೆಯೆಂದೊಡನೆಯೆ ಎಲ್ಲರ ಬಾಯಲ್ಲು ನೀರೂರತೊಡಗಿತು. ನಾನು ಕೋವಿ ಹೆಗಲಿಗೆ ಹಾಕಿ ಲೈಟು ಹಿಡಿದು ಹೊರಟೆನೆಂದರೆ ಬರಿಗೈಯಲ್ಲಿ ಬರುವವನಲ್ಲವೆಂದು ಆ ಕಾಲಕ್ಕೆ ಗಾದೆಯ ಮಾತೇ ಆಗಿತ್ತು. ರೊಟ್ಟಿ ಮಾಡಿಸಿ, ಸಂಬಾರ ಅರೆಯಲು ತಾಯಿ, ಅತ್ತೆಯರಿಗೆ ಹೇಳಿ ಊಟದ ಹೊತ್ತಿಗಾಗುವಾಗ ಮೊಲ, ಬರಿಂಕದ ಮಾತು ಒತ್ತಟ್ಟಿಗಿರಲಿ, ಹಲವಾರು ಸಲ ಒಂಟಿಗ ಹಂದಿಯನ್ನೇ ಹೊಡೆದುಕೊಂಡು ಬಂದು ಅದರ ತೊಡೆಯ ಭಾಗವನ್ನು ಮಾತ್ರ ಕಿತ್ತು ಮನೆಯಲ್ಲಿ ಪದಾರ್ಥ ಮಾಡುವುದಕ್ಕೆ ಕೊಟ್ಟು ಉಳಿದುದನ್ನು ಪಾಲು ಮಾಡಿ ಮರುದಿನ ಊರಿಗೆ ಹಂಚಿದ ಪ್ರಸಂಗಗಳು ಹಲವು.

ಅಂತೆಯೇ ಏಳೆಂಟು ಜನರು ಹೊರಟುದಾಯಿತು. ತನ್ನ ಕಂಚು ಕಟ್ಟಿದ ದೊಣ್ಣೆಯನ್ನೊಮ್ಮೆ ಬಳಿನಿಂತಿದ್ದ ಸಾಂತ ಗೌಡನ ಹೆಗಲ ಮೇಲಿನ ಬೈರವಾಸನ್ನು ಎಳೆದು ತಿಕ್ಕಿ ಲಕಲಕಿಸಿ ತನ್ನ ಎದುರು ಹಲ್ಲಿಲ್ಲದ ಆ ಬೊಚ್ಚು ಬಾಯಿಯನ್ನು ತೆರೆದು ಆಕಳಿಸಿ "ಯಾ ಅಲ್ಲಾ" ಎಂದು ಪ್ರಾರ್ಥಿಸಿ ಮುಂದಾಗಿ ಕುಂಞಾಮೋನು ಶಿಕಾರಿಗೆ ಇಳಿದುದಾಯಿತು. ನಾನೂ ಲೈಟು ಕಟ್ಟಿ ಹಳೆಗೇಟಿನ ದಾರಿಯಾಗಿ ಕೊಂಬಾರಿಗೆ ಹೋಗುವುದೆಂದು ತೀರ್ಪಿತ್ತಿದ್ದೆ. ಅಂದರೆ ಆ ಸಮಯ ಸುಬ್ರಹ್ಮಣ್ಯ ಕುಲುಕುಂದವು ಜನ ಜಾನುವಾರುಗಳಿಂದಲೂ, ಮನುಷ್ಯರ ಗಲಾಟೆಯಿಂದಲೂ, ಮೃಗಗಳಿಗೆ ಭೀತಿಯ ಕೇಂದ್ರವಾಗಿದ್ದರೆ ನೆರೆಯ ಕೊಂಬಾರು ಅವುಗಳಿಗೆ ಆಶ್ರಯಸ್ಥಾನವಾಗಿತ್ತು.

ಆ ಸಮಯ ಮಾವ ಅಳೀರಿ ಗುಡ್ಡಪ್ಪ ರೈಗಳು ಕೊಂಬಾರಿನಲ್ಲಿ ಹೊಸದಾಗಿ ಆಸ್ತಿಯನ್ನು ಖರೀದಿಸಿ ಮನೆ ಕಟ್ಟಿ ನೆಲೆಸಿದ ಕಾರಣ ನಾವೆಷ್ಟು ಜನ ಹೋದರೂ ಊಟಕ್ಕೆ ತೊಂದರೆಯಿಲ್ಲ. ಏಳೆಂಟು ದಿನ ನಿಂತು ಕಾರುಬಾರು ನಡೆಯಿಸುವುದಿದ್ದರೂ ಸೈಯೇ. ಏನಾದರೂ ತೊಂದರೆ, ಗಲಾಟೆ ಸಂಭವಿಸಿದರೂ ಆ ಊರಲ್ಲಿ ಅವರ ಜನಪ್ರಿಯತೆಯಿಂದ ಅದನ್ನು ನಿವಾರಿಸಿಕೊಳ್ಳುವುದು ದುಸ್ತರವಾದುದಲ್ಲ. ಅತ್ತೆಯಂತೂ ಬಂದವರಿಗೆ ಇದ್ದಷ್ಟು ದಿನ ಬೇಯಿಸಿಹಾಕುವ ಧಾರಾಳ ಮನಸ್ಸಿನವರು. ಮತ್ತೇನು ತೊಂದರೆ?

ರಾತ್ರಿ ಮಾರ್ಗದ ಬದಿಗೆ ಲೈಟ್ಟು ಹಾಕುತ್ತಾ ಎರಡು ಮೂರು ಮೈಲು ಮುಂದೆ ಸಾಗಿರಬಹುದು. ಲೈಟಿಗೆ ಕಣ್ಣು ಕೊಟ್ಟ ಎರಡು ಮೊಲಗಳೂ, ಒಂದು ಬರಿಂಕವೂ ನನ್ನ ಕೋವಿಯ ಈಡಿನಿಂದಾಗಿ ಸಾಹುಕಾರರ ಬಿಸ್ಮಿಗೆ ಬಲಿಯಾಯಿತು. ಇನ್ನೇನು? ಮನೆಗಿರುವುದು ಏಳೆಂಟು ಫರ್ಲಾಂಗು ಮಾತ್ರ. ಮನೆಯ ಹತ್ತಿರ ದೊಡ್ಡ ಮೃಗವೇನೂ ಕಾಣಸಿಗದು. ಸಿಕ್ಕಿದುದರಲ್ಲಿ ದೊಡ್ಡಪಾಲು ಸಾಹುಕಾರರ ತೊಳ್ಳೆ ತುಂಬಿಸಲಾಯಿತು. ಕುಲುಕುಂದದಲ್ಲಿ ಹತ್ತು ಹದಿನೈದು ದಿನ ಜಾನುವಾರು ಸಂತೆಯಲ್ಲಿ ಓಡಾಡಿ ದಣಿದ ಬೇಸರ. ಒಮ್ಮೆ ಮನೆ ಸೇರಿದರೆ ಸಾಕೆಂಬ ಆತುರ. ಸಿಕ್ಕಿದ ಮೂರು ಪ್ರಾಣಿಗಳೂ ಬ್ಯಾರಿಯ ಬಿಸ್ಮಿಗೆ ಬಲಿಯಾಗಿ ನಮಗೆ ಬರೇ ನೀರುಸಾರೇ ಗತಿಯೆಂಬ ಕಾತರ. ಮುಂದೆ ಎತ್ತಿ ಹೆಜ್ಜೆ ಹಾಕುತ್ತಾ ಬಂದು ಮಾರ್ಗದ ಬದಿಯ ಮಣ್ಣು ಅಗೆದ ಜಾಗಕ್ಕೆ ಲೈಟಿನ ಬೆಳಕು ಚೆಲ್ಲಿದೆ. ಕಾಣುವುದೇನು? ಸಾಣೆಗಿಕ್ಕಿದ ವಜ್ರದ ಹರಳಿನಂತಹ ಕಣ್ಣುಗಳು ಗಿರಗಿರನೆ ತಿರುಗುತ್ತಿವೆ. ಸ್ವಲ್ಪ ಹತ್ತಿರ ಹೋಗೋಣವೆಂದು ಹತ್ತು ಹೆಜ್ಜೆ ಮುಂದೆ ಬಂದು, ನೋಡುತ್ತೇನೆ. ಪ್ರಾಣಿಯೊಂದು ಮತ್ತೊಂದು ಪ್ರಾಣಿಯನ್ನು ಮೆಟ್ಟಿಕುಳಿತು ಕತ್ತಿನ ಭಾಗವನ್ನು ಕಿತ್ತು ತಿನ್ನುತ್ತಿದೆ. ನನಗೆ ಅರ್ಥವಾಯ್ತು. ಕೋವಿಯಲ್ಲಿ ಮೊದಲೇ ಇಟ್ಟಿದ್ದ L. G. ಯನ್ನು ತೆಗೆದು ಒಂದನೇ ನಂಬ್ರದ ಚರೆ ತೋಟೆಯನ್ನಿಟ್ಟು ತೋರ್ಬೆರಳಿನಿಂದ ಕುತ್ತಿಗೆ ಕೈಯಿಕ್ಕಿ ಮಿಡಿದೆ. 'ಢಮಾಲ್' ಎಂದು ಎಡಬಲದ ಕಾಡುಗಳು ಮಾರ್ದನಿಗೊಟ್ಟೊಡನೆಯೆ ಲೈಟನ್ನು ತಪ್ಪಿಸಿ ತೋಟೆತುಂಬಿಸಲು ಬಗ್ಗಿದೆ.

ಬಳಿಯಲ್ಲಿ ನಿಂತಿದ್ದ ಸಾಹುಕಾರರು ಬೀಳುವೆನೆಂಬ ಗೊಡವೆಯೂ ಇಲ್ಲದೆ ಎಲ್ಲಿಯಾದರೂ ಹೊಡೆದ ಮೃಗವು ಗತಾಸುವಾದರೆ, "ಸತ್ತುದಕ್ಕೆ ಚೂರಿ ಹಾಕಿದ ಬ್ಯಾರಿ" ಎಂದು ನಕ್ಕಾರು ಎಂದು ಓಡಿ ಚೂರಿ ಬಿಡಿಸಿ ಅಂದಾಜಿಗೇ ಕೈಯಿಕ್ಕಿ ಮೃಗದ ಕತ್ತನ್ನು ಹಿಡಿದು ಔಕಿದ್ದೇ ತಡ. "ಯಾ ಅಲ್ಲಾ, ಇದ್ ಎಂದ್‌ಡೆ" (ದೇವರೆ ಇದೇನು?) 'ಧನಿಗಳೇ ಬನ್ನಿ, ಇದು ಬರಿಂಕ ಅಲ್ಲ. ಹುಲಿ ನನ್ನನ್ನು ಹಿಡಿದಿದೆ. ಅಯ್ಯೋ! ಕೈಯನ್ನು ಜಗಿಯುತ್ತಿದೆ. ಎದೆ ಮೆಟ್ಟಿ ಹಿಡಿದಿದೆ. ಸತ್ತೆ; ಅಲ್ಲಾ ಸತ್ತೆ' ಎಂಬ ಬೊಬ್ಬೆ ಆರ್ಭಟೆಯನ್ನು ಕೇಳಿ ಒಡನಿದ್ದವರು ದೂರದೂರವೆ ಹೋದರಲ್ಲದೆ ಹುಲಿ ಹಿಡಿದವನನ್ನು ಬರಿಗೈಯಿಂದ ಬಿಡಿಸಲು ಬರುವ ಹುಚ್ಚರಾರು. ನಾನು ಇದನ್ನು ಕೇಳಿದವನೆ ಹೌಹಾರಿದವನಂತೆ ಓಡಿ ಕೋವಿಯನ್ನು ಎದೆಗೆ ಹಾಕಿ ಲೈಟನ್ನು ಕೂಗುಬರುವಲ್ಲಿಗೆ ಹಾಕಿ ನೋಡುತ್ತೇನೆ, ನಾಯಿ ಹುಲಿಯು ಬ್ಯಾರಿಯ ಬಲಕೈಗೆ ಬಾಯಿಹಾಕಿ ಒಂದು ಹಿಡಿ ಮಾಂಸವನ್ನು ತೆಗೆದು, ಬಿಚ್ಚಿದ ಬಾಯಿಯನ್ನು ಮುಚ್ಚಡೆಯೆ ಪ್ರಾಣ ಬಿಟ್ಟದೆ. ಕುಂಞಿಮೋನುವನ್ನು ನಾನು ಎಳೆದು ಈಚೆಗೆ ನಿಲ್ಲಿಸಿದ್ದೇ ತಡ ಆ ನೀಳ ದೇಹವು ಮಾರ್ಗದಲ್ಲಿಯೇ ಕುಸಿದುಬಿತ್ತು. ಫ್ಲಾಸ್ಕಿನಿಂದ ನೀರು ತೆಗೆದು ಶೈತ್ಯೋಪಚಾರ ಮಾಡಿದ ನಂತರವೇ ಬೋಧ ಬಂದುದು. 'ನಿಂಬಳೆ ಒಕ್ಕೆ ಬನ್ನಾಲಿ ನಿಂಙ ಕೊನ್ನುರು ಸ್ವಾಮಿ' (ನಿಮ್ಮೊಂದಿಗೆ ಬಂದಲ್ಲಿ, ನೀವು ಕೊಲ್ಲಲು ಹೇಸುವವರಲ್ಲ ಸ್ವಾಮಿ) ಇನ್ನು ನನಗೆ ಬಿಸ್ಮಿ ಕೊಟುವ ಕೆಲಸವೇ ಬೇಡ' ಎಂದ ಕುಂಞಿಮೋನು ಬ್ಯಾರಿಯು ಅಂದಿನಿಂದ ಸಾಯುವ ತನಕ ಬೇಟೆಯ ಮೃಗದತ್ತ ಕತ್ತಿ ಕೂಡಾ ಎತ್ತದೆ ತಾನು ಚೂರಿ ಹಾಕಿದ ಮಾಂಸವನ್ನು ತಿಂದಿಲ್ಲವಂತೆ. ಚೇತರಿಸಿದ ಸಾಹುಕಾರರನ್ನು ಇಬ್ಬರು ಮೂವರು ಕೂಡಿ ಆದರಿಸಿ ನಮ್ಮ ಕೊಂಬಾರಿನ ಮನೆ ಬೈಲೋಳಿಗೆ ಬಂದು, ಮಲಗಿದ್ದ ಅತ್ತಿಯನ್ನೂ, ಮಕ್ಕಳನ್ನೂ ಎಬ್ಬಿಸಿದಾಗ ಎದುರಿಗೆ ಕಂಡ ಹುಲಿ ಹಿಡಿದು ರಕ್ತದಿಂದ ತೊಯ್ದು ಈ ರಕ್ಕಸ ಗಾತ್ರದ ಶರೀರವನ್ನು ಕಂಡು ಅವರೂ ಮೂಕವಿಸ್ಮಿತರಾಗಿ ನೋಡುವಾಗ, ಬೇಗಬೇಗನೆ ಕಾಫಿ ಮಾಡಿರೆಂದು ಹೇಳಿ ಸಾಹುಕಾರರಿಗೆ ಕಾಫಿ ಕುಡಿಸಿ ನೆರೆಯ ಮಂತ್ರವಾದಿ ಚೋನು ಪೂಜಾರಿಯನ್ನು ಬರಮಾಡಿ ಹುಲಿಯ ಪಂಜಿನ ಹೊಡೆತದ, ಹಲ್ಲಿನ ಇರಿತದ ನಂಜೇರದಂತೆ

ಮಂತ್ರವಾದ ಮಾಡಿಸಿ, ಬಲಿ ತೆಗೆಸಿ, ಮೊದಲ ಉಪಚಾರವನ್ನು ಮಾಡಿ ಮುಗಿಯುವಾಗ ಹೊಟ್ಟೆಯು ಹಸಿವೆಂದು ಅರಚತೊಡಗಿತು. ಅತ್ತಿಯೊಂದಿಗೆ ಬೇಗ ಬೇಗನೆ ಸಿಕ್ಕಿದ ಮೊಲ ಬರಿಂಕಗಳಿಗೆ ಸಂಬಾರವನ್ನು ಅರೆಯುವಂತೆ ಹೇಳಿ ಸಾಹುಕಾರರನ್ನು ಮಲಗಿಸಿ, ಮೃಗಗಳನ್ನು ಅಜಕ್ಕಳ ಮಾಡಿ ಒಳಗೆ ಕೊಟ್ಟು ಬೇಯಿಸಲು ಹೇಳಿಯಾಯಿತು. ಸಾಹುಕಾರರಿಗೆ ಮಾಂಸವು ನಂಜೆಂದೂ - ಗಂಜಿಯು ಅಜೀರ್ಣವೆಂದೂ ಹೇಳಿ ತೆಳಿಕುಡಿಸಿ ಪ್ರತೀಕಾರ ರೂಪದಲ್ಲಿ ಉಪವಾಸ ಮಲಗಿಸಿ ನಾವು ಹೊಟ್ಟೆ ತುಂಬಾ ಉಂಡು ಮಲಗಲು ಅಣಿಯಾಗುವಾಗ ಕೋಳಿಯು ಕೊ....ಕ್ಕೊ.... ಕ್ಕೋ....ऽऽ ಎಂದು ಕೆಲೆಯಿತು.

ಸಾಹುಕಾರರಿಗೆ ಮರುದಿನದಿಂದ - ಹುಲಿ ಕಚ್ಚಿ ಪರಚಿದ ನಂಜೋ, ಹೆದರಿಕೆಯಿಂದಲೋ ಎಡೆಬಿಡದೆ ಮೂರು ದಿನದ ಜ್ವರ.

ಅನಂತರ ಕೆಲವು ವರ್ಷಗಳು ಕಳೆದು ನಾನು ಪಾಣಾಜೆಯಿಂದ ಊರಿಗೆ ಬಂದುದನ್ನು ತಿಳಿದು ನನ್ನನ್ನು ತನ್ನ ಮನೆಗೆ ಬರಲು ಹೇಳುವಂತೆ, ಕರೆಯಲು ಅವರ ಮಗನನ್ನು ಕಳುಹಿಸಿ ನಾನು ಬಂದುದನ್ನು ಕಂಡ ಸಂಭ್ರಮದಲ್ಲಿ ಕೈಮುಗಿಯುತ್ತಾ "ಧನಿಗಳೇ ಸುಖವಾಗಿದ್ದೀರಾ, ಮಕ್ಕಳು ಕ್ಷೇಮವೇ ನೀವು ಇಲ್ಲಿರುವಾಗ ತಿಂದು ಚೆಲ್ಲಿದ ಮಾಂಸವು ಇಂದು ಹುಡುಕಿದರೂ ದೊರೆಯದು. ಹಲ್ಲೆಲ್ಲಾ ಹೋಗಿ ಜಗಿಯಲು ಸಾಧ್ಯವಿಲ್ಲದಿದ್ದರೂ ನಾಲಗೆಯ ಚಪಲ ಕೇಳುವುದಿಲ್ಲ. ಹೇಗೂ ಬಂದಿರಿ. ನನ್ನ ಆಸೆಯನ್ನು ನೀವು ತೀರಿಸಿಯೇ ಹೋಗಬೇಕು. ನನಗೆ ಮಾಂಸದ ಊಟ ಕೊಡಲು ಇಂದು ನಿಮಗೆ ಮಾತ್ರ ಸಾಧ್ಯ" ಎಂದು ಗೋಗರೆದ. ಆ ಸಮಯ ನಾನು ಶಿಕಾರಿ ಜೀವನಕ್ಕೆ ಇತಿಶ್ರೀ ಹಾಡಿದ್ದೆ. ಮುದಿಪ್ರಾಯದ ಹಳೆಯ ಗೆಳೆಯನ ಆಸೆಯನ್ನು ಪೂರೈಸದಿದ್ದರೆ ನನ್ನ ಘನಸ್ತಿಕೆಗೆ ಕುಂದು. ಹಿಂದೆ ನನ್ನ ಆಸೆ - ಆಮಿಷಗಳನ್ನು ತೀರಿಸುವುದಕ್ಕಾಗಿ ಅವನು ಗೈದ ಗೈಮೆಯನ್ನು ಊಹಿಸುವುದು ಅಸಾಧ್ಯ. ಏನು ಮಾಡೋಣ ?

ನಮ್ಮ ಒಕ್ಕಲು ಚಾಕೊಟೆಕೆರೆ ಅಬ್ಬೋಕರೆ ಬ್ಯಾರಿಯು ಆಡು ಸಾಕುತ್ತಾನೆ. ನಾನು ಒಂದು ಕುಟ್ಟನನ್ನು ಕೇಳಿದರೆ ಕೊಡೆನೆನ್ನ. ನನ್ನ ಮೆಚ್ಚಿನ ಒಡನಾಡಿ. ಏಳೆಂಟು ವರ್ಷಕ್ಕೆ ಪ್ರಾಯದಲ್ಲಿ ಕಿರಿಯ. ಅವನನ್ನು

ಕರೆದು ಒಂದು ಆಡನ್ನು ಚೂರಿಹಾಕಿ ಮಾಂಸ ಮಾಡಿ ತಂದು ಕುಂಞಿ ಮೋನುಬ್ಯಾರಿಯ ಮನೆಗೆ ಕೊಡಬೇಕೆಂದು ಹೇಳಿದ್ದೇ ತಡ. ಆಬ್ಬೋಕರೆಯು ಮರ್ದಾಳ ಮುಕ್ರಿಯನ್ನು ಬರಮಾಡಿ, ಆಡನ್ನು ಚೂರಿ ಹಾಕಿಸಿ, ಮಾಂಸ ಮಾಡಿಸಿ, ಅದರಿಂದ ನಮಗೆ ಬೇಕಾದ ಮಾಂಸವನ್ನು ಕಟ್ಟುಮಾಡಿ ಕಳುಹಿಸಿ ಕೊಟ್ಟು,ನಾನು ಎಷ್ಟು ಒತ್ತಾಯಿಸಿದರೂ ಅದರ ಹಣವನ್ನು ತೆಗೆದುಕೊಳ್ಳದೆ "ಇದು ಅಪರೂಪವಾಗಿ ಬಂದ ನನ್ನ ಧನಿಗೆ ಸಮ್ಮಾನ" ಎಂದು ಹೇಳಿ ಅವನೇ ಅಡಿಗೆ ಮಾಡಿಕೊಟ್ಟು ಮನೆಯಿಂದ ಜೀರಸಾಲೆ ಅಕ್ಕಿಯನ್ನು ತಂದು ನೈಚೋರು ಮಾಡಿ ಕುಂಞಿಮೋನು ಬ್ಯಾರಿಗೆ ಬೇಕಾದಷ್ಟು ಖಲಿಜ, ಬೀಜ, ಮೃದುಮಾಂಸದ ಭಾಗವನ್ನು ಬಡಿಸಿ, ಕುಡಿಯಲು ಎರಡು ನಿಂಬೆಹಣ್ಣಿನ ಶರಬತ್ತು ಕೊಟ್ಟು ತೃಪ್ತಿಪಡಿಸಿದುದಾಯಿತು.

ನಾನು ಮುದಿ ಗೆಳೆಯನನ್ನು ಬೀಳ್ಕೊಂಡು ಬರುವಾಗ ಚಾಪೆಯಿಂದ ಎದ್ದು ಕುಳಿತ ಬ್ಯಾರಿಯು "ಧನೀ, ನೀವು ಇನ್ನೊಮ್ಮೆ ಬರುವಾಗ ನಾನು ಇರುವೆನೋ, ಇಲ್ಲವೋ ಹೇಳಲು ಸಾಧ್ಯವಿಲ್ಲ. ನಿಮಗೆ ದೇವರು ಒಳ್ಳೇದು ಮಾಡಲಿ, ನಿಮ್ಮ ಮಕ್ಕಳು ಸುಖವಾಗಿರಲಿ. ಆಗಬಹುದು ಹೋಗಿಬನ್ನಿ" ಎಂದು ಕಣ್ಣು ಅರಳಿಸಿ ಗದ್ಗದ ಕಂಠದಿಂದ ಹೇಳಿದ ಆ ಮಾತು ಇಂದೂ ಕಿವಿಯಲ್ಲಿ ಗುಂಯ್‌ಗುಡುತ್ತಿವೆ. ಆ ಮುದಿಗಣ್ಣಿಂದ ತೊಟ್ಟಿಕ್ಕುತ್ತಿದ್ದ ಕಣ್ಣೀರ ಹನಿಯು ಕಣ್ಣೆದುರು ಕಾಣುತ್ತಿದೆ. ನಾನು ಕಡಬದಿಂದ ಬಂದ ಕೆಲವು ದಿನಗಳಲ್ಲಿ ನನ್ನ ತಮ್ಮ ಪ್ರಫುಲ್ಲನ ಕಾಗದ ಬಂತು. "ಅಣ್ಣಾ, ನೀವು ಇಲ್ಲಿ ಬಂದು ಹೋದ ಮರುದಿನವೇ ಕುಂಞಿಮೋನು ಬ್ಯಾರಿಗಳು ಹೃತ್ಕ್ರಿಯೆ ನಿಂತು ತೀರಿಹೋದರು" ಎಂದು. ಎದ್ದು ನಿಂತು ಪ್ರಾರ್ಥಿಸಿದೆ. "ಶಾಂತಿಪ್ರದಾಯಕ, ದಯಾಮಯ, ಅಲ್ಲಾಹುವು ಆ ನಿರಾಡಂಬರ ನಿರಕ್ಷರ ಕುಕ್ಷಿ, ಧರ್ಮಭೀರುವಿನ ಆತ್ಮಕ್ಕೆ ಚಿರಶಾಂತಿಯನ್ನು ಕರುಣಿಸಲಿ" ಎಂದು ಮುಖ ಮೇಲೆತ್ತಿ ಪ್ರಾರ್ಥಿಸುತ್ತಿರುವಾಗ ಸಮಾನವ್ಯಸನದ ಮೈತ್ರತ್ವದ ದ್ಯೋತಕವಾಗಿ ಎರಡು ತೊಟ್ಟು ಕಣ್ಣೀರು ತರ್ಪಣರೂಪದಿಂದಲೋ ಎಂಬಂತೆ ಹೊರಜಗುಳಿತು



# ಪಾರಿಭಾಷಿಕ ಶಬ್ದಕೋಶ

| | | |
|---|---|---|
| ಅಜಕ್ಕಲ (ಳ) | = | ಮಾಂಸ ಕತ್ತರಿಸಿ ಪಾಲು ಮಾಡುವುದು |
| ಅಗೆಲು | = | ಎಡೆ ಹಾಕುವುದು, ಭೂತಗಳಿಗೆ ಬಡಿಸುವುದು |
| ಅಂಡೆ | = | ಬಿದಿರಿನ ಬತ್ತಳಿಕೆ |
| ಅಡ್ಡ ಬಲಿಪ್ಪ, ಬಲಿಪ | = | ಹೆಬ್ಬುಲಿ |
| ಆವಾರ | = | ಆಹಾರ |
| ಇಯೆರು | = | ಕಾಡಿನಲ್ಲಿ ಸಿಗುವ ಒಂದು ಜಾತಿಯ ಗಡ್ಡೆ |
| ಈಡು | = | ಗುರಿ, ಮುಡಿಪು |
| ಉಗ್ಗೊದಬ | = | ಮನೆಯ ಯಜಮಾನಿ (ಅನ್ನ ನೀಡುವ ತಾಯಿ) |
| ಉರಾಲು | = | ಹಾಡಿನ ದನಿ |
| ಎತ್ತಿಕಟ್ಟುವ | = | ಬೆರ್ತ್‌ಕಟ್ಟುವ |
| ಎಲ (ಲೆ) ವಸ್ತ್ರ | = | ಮೊಳ ಉದ್ದಗಲದ ಚಚ್ಚೌಕದ ವಸ್ತ್ರ |
| ಒಚ್ಚಿ | = | ಕತ್ತಿ ಮಸೆಯಲು ಉಪಯೋಗಿಸುವ ಮರದ ತುಂಡು |
| ಒಯ್ಯುಲ್ಲಿ | = | ಸೆಳೆತ |
| ಕಡೆಚ್ಚಿಲು | = | ಮರಗೆಲಸದವರು ದುಂಡಗಿನ ರೂಪಕೊಡಲು ಬಳಸುವ ಸಾಧನ |
| ಕಿನ್ನಿ ಬಾಣಾರು | = | ಸಣ್ಣ ಯಜಮಾನರು, ಬ್ರಾಹ್ಮಣರು |
| ಕಿಲೆಂಜಿ | = | ಗುರಿ ನೋಡುವ ಗುರುತು |
| ಕಿಳ್ಳಿ | = | ಅಡಿಕೆ ಮರದ ಹಾಳೆಯಿಂದ ಮಾಡುವ ದೊಡ್ಡ ದೊನ್ನೆ |
| ಕುರ್ದಿ, ಕುರುದಿ | = | ದೃಷ್ಟಿ ನಿವಾಳಿಸಲು ಮಾಡುವ ಅರಸಿನ, ಕುಂಕುಮ ನೀರು |
| ಕುಪ್ಪಿ | = | ಬಾಟಲು |
| ಕೊಡಿದನಿ | = | ಮೊದಲ ದನಿ |
| ಕೊದಿ | = | ಆಸೆ, ಆಸೆಯ ದೃಷ್ಟಿ ತಾಗುವುದು |
| ಕೋಂಟು | = | ಅಡಿಕೆ ಹಾಳೆಯ ಟೊಪ್ಪಿಯ ತುದಿ ಭಾಗ |
| ಕಂತಿದ | = | ಮುಳುಗಿದ |
| ಗರ್ಜಿ | = | ತುರ್ತು |

ಗಾಡಿಗೆ ಬಿರಿಯಿಕ್ಕು = ಗಾಡಿಯು ಮುಂದೆ ಹೋಗದಂತೆ ತಡೆಯುವ ವಿಧಾನ (ಬ್ರೇಕ್)
ಗುತ್ತು = ಸಾಗಾಲೋಟ, ಮರ್ಯಾದೆಯ ಮನೆ
ಗೋಂಕುರು ಕಪ್ಪೆ = ದೊಡ್ಡ ಕಪ್ಪೆ
ಗೆಂಟೆ, ಗೇಂಟೆ = ಸ್ತ್ರೀಯರು ಎದೆ ಮಾತ್ರ ಮುಚ್ಚುವಂತೆ ಕತ್ತಿನ ಹಿಂಭಾಗದಲ್ಲಿ ಗಂಟುಕಟ್ಟುವ ರೀತಿ
ಜಂಬೂಸು = ಜಬ್ಬು
ಜಾಮುಂಗೆ ಕೋವಿ = ಕೇಪಿನ ಬಳಕೆ ಇಲ್ಲದ ಬತ್ತಿಯ ಕೋವಿ
ಜೂಲಿ = ಗೌಸು
ತುಚ್ಚಿ, ಪತ್ತಿ = ಕಚ್ಚಿ, ಹಿಡಿ
ತೆಳಿ = ಗಂಜಿ ನೀರು
ತೆಂಡೆ ಹೊಡೆ = ತೆನೆ ಬಿರಿಯುವುದು
ತೈನಾತಿ = ಆಪ್ತನಾದ ಆಳು, ಸ್ನೇಹಿತ
ತೊಡಂಕು = ಕತ್ತಿಯನ್ನು ಸೊಂಟದಲ್ಲಿ ತೂಗಾಡಿಸುವ ಸಾಧನ
ತಂಬಿಲ = ಭೂತಕ್ಕೆ ಆವಾರ ಕೊಡುವ
ದಾಯ = ಪಾಲು
ದೆಂಗ = ಒಲೆಯ ಮೇಲಿನ ಅಟ್ಟಳಿಗೆ
ನೆರಪ್ಪು = ತಡಿಕೆ
ಪಪ್ಪು = ದನದ ಹೆಣ
ಪಲ್ಕೆ = ಹಡಿಲು ಭೂಮಿ, ಕೃಷಿ ಮಾಡದೆ ಬಿಟ್ಟ ಭೂಮಿ
ಪಿಲಿ = ಹುಲಿ
ಪಾರ್ = ಪರವಾನಿಗೆ ಇಲ್ಲದ
ಪೀನಾರಿ = ಲೋಭಿ
ಪುಂಡಿಕೇನೆ = ಒಂದು ಜಾತಿಯ ಗಡ್ಡೆ
ಪೆಂಡಿ = ವಸ್ತ್ರದ ಗಂಟು
ಬಳ್ಳ = ಏಳು ಸೇರು
ಬರಿಂಕ = ಬರ್ಕ, ಮೊಲದ ಜಾತಿಯ ಚಿಗರೆ
ಬಾಸಿ = ಬಿಧಿರ ನಾರು, ದಬ್ಬೆ
ಬಿಸಾರ್ತಿ(ದಿ)ಗೆ = ಘನತೆ, ವೀರಶ್ರೀ
ಬಿರು, ಪಗರಿ = ಬಿಲ್ಲು, ಬಾಣ
ಬೂಚಿ = ಮುಚ್ಚಳ

ಬೆಡಿ = ಕೋವಿ
ಬೇಡಿ = ಗಂಡಸರು ಕಾಲಲ್ಲಿ ಧರಿಸುವ ಹರಕೆ ಬಳೆ
ಬೋಟಿ = ಮೃಗದ ಕರುಳು
ಬೋಂಟ್ರ = ಬೇಟೆಯ ದಿಗ್ದರ್ಶಕ
ಮದಿಪ್ಪು = ಆಶೀರ್ವಾದ, ದೈವ ದೃಷ್ಟಿ
ಮುಟ್ಟಪ್ಪಾಳೆ,ಮುಟ್ಟಾಳೆ = ಅಡಕೆ ಹಾಳೆಯ ಟೊಪ್ಪಿ
ಮುಂಡುದ್ದ = ಮೊಳದುದ್ದ
ಮೂಕಿ = ಗಾಡಿಯ ಮೂತಿ
ಮೂರ್ತೆ = ಕಳ್ಳು ತೆಗೆಯುವುದು
ಮೋಳ = ಜೋಡಿ
ರೋಟು = ಕಾಲುದಾರಿ
ರಾವು = ರಾಹು
ಸಂಕವಾಳ = ಶಂಖಪಾಲ, ಕಾಳಿಂಗ
ಸಂಧಿ, ಪಾಡ್ದನ = ತುಳು ಜಾನಪದ ಹಾಡುಗಳು
ಸಿರ್ಕ = ಹಲವಾರು ದಿನ ಬಿಸಿಲಿನಲ್ಲಿ ಹುಳಿಯಲಿಟ್ಟ ಕಳ್ಳು
ಸೂಂಟಿಗೆ = ಹಂದಿಯ ಚರ್ಮ
ಹಡಿಲು = ಉತ್ತು ಬಿತ್ತದ ಜಾಗ

---

